# ಹೊಸತು

ನೆಮ್ಮದಿಯ ನಾಳೆ ನಮ್ಮದು

ISSN 2319-7307




ಮೇ ೨೦೧೪
ಬೆಲೆ : ₹ ೧೫

ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್
(1927 – 2014)

# ಹೊಸತು




## ನೆಮ್ಮದಿಯ ನಾಳೆ ನಮ್ಮದು



---


**ಚಿತ್ರಗಳು :** ತನು, ಕಮಲಂ ಅರಸು, ಷಣ್ಮುಖ, ಜಿಎಂಬೊ, ಗೋಪಿ, ವಿ. ಆರ್. ಸಿ. ಶೇಖರ್,

**ಮುಖಪುಟ :** ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್

**ಕೃಪೆ :** ಅಂತರ್ಜಾಲ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಈ ಬಾರಿಯ ಲೋಕಸಭಾ ಚುನಾವಣೆಯು ಬಿಸಿಯಾಗಿದೆ ಮತ್ತು ಬಿರುಸಾಗಿದೆ, ಆದರೆ ಆತಂಕ ಮತ್ತು ನಾಚಿಕೆಯ ಸಂಗತಿ ಏನೆಂದರೆ ಅದು ಬರಿದಾಗಿದೆ ಎಂಬುದು. ಬೈದಾಟಗಳು ತಿಂಗಳಪೂರ್ತಿ ನಡೆದಿವೆ, ಆದರೆ ಅದು ಚುನಾವಣೆಯ ಹಿನ್ನೆಲೆಯಲ್ಲಿ ನಡೆಯಬೇಕಾದ ಅರ್ಥವತ್ತಾದ ಚರ್ಚೆಗಳಿಗೆ ಸೂಕ್ತ ಪರ್ಯಾಯವಲ್ಲ. ಬೈದಾಟವೊಂದರಲ್ಲೇ ಪರಿಣತಿ ಹೊಂದಿರುವ ರಾಜಕೀಯ ನಾಯಕರು ಆಡಳಿತ ಸೂತ್ರವನ್ನು ತಮ್ಮ ಕೈಗೆ ಬರುವಂತೆ ಮಾಡಿಕೊಳ್ಳಲು ಹೊರಟಾಗ ಇಂತಹ ಬೆಳವಣಿಗೆಯು ಸಹಜವಾದ್ದೆ. ಕಳೆದ ಐದು ವರ್ಷಗಳಲ್ಲಿ ದೇಶವು ಅನುಸರಿಸಿದ ಆರ್ಥಿಕ ಅನೀತಿಗಳನ್ನು ಬಯಲಿಗೆಳೆದು ಅವುಗಳ ಜನವಿರೋಧಿ ಪರಿಣಾಮವನ್ನು ಜನರಿಗೆ ಪರಿಚಯಿಸಿ ಅವರ ಆಕಾಂಕ್ಷೆಗಳೇನು ಎಂದು ಕೇಳಬೇಕಾಗಿತ್ತು. ಕಾಂಗ್ರೆಸ್ ಅದನ್ನು ಮಾಡುತ್ತದೆಂದು ನಿರೀಕ್ಷಿಸುವಂತಿರಲಿಲ್ಲ, ಏಕೆಂದರೆ ಅನೀತಿಗಳ ಅಧ್ವರ್ಯು ಸ್ವತಃ ಆ ಪಕ್ಷ. ಭಾರತೀಯ ಜನತಾ ಪಕ್ಷವು ಅವೇ ಅನೀತಿಗಳನ್ನು ಸಮರ್ಥಿಸುವ ಪಕ್ಷ. ಕಳೆದ ಐದು ವರ್ಷಗಳಲ್ಲಿ ಆ ಪಕ್ಷವು ಸಿಂಗ್–ಚಿದಂಬರಂ–ಅಹ್ಲುವಾಲಿಯ–ಆನಂದ ಶರ್ಮ–ವೀರಪ್ಪ ಮೊಯ್ಲಿ–ಕಪಿಲ್ ಸಿಬಲ್ ಮುಂತಾದವರು ದೇಶದ ಜನರ ಮೇಲೆ ಹೇರಿದ ಅಸಹ್ಯ ದೇಶವಿರೋಧಿ ನೀತಿಗಳನ್ನೆಂದೂ ಪ್ರಶ್ನಿಸಲಿಲ್ಲ, ಪರ್ಯಾಯವೊಂದನ್ನು ಮುಂದಿಡಲಿಲ್ಲ. ಆದ್ದರಿಂದ ಆ ಪಕ್ಷವು ಆರ್ಥಿಕ ನೀತಿಗಳ ಗೋಜಿಗೆ ಹೋಗುವಂತಿರಲಿಲ್ಲ. ಈ ಎರಡು ಪಕ್ಷಗಳಲ್ಲಿ ಯಾವುದೋ ಒಂದು ಪಕ್ಷವು ಖಿಚಡಿ ಸರ್ಕಾರವನ್ನು ರಚಿಸುತ್ತದೆನ್ನಿ; ಅದರಿಂದ ಯಾವ ಸಂತಸದ ನಿರೀಕ್ಷೆಯನ್ನಿರಿಸಿಕೊಳ್ಳಬೇಕು ! ಮಮತಾ, ಜಯಲಲಿತಾ, ನವೀನ್ ಪಟ್ನಾಯಕ್, ಚಂದ್ರಬಾಬು ನಾಯಿಡು, ಸ್ಟಾಲಿನ್, ಪಾಸ್ವಾನ್, ಮುಂತಾದವರ ಪಕ್ಷಗಳು ಕಾಂಗ್ರೆಸ್ ಅಥವಾ ಭಾಜಪಕ್ಕೆ ಬೆಂಬಲ ನೀಡಲು ಸಿದ್ಧವಿರುತ್ತವೆ ಎಂಬುದರಲ್ಲಿ ಅನುಮಾನ ಅನಗತ್ಯ. ಅವರಿಗೆ ಸಂಪತ್ತು ಕೊಳ್ಳೆ ಹೊಡೆಯುವ ಅವಕಾಶವಿದ್ದರೆ ಸಾಕು, ಅಧಿಕಾರದ ಸೊಕ್ಕು ಲಭಿಸಿದರೆ ಸಾಕು; ನೀತಿಗಳು ಯಾವ ಪುರುಷಾರ್ಥಕ್ಕೆ! ಮುಲಾಯಂಸಿಂಗ್ ಪಕ್ಷವು ಯಾವ ರೀತಿಯಲ್ಲೂ ಈ ಪಕ್ಷಗಳಿಗಿಂತಲೂ ಭಿನ್ನವಲ್ಲ. ಎಡಪಕ್ಷಗಳು, ಬಹುಜನ ಸಮಾಜ ಪಕ್ಷ ಮತ್ತು ಕೇಜ್ರಿವಾಲ್ ಪಕ್ಷ, ಇವಾದರೂ ಮೌಲ್ಯಯುತ ನಿಲುವುಗಳನ್ನು ತಳೆಯಲು ಸಾಧ್ಯ! ಕೇಜ್ರಿವಾಲ್ ಪಕ್ಷವು ಹಿಂದಿ ಹೆಸರನ್ನಿಟ್ಟು ಕೊಂಡಿರುವುದು ಅಷ್ಟೇನೂ ಯೋಗ್ಯವಲ್ಲ, ಆದರೆ ಜನಪರವಾದ ನಿರ್ಧಾರಗಳಿಗೆ ಬದ್ಧವಾಗಿರುವ ಸಾಧ್ಯತೆಯುಂಟು. ಲೆಕ್ಕಕ್ಕೆ ಬರದೆಹೋಗುವ ಪಕ್ಷಗಳು ಇನ್ನು ಬೇರೆ ಅನೇಕವಿವೆ, ಅವುಗಳ ಸೈದ್ಧಾಂತಿಕ ನಿಷ್ಠೆಯ ಮಾತು ತೀರಾ ಅಪ್ರಸ್ತುತ.

ಆರ್ಥಿಕ ನೀತಿಯನ್ನು ವಿಮರ್ಶಿಸದ ಪಕ್ಷಗಳು (ಕಾಂಗ್ರೆಸ್, ಭಾಜಪ, ಇತ್ಯಾದಿ) ವಿದೇಶಾಂಗ ನೀತಿಯನ್ನು ಕೈಗೆತ್ತಿಕೊಂಡುವೆ ? ಅದೂ ಇಲ್ಲ, ಏಕೆಂದರೆ ಅಮೆರಿಕಾದ ತೆಕ್ಕೆಯಲ್ಲಿರುವುದು ಅವಕ್ಕೆಲ್ಲಾ ಪ್ರಿಯವಾದುದೇ. ದೇಶದ ಸಾರ್ವಭೌಮತ್ವದ ಕಾಳಜಿ ಇಲ್ಲದ ಪಕ್ಷಗಳು ಜನತೆಯನ್ನು ಗೌರವಿಸೀತೆ ? ಸರ್ವಥಾ ಅಸಾಧ್ಯ. ಆದ್ದರಿಂದಲೇ ಮೋದಿಯ 'ಗುಜರಾತ್ ಮಾದರಿ ಅಭಿವೃದ್ಧಿ' ಮತ್ತು ಕಾಂಗ್ರೆಸ್‌ನ 'ಉದಾರ ಖಾಸಗಿ ಬೆಳವಣಿಗೆ' ಪರಸ್ಪರ ವಿರೋಧಿಗಳಾಗದೆ ಒಂದಕ್ಕೊಂದು ಪೂರಕವಾಗಿವೆ. ಒಂದು ಪಕ್ಷಕ್ಕೆ ಅದಾನಿ ಸಾರ್ವಭೌಮನಾದರೆ ಇನ್ನೊಂದು ಪಕ್ಷಕ್ಕೆ ಅಂಬಾನಿಯು ಸಾರ್ವಭೌಮ. ಮೋದಿಗೆ ಮುದ ಮತ್ತು ಮದ ತಂದುಕೊಡುವ ಅದಾನಿ ಒಂದು ಕಡೆ, ಮೊಯ್ಲಿ–ಮನಮೋಹನ್‌ಗೆ ಮತ್ತುತರಿಸುವ ಅಂಬಾನಿ ಇನ್ನೊಂದು ಕಡೆ. ಎರಡು ಬಂಡೆಗಳ ನಡುವೆ ಸಿಲುಕಿ ದೇಶ ಮತ್ತು ಜನತೆ ಚಪ್ಪಟೆಯಾಗಿಹೋಗುವ ಭೀಕರ ದುರಂತ ಕಾದಿದೆ. ಎರಡೂ ಪಕ್ಷಗಳಲ್ಲಿ ಕೋಟ್ಯಧಿಪತಿಗಳು ನಮ್ಮನ್ನು ಚಪ್ಪಟೆಯಾಗಿಸಲು ಲೋಕಸಭೆಗೆ ನುಗ್ಗಲಿದ್ದಾರೆ. ಮಾಧ್ಯಮಗಳೂ ಆ ದಿಕ್ಕಿನಲ್ಲಿ ಕೆಳಮಟ್ಟದ ರಾಜಕೀಯದಲ್ಲಿ ಭಾಗವಹಿಸಿವೆ.

ಈ ಹಿನ್ನೆಲೆಯಲ್ಲಿ ಕೆಲವು ದೊಡ್ಡ ರಾಜಕೀಯ ಪಕ್ಷಗಳು ಅಭ್ಯರ್ಥಿಗಳನ್ನು ಆಯ್ಕೆ ಮಾಡಿರುವ ವಿಧಾನವನ್ನು ಗಂಭೀರವಾಗಿ ಪರಿಶೀಲಿಸಬೇಕು. ಹೆಸರು ಗಳನ್ನು ಹೇಳುವುದು ಬೇಡ, ಆ ಹೆಸರುಗಳನ್ನು ಕಟ್ಟಿಕೊಂಡೇನಾಗಬೇಕು ! ಸಿನಿಮಾ ತಾರೆಯರು, ಫ್ಯಾಶನ್ ಪ್ರಪಂಚದ ಹೆಸರಾಂತ ವ್ಯಕ್ತಿಗಳು, ಯಾವ ಕಾನೂನು

(೭ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯಿದ್ದ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೫ ಸಂಚಿಕೆ-೧೦ ಮೇ ೨೦೧೪

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ–ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಪ್ರಜಾಪ್ರಭುತ್ವದ ಅಳಿವು, ಉಳಿವಿನ ಪ್ರಶ್ನೆ

ಪ್ರಪಂಚದ ಅತಿದೊಡ್ಡ ಪ್ರಜಾಪ್ರಭುತ್ವ ಎಂದು ಹೆಸರಾಗಿರುವ ಭಾರತದ ಹದಿನಾರನೆಯ ಲೋಕಸಭೆಗೆ ಚುನಾವಣೆಗಳು ಮುಕ್ತಾಯಗೊಳ್ಳುತ್ತಿದೆ. ಎಲ್ಲರ ದೃಷ್ಟಿ ಫಲಿತಾಂಶಗಳತ್ತ. ಯಾರು ಅಧಿಕಾರಕ್ಕೆ ಬರುತ್ತಾರೆ, ಯಾವ ಪಕ್ಷ ಯಾವ ತಂಡ ಎಷ್ಟು ಸ್ಥಾನಗಳಿಸುತ್ತದೆ ಎನ್ನುವ ಲೆಕ್ಕಾಚಾರ. ಸಮ್ಮಿಶ್ರ ಸರಕಾರವಂತೂ ನಿಶ್ಚಿತ. ಅರವತ್ತೇಳು ವರ್ಷಗಳಿಂದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಉಳಿಸಿಕೊಂಡು ಬಂದಿದೆ ಭಾರತ. ಆದರೆ ಕಳೆದ ಹದಿನೈದು ಇಪ್ಪತ್ತು ವರ್ಷಗಳ ಪಾರ್ಲಿಮೆಂಟ್ ಕಲಾಪಗಳನ್ನು ಗಮನಿಸಿದರೆ ಪ್ರಜಾಪ್ರಭುತ್ವದ ಮುಂದುವರಿಕೆ ಕುರಿತು ಸಂದೇಹ ಬರುವುದು ಸಹಜ. ಬರಬರುತ್ತ ಪಾರ್ಲಿಮೆಂಟಿನ ಉಭಯ ಸದನಗಳ ಕಲಾಪಗಳಲ್ಲಿ ಚರ್ಚೆಗಿಂತಲೂ ದೊಂಬಿ, ಗಲಾಟೆಗಳಿಗೇ ಹೆಚ್ಚು ಪ್ರಾಶಸ್ತ್ಯ ದೊರೆಯುತ್ತಿದೆ. ಕಲಾಪಗಳನ್ನು ಅಡ್ಡಿಪಡಿಸುವುದೇ ಸದಸ್ಯರ, ಪಕ್ಷಗಳ ಗುರಿಯಾಗುತ್ತಿದೆ. ಇದೀಗ ಅಂತ್ಯಗೊಂಡ ಹದಿನೈದನೆಯ ಲೋಕಸಭೆ ಈ ವಿಷಯದಲ್ಲಿ ದಾಖಲೆ ಸೃಷ್ಟಿಸಿದೆ. ಕಲಾಪಗಳು ನಡೆದಿರುವ ದಿನಗಳೇ ಬಹಳ ಕಡಿಮೆ. ಪ್ರತಿಸಲ ಸದನ ಪ್ರಾರಂಭವಾದಾಗಲೂ ಏನಾದರೊಂದು ಪ್ರಕರಣದ ಜಾಡುಹಿಡಿದು ಕಲಾಪಗಳಿಗೆ ಅಡ್ಡಿಯಾಗುತ್ತಿದೆ. ಪರಿಸ್ಥಿತಿಯನ್ನು ನೋಡಿದರೆ ಪ್ರಪಂಚದ ಮುಂದೆ ತಲೆತಗ್ಗಿಸುವಂತಾಗಿದೆ. ಚರ್ಚೆಗೆ ಬದಲಾಗಿ ಕೈ ಕೈ ಮಿಲಾವಣೆಗೆ, ಕಂಠಶೋಷಣೆಗೆ ಪ್ರಾಮುಖ್ಯತೆ ಬರುತ್ತಿದೆ ಎಂದು ತೋರುತ್ತದೆ. ಇದೇ ಬಗೆಯ ದಾಂಧಲೆಗಳನ್ನು ರಾಜ್ಯ ಶಾಸನಸಭೆಗಳಲ್ಲೂ ಕಾಣುತ್ತಿದ್ದೇವೆ. ಮೊದಲ ಐವತ್ತು ವರ್ಷಗಳ ಕಲಾಪಗಳನ್ನು ಗಮನಿಸಿದರೆ ಸದನದಲ್ಲಿ ಚರ್ಚೆಗೆ ಪ್ರಾಮುಖ್ಯತೆ ಇತ್ತು. ಕಾರ್ಯಕ್ಷಮತೆ ನೂರಕ್ಕೆ ನೂರರಷ್ಟಿತ್ತು. ಎಲ್ಲ ವಿಷಯಗಳ ಮೇಲೂ ಉಪಯುಕ್ತವಾದ ಚರ್ಚೆ ನಡೆಯುತ್ತಿತ್ತು. ದೇಶದ ಬಜೆಟ್, ಮಸೂದೆಗಳು, ವಿದೇಶಾಂಗ ನೀತಿ, ಖಾಸಗಿಯಾಗಿ ಸದಸ್ಯರು ಮಂಡಿಸಿದ ಮಸೂದೆ ಹೀಗೆ ಎಲ್ಲದರ ಮೇಲೂ ಚರ್ಚೆ ಇರುತ್ತಿತ್ತು. ಆಡಳಿತಪಕ್ಷದಲ್ಲೂ ಪ್ರತಿಪಕ್ಷಗಳಲ್ಲೂ ಘಟಾನುಘಟಿಗಳಾದ ವಾಕ್ಪಟುಗಳಿದ್ದು, ಪೂರ್ಣ ಸಿದ್ಧತೆಯಿಂದ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಈಗ ಆ ದಿನಗಳು ಅದೃಶ್ಯವಾಗಿವೆ. ಇಪ್ಪತ್ತಕ್ಕೂ ಹೆಚ್ಚು ವರ್ಷಗಳಿಂದ ಲೋಕಸಭೆಗೆ ಆಯ್ಕೆಯಾಗುತ್ತ ಬಂದಿರುವ ಪಕ್ಷಗಳ ನಾಯಕರುಗಳೇ ಮಾದರಿಯಾಗುವ ಬದಲು ಗಲಾಟೆಗಳಿಗೆ ಪ್ರೇರಕರಾಗುತ್ತಿರುವುದು ಶೋಚನೀಯ, ಖಂಡನೀಯ. ಹದಿನೈದನೇ ಲೋಕಸಭೆಯ ಕಾರ್ಯಕ್ಷಮತೆ ಅರ್ಧದಷ್ಟಕ್ಕೆ ಕುಸಿದಿರುವುದು ವಿಷಾದನೀಯ. ಸರಕಾರ ತರಬಯಸಿದ್ದ, ಮಂಡಿಸಿದ್ದ ೩೨೬ ಮಸೂದೆಗಳ ಪೈಕಿ ೧೭೭ ಮಾತ್ರ ಅನುಮೋದನೆಯಾಗಿವೆ. ಬಹು ಮುಖ್ಯವಾದ ಬಜೆಟ್ ಮೇಲೆ ಕೂಡ ಚರ್ಚೆಯೇ ಆಗದೆ ಕೊನೆಗಳಿಗೆಯಲ್ಲಿ ಗದ್ದಲದಲ್ಲೇ ಅನುಮೋದನೆಯಾಗುವ ಪ್ರವೃತ್ತಿ ಬೆಳೆದಿದೆ.

ಈ ಪರಿಸ್ಥಿತಿ ಬದಲಾದೀತೆ ? ಚುನಾವಣೆಯಲ್ಲಿ ಭಾಗವಹಿಸಿರುವ ಪ್ರಮುಖ ಪಕ್ಷಗಳ ಅಭ್ಯರ್ಥಿಗಳ ಪಟ್ಟಿಯನ್ನು ಗಮನಿಸಿದರೆ ಭರವಸೆಯಿಲ್ಲ. ಏಕೆಂದರೆ ಮುಕ್ಕಾಲು ಪಾಲು ಅಭ್ಯರ್ಥಿಗಳು ಹಳೇ ಮುಖಗಳೇ. ಗೆಲ್ಲುವುದೊಂದೇ ಪರಮಗುರಿಯಾಗಿರುವುದರಿಂದ ಪಕ್ಷಗಳು ಸುರಕ್ಷಿತ ಮಾರ್ಗ ತಳೆದಿವೆ. ಬಹುತೇಕ ಅಭ್ಯರ್ಥಿಗಳು ಕೋಟ್ಯಾಧೀಶರು, ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿರುವವರೂ ಆಗಿದ್ದಾರೆ. ಹಿಂದೆ ಸ್ವಾತಂತ್ರ್ಯ ಹೋರಾಟದಲ್ಲಿ ಕಾರಾಗೃಹ ವಾಸದಲ್ಲಿದ್ದುದು ಅಭ್ಯರ್ಥಿಗಳ ಆಯ್ಕೆಗೆ ಅರ್ಹತೆಯಾಗಿದ್ದರೆ, ಈಗ ಕ್ರಿಮಿನಲ್ ಮೊಕದ್ದಮೆಗಳ ಸಂಖ್ಯೆ ಅದನ್ನು ನಿರ್ಧರಿಸುತ್ತಿರುವ ಹಾಗೆ ತೋರುತ್ತಿದೆ. ಪರಿಸ್ಥಿತಿ ಹಾಗಿರುವಾಗ ಇನ್ನೆಂಥ 'ಜನಪ್ರತಿನಿಧಿ'ಗಳು ಆಯ್ಕೆಯಾಗುತ್ತಾರೆ ! ಇನ್ನು ಚುನಾವಣೆಗಳ ಕಾಲದಲ್ಲಿ ಅಭ್ಯರ್ಥಿಗಳು ಅನುಸರಿಸುವ ಭ್ರಷ್ಟ ಕ್ರಮಗಳಂತೂ ಸಾಂಗೋಪಾಂಗವಾಗಿ ನಡೆಯುತ್ತವೆ. ಚುನಾವಣೆ ವೆಚ್ಚದ ಮೇಲೆ ಚುನಾವಣಾ ಆಯೋಗ ವಿಧಿಸಿರುವ ಮಿತಿ ತೋರಿಕೆಗೆ ಮಾತ್ರ. ಅದು ಆಯೋಗಕ್ಕೂ ಗೊತ್ತು, ಅಭ್ಯರ್ಥಿಗೂ ಗೊತ್ತು. ಆರಿಸಿ ಬರುವವರಲ್ಲಿ ಹೆಚ್ಚಿನವರು ವಾಮಮಾರ್ಗದಿಂದ ಬಂದವರೇ. ಚುನಾವಣಾ ಆಯೋಗ ಈವರೆಗೆ ವಶಪಡಿಸಿಕೊಂಡಿರುವ ನಗದು ಹಣ, ಸರಕುಗಳು ನಿಮಿತ್ತ ಮಾತ್ರ. ಸೋರಿಹೋಗಿರುವುದು ಇನ್ನೆಷ್ಟೋ. ಹಾಗಾಗಿ, ಆಯ್ಕೆಯಾಗುವವರ ಗುಣಮಟ್ಟ ಇನ್ನೆಂಥದ್ದಾದೀತು ?

ಪರಿಸ್ಥಿತಿ ಇನ್ನಷ್ಟು ಹಾಳಾಗದಂತೆ ತಡೆಯಲು, ಪ್ರಜಾಸತ್ತೆಯನ್ನು ಉಳಿಸಲು ಮುಂಬರುವ ಸರಕಾರ ಕೆಲವು ಕ್ರಮಗಳನ್ನು ಕೈಗೊಳ್ಳುವುದು, ಕನಿಷ್ಠವೆಂದರೆ ರಾಜಕೀಯ ಪಕ್ಷಗಳು ಕಲಾಪವನ್ನು ನಿರಂತರವಾಗಿ ಅಡ್ಡಿಪಡಿಸುವುದಕ್ಕೆ ಕಡಿವಾಣ ಹಾಕುವುದು ಅನಿವಾರ್ಯ. ಸರಕಾರದ ಅನೀತಿಗಳನ್ನು ವಿರೋಧಿಸಲು ಇದು ಒಂದು ಪ್ರತಿಭಟನಾಕ್ರಮ ಎನ್ನುವುದು ನಿಜ. ಆದರೆ ಅದಕ್ಕೆ ಒಂದು ಮಿತಿ ಇರಬೇಕು. ಇದನ್ನು ಸ್ವತಃ ಪಕ್ಷಗಳೇ ಘೋಷಿಸಿದರೆ ಉತ್ತಮ. ಮತ್ತೆ ಕಲಾಪಗಳನ್ನು ಅಡ್ಡಿಪಡಿಸುವ ಸದಸ್ಯರ ಮೇಲೆ ಏನಾದರೂ ಕ್ರಮ ಕೈಗೊಳ್ಳುವುದಕ್ಕೆ ನಿಯಮದಲ್ಲಿ ಬದಲಾವಣೆ ಆಗಬೇಕು. ಸದನದ ಗೌರವಕ್ಕೆ, ಪ್ರತಿಷ್ಠೆಗೆ ಧಕ್ಕೆ ತರುವಂಥ ಸದಸ್ಯರ ಮೇಲೆ ಕಠಿಣಕ್ರಮ ಕೈಗೊಳ್ಳುವುದಕ್ಕೆ ಅವಕಾಶ ಕಲ್ಪಿಸಬೇಕು. ಇದಕ್ಕೆ ಅಗತ್ಯವಾದ ಕಾನೂನಿನ ಅಥವಾ ನಿಯಮಗಳ ಪುನರ್ರಚನೆಯಾಗಬೇಕು. ಚುನಾವಣಾ ಸುಧಾರಣೆಗಳ ಕುರಿತು ಈಗಾಗಲೇ ಬೇಕಾದಷ್ಟು ಚರ್ಚೆ ನಡೆದಿದೆ, ನಡೆಯುತ್ತಲೇ ಇದೆ. ಎಂಥ ಸುಧಾರಣೆಗಳನ್ನು ತಂದರೂ ಭ್ರಷ್ಟಾಚಾರ, ಅಕ್ರಮ ತಡೆಯುವುದು

ಕಷ್ಟವೇ. ಆದರೆ ಅದನ್ನು ಮಿತಿಗೊಳಿಸಬಹುದು. ಅತ್ಯಂತ ಜರೂರಾಗಿ ಆಗಬೇಕಾಗಿರುವುದು ಆಯ್ಕೆಯಾಗುವ ಸದಸ್ಯರ ನಡವಳಿಕೆಯನ್ನು ನಿಯಂತ್ರಿಸುವುದಕ್ಕೆ ಸೂಕ್ತ ಕ್ರಮ.

ಯಾವುದೇ ಸರಕಾರ ಅಧಿಕಾರಕ್ಕೆ ಬಂದರೂ ಭ್ರಷ್ಟಾಚಾರ, ಅಕ್ರಮಗಳ ಸರಮಾಲೆ ಇದ್ದೇ ಇರುತ್ತದೆ. ಆಡಳಿತ ವ್ಯವಸ್ಥೆಯಲ್ಲಿ ಸಮಗ್ರವಾದ ಬದಲಾವಣೆ ಆಗುವವರೆಗೆ ಅದನ್ನು ತಡೆಯುವುದು ಸಾಧ್ಯವಾಗದು. ಎಚ್ಚರವಹಿಸಿದರೆ ಅಂಥ ಪ್ರಕರಣಗಳನ್ನು ತಡೆಯಬಹುದು. ಹಿಂದಿನ ಸರಕಾರಗಳ ಪಳೆಯುಳಿಕೆಗಳೇ ಸಾಕಷ್ಟು ಇರುತ್ತವೆ. ಅವುಗಳ ಕುರಿತು ಚರ್ಚೆ ನಡೆದು, ಮುಂದೆ ಅಂಥವು ಸಂಭವಿಸದಂತೆ ಕ್ರಮ ಕೈಗೊಳ್ಳಲು ಸಲಹೆಗಳು, ಸೂಚನೆಗಳು ಬರಬೇಕೇ ಹೊರತು ದಾಂಧಲೆಯಲ್ಲ. ಜನಪ್ರತಿನಿಧಿಗಳನ್ನು ಹಿಂದಕ್ಕೆ ಕರೆಸಿಕೊಳ್ಳುವ ಹಕ್ಕು ಆಯ್ಕೆದಾರರಿಗಿರಬೇಕು ಎನ್ನುವುದು ಸರಿಯೇ. ಅಂಥ ಒಂದು ನಿಯಮ ಬಂದರೆ ಒಳ್ಳೆಯದು, ಸ್ವಾಗತಾರ್ಹವಾದ್ದು. ಕನಿಷ್ಠವೆಂದರೆ ಹದ್ದುಮೀರಿ ವರ್ತಿಸುವ ಸದಸ್ಯರ ಮೇಲೆ ಕ್ರಮ ಕೈಗೊಳ್ಳಲು ಏನಡ್ಡಿ? ಪ್ರಜಾತಂತ್ರದ ಉಳಿವಿಗೆ, ಮುಂದುವರಿಕೆಗೆ ಅದು ಅಗತ್ಯ.

## ಜನತೆಯ ಚುನಾವಣಾ ಪ್ರಣಾಲಿಕೆ

ಲೋಕಸಭೆಯ ಚುನಾವಣೆಯ ಪ್ರಕ್ರಿಯೆ ಒಂದೂವರೆ ತಿಂಗಳಾದರೂ ಇನ್ನೂ ಮುಗಿದಿಲ್ಲ. ಪ್ರಪಂಚದ ಯಾವ ದೇಶದಲ್ಲೂ ಪಾರ್ಲಿಮೆಂಟ್ ಚುನಾವಣೆಯು ಇಷ್ಟೊಂದು ದಿನ ನಡೆಯುವುದಿಲ್ಲ. ಅಷ್ಟಾಗಿಯೂ ಸಾಧನೆಯ ದೃಷ್ಟಿಯಿಂದ ಯಾವ ಮೌಲಿಕ ಉತ್ತಮಿಕೆಯೂ ಕಂಡುಬಂದಿಲ್ಲ, ಬದಲಾಗಿ ಕೋಟ್ಯಾಧೀಶರ ದುಂದುಭಿ ಕರ್ಕಶವಾಗಿ ಮೊಳಗುತ್ತಿದೆ. ಭಿತ್ತಿ ಪತ್ರಗಳನ್ನು, ಘೋಷಣೆ ಕೂಗುತ್ತಾ ಮತ ಕೇಳುವುದನ್ನು, ಕರಪತ್ರಗಳನ್ನು ಎಲ್ಲೆಂದರಲ್ಲಿ ಹಂಚುವುದನ್ನು, ರದ್ದುಪಡಿಸಿದರು; ಪ್ರಚಾರ ಸಭೆಗಳನ್ನು ನಡೆಸುವುದು ಕಷ್ಟವಾಗುವಂತಹ ನಿಯಮಗಳನ್ನು ಹೇರಿದರು; ಹಣ–ಹೆಂಡ ನಿಯಂತ್ರಿಸುವುದಾಗಿ ಅಬ್ಬರ ಮಾಡಿದರು. ಆದರೆ ಅದರಿಂದ ಸ್ವಾಗತಾರ್ಹ ಬದಲಾವಣೆ ಕಂಡುಬಂದಿಲ್ಲ. ದೇಶದಲ್ಲಿ ದೀನರು, ಅನಕ್ಷರಸ್ಥರು, ಇಷ್ಟೊಂದು ಪ್ರಮಾಣದಲ್ಲಿದ್ದಾರೆಂದು ನಮಗೆ ನಾಚಿಕೆಯಿಲ್ಲ, ಆದರೆ ಅವರ ಮತ ಕೇಳಲು ಘೋಷಣೆ ಕೂಗಬಾರದು! ಅಮೆರಿಕೀಕರಣವು ಚುನಾವಣೆ ನಡೆಯುವ ರೀತಿಯಲ್ಲೂ ಬೆಳೆದಿದೆ. ಆದರೆ ನೆಲಮಂಗಲದ ಬಳಿ ಅಡಕಮಾರನಹಳ್ಳಿಯ ಮತಕಟ್ಟೆಯ ಹೊರಗೆ, ಮತ ಚಲಾಯಿಸಿ ಬಂದವರಿಗೆ ಎಲ್ಲರ ಸಮ್ಮುಖದಲ್ಲೇ ಹಣ ಹಂಚಲಾಗುತ್ತಿತ್ತು. ಅದನ್ನು ಪೊಲೀಸರು ಕಂಡಿದ್ದಾರೆ, ಛಾಯಾಚಿತ್ರಗಳೂ ಇರಬಹುದು ಮತ್ತು ತಹಶೀಲ್ದಾರರನ್ನು ಮತಕಟ್ಟೆಯ ಬಳಿಗೆ ಕರೆತರಲಾಯಿತು ಎನ್ನಲಾಗಿದೆ. ಯಾರದೋ ಕೈಕುಲುಕಿ ಅವರು ನಿರ್ಗಮಿಸಿದ್ದಿರಬಹುದು. ದೇಶದ ಲಕ್ಷಗಟ್ಟಲೆ ಮತಕಟ್ಟೆಗಳ ವಾಸ್ತವ ಸನ್ನಿವೇಶ ಇದು. ಆದರೆ ನಮಗೆ 'ಚುನಾವಣೆ ಸಂಹಿತೆ' ಇದೆ! ಅದರ ಪ್ರಕಾರ ಆಶ್ವಾಸನೆ ನೀಡಬಾರದು, ಚರಂಡಿ ಶುದ್ಧಗೊಳಿಸಬಾರದು, ನೀರಿಲ್ಲದವರಿಗೆ ನೀರು ಸರಬರಾಜು ಮಾಡಬಾರದು, ಅಕಾಲಿಕ ಮಳೆಯಿಂದ ಬೆಳೆ ನಾಶವಾದೆಡೆ ಪರಿಹಾರ ಒದಗಿಸಬಾರದು. ಹಾಗೆಲ್ಲಾ ಮಾಡಿದರೆ ಅದು "ಆಮಿಷ" ಒಡ್ಡಿದಂತೆ. ಆನೆಯ ಚಿತ್ರವಿದ್ದರೆ ಅದಕ್ಕೆ ಮುಸುಕು ಹಾಕುತ್ತಾರೆ, ಅದನ್ನು ನೋಡಿದವರು ಆ ಪ್ರಾಣಿಯ ಗುರುತಿಗೆ ಮತ ಹಾಕಿಬಿಟ್ಟಾರೆಂಬ ಎಚ್ಚರಿಕೆ! ನೀರಿಲ್ಲದ ಹಳ್ಳಿಗೆ ಹೋಗಿ ನೀರು ಕೊಡುತ್ತೇವೆಂದು ಹೇಳಿದರೆ ಜನರಿಗೆ ಆಮಿಷ ಒಡ್ಡಿದಂತೆ, ಆದರೆ ಚುನಾವಣೆ ಹಂತ ಹಂತವಾಗಿ ಆರಂಭಗೊಂಡ ನಂತರ ಭಾರತೀಯ ಜನತಾ ಪಕ್ಷವು "ರಾಮಮಂದಿರ ಕಟ್ಟಿಯೇ ಕಟ್ಟುತ್ತೇವೆ" ಎಂದು ಹೇಳಿದರೆ ಅದು ಆಮಿಷವಲ್ಲ! ಇದು ಚುನಾವಣಾ ಆಯೋಗದ ಜಾಣ ಮೂರ್ಖತನ ಎನಿಸುತ್ತದೆ. ನಮ್ಮ ದೇಶದ ಮತದಾರರಲ್ಲಿ ಬಡವರಿದ್ದಾರೆ, ಅನಕ್ಷರಸ್ಥರಿದ್ದಾರೆ; ಆದರೆ ಚುನಾವಣಾ ಆಯೋಗದ ಸದಸ್ಯರಷ್ಟು ಅವಿವೇಕಿಗಳಲ್ಲ ಅವರು. ಅಂಬಾನಿಗೆ ಮೊಯಿಲಿ ಅಥವಾ ಅದಾನಿಗೆ ಮೋದಿ ದಾಕ್ಷಿಣ್ಯಪರರಾಗುವಂತೆ ನಮ್ಮ ಮತದಾರರು ಅಷ್ಟೊಂದು ದಾಕ್ಷಿಣ್ಯಗಳಿಗೆ ಕಟ್ಟುಬಿದ್ದಿಲ್ಲ. ಜಾತಿಯ ಸೆಳೆತ ಇರಬಹುದು, ಹಣವನ್ನು ಪಡೆಯುವವರಿರಬಹುದು, ಆದರೆ ಮುಲಾಜಿಗೆ ಮತ ಹಾಕುವವರು ಕಡಿಮೆ. ಅಮೆರಿಕಾದಿಂದ ಬಂದು ನೀಲೆಕಣಿಯ ಪರ ಪ್ರಚಾರ ಮಾಡಿದವರಿಗೆ ಪ್ರತಿಫಲಾಪೇಕ್ಷೆ ಇಲ್ಲವೆಂಬುದು ಖಾತ್ರಿಯಾಗಿದೆಯೇನು? ಒಟ್ಟಿನಲ್ಲಿ ನೀತಿ ಮತ್ತು ಅವುಗಳ ಅನುಷ್ಠಾನವನ್ನು ಚರ್ಚಿಸದೆ ಐವತ್ತು ದಿನಗಳ ಚುನಾವಣೆ ಪ್ರಕ್ರಿಯೆ ನಡೆದುಬಿಟ್ಟರೆ ಅದು ನೇರ ಪ್ರಜಾಪ್ರಭುತ್ವವೆಂಬ ಮೂರ್ಖತನವನ್ನು ಮನಸ್ಸಿನಿಂದ ಹೊರಹಾಕಬೇಕು ಮತ್ತು ಜನರು ಆರ್ಥಿಕ ನೀತಿಗಳನ್ನು ಪ್ರಶ್ನಿಸುವ ವಾತಾವರಣ ಬೇಕು.

ಚುನಾವಣೆಗೆ ಮುನ್ನ (ಮತ್ತು ಭಾರತೀಯ ಜನತಾ ಪಕ್ಷವಾದರೆ ಚುನಾವಣೆ ಆರಂಭಗೊಂಡ ನಂತರ) ರಾಜಕೀಯ ಪಕ್ಷಗಳು ತಮ್ಮ ಪ್ರಣಾಲಿಕೆಗಳನ್ನು ಪ್ರಕಟಿಸುತ್ತವೆ. ಸ್ವರ್ಗವನ್ನು ಧರೆಗಿಳಿಸಲು ಏನೇನು ಮಾಡುತ್ತಾರೆಂಬ ನೀತಿ ಮತ್ತು ಕಾರ್ಯಕ್ರಮ ಪ್ರಣಾಲಿಕೆಯಲ್ಲಿರುತ್ತವೆ. ಕಳೆದ ಚುನಾವಣೆಯ ಸಂದರ್ಭದ ಪ್ರಣಾಲಿಕೆಯನ್ನು ಚುನಾವಣಾ ಆಯೋಗವು ಮರು ಪ್ರಕಟಿಸಿ ಸೂಕ್ತ ಟಿಪ್ಪಣಿಗಳನ್ನು ಮತದಾರರಿಗೆ ಒದಗಿಸುವುದು ಒಳ್ಳೆಯ ಮಾದರಿಯಾದೀತು. ಪಕ್ಷಗಳ ಪ್ರಣಾಲಿಕೆಗಳೆಲ್ಲಾ ಜನತೆಯ ಪ್ರಣಾಲಿಕೆಗಳಲ್ಲ. ಉದಾಹರಣೆಗೆ, ಮೋದಿಯವರ "ಅಭಿವೃದ್ಧಿ" ನಕಾಶೆ, ಕಾಂಗ್ರೆಸ್ ಮತ್ತು ಭಾಜಪಗಳ "ವಿದೇಶಿ ಬಂಡವಾಳದ



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ *ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ *ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ ೦೮೪೭೨-೨೨೪೩೦೨

ನೇರ ಹೂಡಿಕೆ" ಮತ್ತು ಸಾರ್ವಜನಿಕ–ಖಾಸಗಿ ಜಂಟಿ ಪಾಲುದಾರಿಕೆ, ಇತ್ಯಾದಿ. ಮುಂದಿನ ಐದು ವರ್ಷಗಳಲ್ಲಿ ದೇಶದ ಆಗುಹೋಗುಗಳನ್ನು ದಿನಂಪ್ರತಿ ಗಮನಿಸುತ್ತಾ ಅಗತ್ಯಬಿದ್ದಾಗ ಮಧ್ಯಪ್ರವೇಶ ಮಾಡಲು ಜನತೆಯು ತನ್ನದೇ ಒಂದು ಪ್ರಣಾಲಿಕೆಯನ್ನು ಇರಿಸಿಕೊಂಡಿರುತ್ತದೆ. ಆ ಪ್ರಣಾಲಿಕೆಯು ಜನವಿರೋಧಿ ಕಾರ್ಯಕ್ರಮಗಳನ್ನು ಮಾನ್ಯ ಮಾಡುವುದಿಲ್ಲ, ದೇಶದ ಸಾರ್ವಭೌಮತ್ವವನ್ನು ಗೌಣಗೊಳಿಸುವುದನ್ನು ಸಹಿಸುವುದಿಲ್ಲ. ಪ್ರಸ್ತುತ ಚುನಾವಣೆಯ ನಂತರದ ಕಾಲದಲ್ಲಿ ಜನತೆಯ ನಿರೀಕ್ಷೆಗಳು ಏನಾಗಿರುತ್ತವೆಂಬುದನ್ನು ಸಮಗ್ರವಾಗಿ ಪಟ್ಟಿ ಮಾಡುವ ಅಗತ್ಯವಿಲ್ಲ, ಆದರೆ ಮೂಲಭೂತ ಕನಿಷ್ಠ ನೀತಿ–ನಿಲುವುಗಳನ್ನು ಸ್ಪಷ್ಟವಾಗಿ ನಿರೂಪಿಸಬೇಕು. ಯಾವುದೇ ಪಕ್ಷ ಅಥವಾ ಪಕ್ಷಗಳು ಕೇಂದ್ರದಲ್ಲಿ ಸರ್ಕಾರ ನಡೆಸುವ ಹೊಣೆ ಹೊರಲಿ, ಅವು ನಮ್ಮ ನೂರು ಕೋಟಿ ಜನರ ಆಶಯ ಮತ್ತು ಪ್ರತಿಷ್ಠೆಗಳನ್ನು ಮಣ್ಣು ಮಾಡಕೂಡದು. ಅಂತಹ ನಿಶ್ಚಯವಾದ ನೀತಿಗಳಲ್ಲಿ ಪ್ರಮುಖವಾದ ಕೆಲವನ್ನು ಗಟ್ಟಿಯಾಗಿ ಉಚ್ಚರಿಸೋಣ :

(ಅ) ದೇಶದ ಆರ್ಥಿಕ ಸ್ವಾಯತ್ತತೆಯನ್ನು ಶತಾಯ ಗತಾಯ ಕಾಪಾಡಬೇಕು; ಸ್ವದೇಶಿ ಮತ್ತು ವಿದೇಶಿ ಬಂಡವಾಳಿಗರೆಂಬ ಭೇದವಿಲ್ಲದೆ ಸಾರ್ವಜನಿಕ ಹಿತಕ್ಕೆ ಮಾರಕವಾಗುವಂತಹ ಎಲ್ಲ ಕ್ರಮಗಳನ್ನೂ ಸಂಪೂರ್ಣವಾಗಿ ನಿಷೇಧಿಸಬೇಕು. ಅಂದರೆ, ಅಭಿವೃದ್ಧಿಯ ಹೆಸರಿನಲ್ಲಿ ರೈತರ ಭೂಮಿಯನ್ನು ಕಸಿದುಕೊಳ್ಳುವುದು, ಸರ್ಕಾರದ ಭೂಮಿಯನ್ನು ಖಾಸಗಿಯವರಿಗೆ ಮಾರುವುದು, ಸಾರ್ವಜನಿಕರಂಗದ ಉದ್ದಿಮೆಗಳನ್ನು ಖಾಸಗಿಯವರಿಗೆ ಹಸ್ತಾಂತರಿಸುವುದು, ಹೊರಗುತ್ತಿಗೆಯ ಮುಸುಕಿನಲ್ಲಿ ಸಾರ್ವಜನಿಕ ಕಾರ್ಯಕ್ಷೇತ್ರವನ್ನು ತುಂಡರಿಸುವುದು, ಇಂಥವೆಲ್ಲಾ ಸರ್ವಥಾ ಕೂಡದು. ದೂರವಾಣಿ, ರೈಲ್ವೆ, ತೈಲೋತ್ಪಾದನೆ, ಇತ್ಯಾದಿ ಕ್ಷೇತ್ರಗಳ ಕಿಂಚಿತ್ತು ಸಾರ್ವಜನಿಕ ಆಸ್ತಿಯನ್ನೂ ಯಾವುದೇ ಕಾರಣಕ್ಕೂ ಖಾಸಗಿಗೆ ವರ್ಗಾಯಿಸಕೂಡದು. (ಆ) ಸಾರಿಗೆ–ಆರೋಗ್ಯ–ಶಿಕ್ಷಣ–ವಸತಿ ಮುಂತಾದ ಸಾರ್ವಜನಿಕ ಅಗತ್ಯಗಳ ಪೂರೈಕೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಭಾಗವಹಿಸುವಿಕೆಯನ್ನು ರದ್ದುಗೊಳಿಸಕೂಡದು, ಹ್ರಸ್ವಗೊಳಿಸಕೂಡದು. (ಇ) ಸಂಸ್ಕೃತಿ, ಶಿಕ್ಷಣ ಮತ್ತು ಸಂಶೋಧನೆಗಳಿಗೆ ಸಂಬಂಧಿಸಿದಂತೆ ಅಚಾರಿತ್ರಿಕವಾದ್ದು, ಅವೈಚಾರಿಕವಾದ್ದು ಮತ್ತು ಅವೈಜ್ಞಾನಿಕವಾದ್ದು ಯಾವುದೇ ಸ್ವರೂಪದಲ್ಲೂ ಪೋಷಣೆ ಮತ್ತು ರಕ್ಷಣೆ ಪಡೆಯಕೂಡದು. ಈ ವಿಷಯದಲ್ಲಿ ವ್ಯಕ್ತಿ, ಕುಟುಂಬ ಮತ್ತು ಸಮುದಾಯ ತಮ್ಮ ಸಾಂಪ್ರದಾಯಿಕ ಆಚರಣೆಗಳನ್ನು ಮುಂದುವರಿಸಿಕೊಳ್ಳಲು ಪ್ರತಿಬಂಧಕವಿರಕೂಡದು; ಆದರೆ ಅದು ಸರ್ಕಾರಿ ಅಥವಾ ಸಾರ್ವಜನಿಕ ವಲಯದಲ್ಲಿ ಪ್ರವೇಶ ಮಾಡುವಂತಾಗಕೂಡದು. (ಈ) ಹೋಬಳಿ, ತಾಲ್ಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಸಾರ್ವಜನಿಕ ಆರೋಗ್ಯ ಸಂಸ್ಥೆಗಳು ಹೆಚ್ಚಿನ ಮಟ್ಟದಲ್ಲಿ ಸ್ಥಾಪನೆಯಾಗಬೇಕು ಮತ್ತು ಅವುಗಳ ಸೇವೆಯನ್ನು ವಿಚಕ್ಷಣೆಯಿಂದ ಸಾರ್ವಜನಿಕರಿಗೆ ದೊರಕಿಸಿಕೊಡಬೇಕು. ಈವರೆಗೆ ಇದ್ದು, ಈಚೆಗೆ ಮುಚ್ಚಲಾಗಿರುವ ಅಂತಹ ಎಲ್ಲ ಆರೋಗ್ಯ ಸೇವಾ ಸಂಸ್ಥೆಗಳನ್ನು ಮತ್ತೆ ಕೂಡಲೆ ತೆರೆಯಬೇಕು, ಸೇವೆ ಒದಗಿಸಬೇಕು. (ಉ) ಕೃಷಿ ಭೂಮಿಯನ್ನು ರೈತರಿಂದ ವಿವಿಧ ರೂಪಗಳಲ್ಲಿ ಕಸಿದುಕೊಳ್ಳುವ ಹುನ್ನಾರಗಳಿಗೆ ಸೊಪ್ಪು ಹಾಕಕೂಡದು. ಸ್ವದೇಶಿ ಮತ್ತು ವಿದೇಶಿ ಕಾರ್ಪೊರೇಟ್ ಉದ್ಯಮಗಳು ಕೃಷಿಕ್ಷೇತ್ರವನ್ನು ತಮ್ಮದಾಗಿಸಿಕೊಳ್ಳಲು ಅವಕಾಶ ನೀಡಕೂಡದು. ಕೃಷಿಸಂಬಂಧಿ ವೈಜ್ಞಾನಿಕ ಸಂಶೋಧನೆಗಳಿಂದ ಪ್ರಮಾಣಿತವಾಗಿರದ ಯಾವುದೇ ಕೃಷಿವಿಧಾನವನ್ನೂ ರೈತರ ಮೇಲೆ ಹೇರಕೂಡದು. ಅಂದರೆ, ಕುಲಾಂತರಿ ಬೆಳೆ, ಮೊನ್ಸಾಂಟೊವಿನಂತಹ ಕಂಪನಿಗಳ ಹಿಡಿತ, ಮುಂತಾದುವನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಬೇಕು. (ಊ) ನೀರಿನ ಆಸರೆಗಳನ್ನು ನಾಶ ಮಾಡುವ, ನದಿಗಳನ್ನು ಕಲುಷಿತಗೊಳಿಸುವ, ಯಾವುದೇ ಕ್ರಮವನ್ನೂ ತಡೆಗಟ್ಟಬೇಕು ಮತ್ತು ಪ್ರತಿಯೊಂದು ಹಳ್ಳಿ ಹಾಗೂ ವ್ಯಕ್ತಿಗೂ ಕನಿಷ್ಠ ಅಗತ್ಯಕ್ಕೆ ಚ್ಯುತಿ ಬಾರದಂತೆ ನೀರನ್ನು ಸರಬರಾಜು ಮಾಡಲೇಬೇಕು. (ಋ) ಗಣಿ, ಕಾಡು, ತೈಲಾನಿಲ ನಿಕ್ಷೇಪ, ಇವಾವುವೂ ಖಾಸಗಿಯ ಆಸ್ತಿಯಾಗಕೂಡದು ಮತ್ತು ಪರಿಸರಕ್ಕೆ ಹಾನಿಯಾಗದಂತೆಯೇ ಸಾರ್ವಜನಿಕ ವಲಯದಲ್ಲಿ ರೂಢಿಸಿಕೊಳ್ಳಲು ಸಾಧ್ಯವಾಗಬೇಕು. (ೠ) ನೈಸರ್ಗಿಕ ಸಂಪನ್ಮೂಲಗಳನ್ನು ಕಚ್ಚಾ ಸಾಮಗ್ರಿಯ ರೂಪದಲ್ಲಿ ರಫ್ತು ಮಾಡಕೂಡದು; ಬದಲಾಗಿ ಸ್ವಕೀಯವಾಗಿ ಅವುಗಳ ಮೌಲ್ಯವರ್ಧನೆ ಮಾಡಿ ಜನಪರವಾದ ರೀತಿಯಲ್ಲಿ ವಿತರಣೆ ಮಾಡಬೇಕು. (ಎ) ಉದ್ಯೋಗವನ್ನರಸಿಕೊಂಡು ಲಕ್ಷಗಟ್ಟಲೆ ಜನ ಸ್ವ–ಪ್ರದೇಶದಿಂದ ಹೊರಹೋಗಬೇಕಾದ ಪರಿಸ್ಥಿತಿಯನ್ನು ನಿವಾರಿಸುವುದು ಆದ್ಯತೆಯ ವಿಷಯವಾಗಬೇಕು. (ಏ) ದೇಶದ ಬಹುಮುಖೀ ಸಂಸ್ಕೃತಿಗೆ ಕುತ್ತುಂಟು ಮಾಡುವ ಯಾವ ಕ್ರಮವನ್ನೂ ಕೈಗೊಳ್ಳಕೂಡದು. ಹಿಂದಿಯ ಹೇರಿಕೆ, ಸಮೂಹ ಮಾಧ್ಯಮಗಳ ಅನೈತಿಕ ಮತ್ತು ಅಸಾಂಸ್ಕೃತಿಕ ಪ್ರವೃತ್ತಿ, ಪಠ್ಯಪುಸ್ತಕಗಳ ರಚನೆ, ಇತ್ಯಾದಿಗಳೆಲ್ಲಾ ಇದರಡಿ ಬರುತ್ತವೆ. (ಐ) ವಿದೇಶಾಂಗ ವ್ಯವಹಾರದಲ್ಲಿ ಸ್ವತಂತ್ರವಾದ ನಿಲುವನ್ನು ತಾಳುವ ನಿಷ್ಠೆಯನ್ನು ತೋರಬೇಕು. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಖಾಯಂ ಸದಸ್ಯತ್ವ ಪಡೆದು ಸದಾ ಅನೈತಿಕವಾಗಿ ಅಮೆರಿಕಾ ಪರವಾದ ನಿಲುವನ್ನು ಸಮರ್ಥಿಸುವುದು ನಮ್ಮ ದೇಶದ ಸಾರ್ವಭೌಮತ್ವಕ್ಕೆ ಧಕ್ಕೆಯುಂಟು ಮಾಡುತ್ತದೆಯೆಂಬುದನ್ನು ಮರೆಯಕೂಡದು; ಅಲಿಪ್ತ ನೀತಿಯು ನೈತಿಕ ಆಯ್ಕೆಗೆ ಅಡಿಪಾಯವೆಂಬುದನ್ನು ತಿಳಿಯಬೇಕು. (ಒ) ನಮ್ಮ ದೇಶವು ಅನೇಕ ರಾಜ್ಯಗಳ ಒಕ್ಕೂಟವಾದ್ದರಿಂದ ರಾಜ್ಯಗಳ ಸ್ವಾಯತ್ತತೆಯನ್ನು ಯಾವುದೇ ಸಂದರ್ಭದಲ್ಲೂ ಚಿವುಟಿಹಾಕಕೂಡದು. (ಓ) ಭಯೋತ್ಪಾದನೆ ಮತ್ತು ತೀವ್ರಗಾಮಿಗಳ ಕಾರ್ಯಾಚರಣೆ ಮುಂತಾದುವನ್ನು ನಿಗ್ರಹಿಸಲು ಪ್ರಜಾಪ್ರಭುತ್ವವಾದಿ ಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕೇ ಹೊರತು ದೈತ್ಯಶಕ್ತಿಯಿಂದ ಅವನ್ನು ಹಿಮ್ಮೆಟ್ಟಿಸಬಹುದೆಂಬ ಮಿಥ್ಯೆಗೆ ಬಲಿಯಾಗಕೂಡದು. (ಔ) ದಶಕಗಳೇ ಕಳೆದಿದ್ದರೂ ಇನ್ನೂ ಹಿಂದುಳಿದವರು, ಬಡತನದ ರೇಖೆಯಿಂದ ಕೆಳಗಿರುವವರು, ಅನಕ್ಷರಸ್ಥರು, ಮೀಸಲಾತಿಯ ಸೌಲಭ್ಯದಿಂದ ಶಿಕ್ಷಣ–ಉದ್ಯೋಗ ಪಡೆಯಬೇಕಾದವರು, ದಮನಿತರು, ಮುಂತಾದ ಬಣಗಳು ಇನ್ನೂ ನಮ್ಮಲ್ಲಿರುವುದು ಪ್ರಜಾಪ್ರಭುತ್ವಕ್ಕೆ ಶೋಭೆ ತರುವಂಥದಲ್ಲ. ಈ ಬಣಗಳ ಪ್ರಮಾಣವು ಮುಂದಿನ ಐದು ವರ್ಷಗಳಲ್ಲಿ ಕನಿಷ್ಠ ಶೇಕಡ ಇಪ್ಪತ್ತರಷ್ಟಾದರೂ ಕಡಿಮೆಯಾಗುವಂತೆ ಯೋಜನೆಗಳನ್ನು ರೂಪಿಸಿಕಾರ್ಯಗತಗೊಳಿಸಬೇಕು. ಅದೇ ನಿಟ್ಟಿನಲ್ಲಿ, ಮಹಿಳೆಯರು ದೇಶದಲ್ಲಿ ಯಾವ ರೀತಿಯಲ್ಲೂ ಅಸಮಾನತೆಗೆ ಗುರಿಯಾಗದಿರುವಂತೆ ಮಾಡುವುದು ಸಾಮಾಜಿಕ ಮತ್ತು ಸಾಂಸ್ಕೃತಿಕ ಕರ್ತವ್ಯವಾದ್ದರಿಂದ ಅದನ್ನು ಗಂಭೀರವಾಗಿ ಪರಿಗಣಿಸಿ ಬಾಯುಪಚಾರವನ್ನು ನಿಲ್ಲಿಸಬೇಕು, ಪ್ರಾಯೋಗಿಕವಾಗಿ ಸೂಕ್ತ ನೀತಿಗಳನ್ನು ಅನುಷ್ಠಾನಕ್ಕೆ ತರಬೇಕು.

ನಮ್ಮ ಕನ್ನಡ ವರ್ಣಮಾಲೆಯಲ್ಲಿ ಇನ್ನೂ ಎರಡು ಸ್ವರಗಳಿವೆ; ಅವಕ್ಕೆ ಸಂವಾದಿಯಾಗಿ ಜನತೆ ಮತ್ತು ಜನಸಂಸ್ಕೃತಿಯ ಸ್ವರಗಳಿವೆ. ಮುಂದಿನ ಚುನಾವಣೆಯ ವೇಳೆಯಲ್ಲಿ ರಾಜಕೀಯ ಪಕ್ಷಗಳು ಹೊಸ ಪ್ರಣಾಲಿಕೆಗಳನ್ನು ಪ್ರಕಟಿಸುವುದು ಬೇಡ; ನಮ್ಮ ಜನತಾ ಪ್ರಣಾಲಿಕೆಯ ಅಂಶಗಳನ್ನು ಎಷ್ಟರಮಟ್ಟಿಗೆ ಅನುಷ್ಠಾನಕ್ಕೆ ತಂದಿರುತ್ತಾರೆಂಬುದೊಂದೇ ಮಾಪನ ಸಾಕು.

ಮತ್ತು ಲೋಕಾಯುಕ್ತಗಳ ಬಲೆಗೂ ಬೀಳದ, ಇಲ್ಲವೇ ಬಿದ್ದಿದ್ದರೂ ಬಲೆಯನ್ನು ಚಿಂದಿಮಾಡಿ ಹೊರಬಂದಿರುವ, ತಿಮಿಂಗಲಗಳು; ಅನೇಕ ಅಪರಾಧಗಳನ್ನೆಸಗಿ ೪೨೦ ಮುಂತಾದ ನಿಬಂಧಗಳಡಿ ಅಪರಾಧಿಗಳೆಂದು ಗುರುತಿಸಲ್ಪಟ್ಟಿರುವವರು, ಹೀಗಿದೆ ಲೋಕಸಭಾ ಸದಸ್ಯರ ಭಾವಿ ಪಟ್ಟಿ. ತಾರೆಯರನ್ನಾಗಲಿ, ಬೆಡಗುಗಾರ್ತಿಯರನ್ನಾಗಲಿ, ಮೂದಲಿಸುವುದು ಉದ್ದೇಶವಲ್ಲ; ಹಾಗೆ ಮೂದಲಿಸುವುದು ಮೂರ್ಖತನ. ಅವರವರ ಕ್ಷೇತ್ರಗಳಲ್ಲಿ ಇವರೆಲ್ಲಾ ಯಶಸ್ಸು ಪಡೆದಿರುವವರೆಂಬುದು ನಿಶ್ಚಿತ. ಅವರೆಲ್ಲಾ ಅಕ್ಷರಸ್ಥರು ಸಹ ಹೌದು. ಲೋಕಸಭೆಯಲ್ಲಿ ಚರ್ಚೆಗೆ ಬರಬೇಕಾದ ವಿಷಯಗಳನ್ನು ಕುರಿತಂತೆ ಜನಪರವಾದ ನಿಲುವುಗಳಿಗಾಗಿ ಹೋರಾಟ ನಡೆಸಲು ಈ ಪರಿಣತಿಯು ಸಾಕೆ? ಅದು ಪ್ರಮುಖ ಪ್ರಶ್ನೆ. ಕೈ ಮತ್ತು ಬಾಯಿ ಲಕ್ಷಣವಾಗಿರಬಹುದು, ಆದರೆ ಆ ಕೈಯಿಂದ ಮಾಡುವುದೇನು ಮತ್ತು ಬಾಯಿಂದ ಹೇಳುವುದೇನು? ಒಂದೇ ಒಂದು ಉದಾಹರಣೆ ತೆಗೆದುಕೊಳ್ಳಿ: ಮಥುರಾಕ್ಕೆ ಬೆಡಗು ನೀಡಲು ಲೋಕಸಭೆ ಪ್ರವೇಶಿಸಬೇಕೆಂದಿರುವ ಹೇಮಮಾಲಿನಿ ಎಂಬಾಕೆ ಇಷ್ಟು ವರ್ಷಗಳಲ್ಲಿ ಪಾರ್ಲಿಮೆಂಟ್ ಸದಸ್ಯೆಯಾಗಿ ಮಾಡಿದ್ದೇನು? ಮೂಲಭೂತ ಪ್ರಶ್ನೆಗಳು ಎರಡು: (ಅ) ಜನರೊಡನೆ ಮತ್ತು ಜನರ ನಡುವಿನಿಂದ ಬಂದಿರದವರು ರಾಜಕೀಯ ಪಟುಗಳಾಗಿ ಎಂತಹ ಕಾಣಿಕೆ ಸಲ್ಲಿಸುತ್ತಾರೆ? ಮತ್ತು (ಆ) ಹಾಗೆ ಜನರ ಸಂಸರ್ಗವಿಲ್ಲದೆ ಜನಪ್ರತಿನಿಧಿಗಳಾಗುವವರು ಎಂತಹ ರಾಜಕೀಯ ಚರ್ಚೆಗಳನ್ನು ಮಾಡುತ್ತಾರೆ ಮತ್ತು ರಾಜಕಾರಣಕ್ಕೆ ಏನು ಕೊಡುಗೆ ನೀಡುತ್ತಾರೆ?

ನಾಳೆ ಶ್ರೀಲಂಕಾ, ಕಾಶ್ಮೀರ, ಮಣಿಪುರ, ಛತ್ತೀಸಘಡ, ಇವೆಲ್ಲಾ ಚರ್ಚೆಗೆ ಬಂದಾಗ ಈ ಪಟುಗಳು ಯಾವ ತಿಳಿವಳಿಕೆಯಿಂದ ಲೋಕಸಭೆಯಲ್ಲಿ ಕೈ ಎತ್ತುತ್ತಾರೆ? ಮೋದಿ ಅಥವಾ ರಾಹುಲ್ ಹೇಳುವುದಕ್ಕೋ ಅಥವಾ ಅವರಿಗೆ ಸ್ವಂತದ ಕಲ್ಪನೆ ಇರುವಂತಹ ಯಾವುದಾದರೂ ನಿಲುವಿಗೋ? ರಾಜಕೀಯ ಪಕ್ಷಗಳಲ್ಲಿ 'ರಾಜಕೀಯ' ಎಂಬುದು ಖಾಲಿ ಕೊಡವಾಗಬೇಕು ಎಂಬುದು ನಮ್ಮ ಬಂಡವಳಿಗರಾದ ಅದಾನಿ–ಅಂಬಾನಿ–ಮಿತ್ತಲ್–ಜಿಂಡಾಲ್‌ಗಳ ಆಶಯ. ಅದು ಅರ್ಣವ ಗೋಸ್ವಾಮಿ, ರಾಜದೀಪ ಸರ್ದೇಸಾಯಿ, ಮುಂತಾದವರ ಇಚ್ಛೆ ಕೂಡ. ಇನ್ನು ದೊಡ್ಡ ಪತ್ರಿಕೆಗಳ ಯಜಮಾನರ ಅಭಿಪ್ರಾಯದ ಬಗ್ಗೆ ಹೇಳುವುದೇನಿದೆ? ರಾಜಕೀಯ ಅಭಿಪ್ರಾಯಗಳಿಲ್ಲದ ರಾಜಕೀಯವು ಪ್ರಜಾಪ್ರಭುತ್ವದಲ್ಲಿ ಬತ್ತಿಹೋಗಿರುವ ಹೊಂಡಕ್ಕೆ ಸಮಾನ. ಜನರ ನೈಜ ಅಗತ್ಯಗಳು 'ಮೋದಿ ಅಭಿವೃದ್ಧಿ ಮಾದರಿ' ಮತ್ತು 'ರಾಹುಲ್–ನೀಲೇಕಣಿ ಬೆಳವಣಿಗೆಯ ಪ್ರಸ್ತಾವ' ಇವುಗಳಲ್ಲಿ ಎಳ್ಳಷ್ಟೂ ಲೆಕ್ಕಕ್ಕೆ ಬರುವುದಿಲ್ಲ. ರೈತರ ಭೂಮಿ ಕಿತ್ತುಕೊಂಡು ಯಾವನೋ ಅಥವಾ ಯಾವಳೋ ಉದ್ಯಮಿಗೆ ನೀಡಬೇಕೆ? ನೀಡಿ, ಅದಕ್ಕೆ ಚರ್ಚೆ ಏಕೆ ಬೇಕು? ಹೀಗೆನ್ನುವಂಥವರು ನಮ್ಮ ಲೋಕಸಭೆಯಲ್ಲಿ ಬೆಡಗು–ಬಿನ್ನಾಣ ಪ್ರದರ್ಶಿಸುತ್ತಾರೋ ಲೋಕಪ್ರಜ್ಞೆಯನ್ನು ಮೆರೆಯುತ್ತಾರೋ? ಈ ರೀತಿಯ ರಾಜಕೀಯ ಬೆಳೆಯಬೇಕೆಂಬುದು "ಅಮೆರಿಕಾ ಮಾದರಿಯ ವ್ಯವಸ್ಥೆ"ಯ ಸಮರ್ಥಕರದು. ಅವರಿಗೆ ಒಂದೇ ತತ್ವ ಹಾಗೂ ಚಿಂತನೆಯುಳ್ಳ ಎರಡು ಪಕ್ಷಗಳು ಮಾತ್ರ ಇರಬೇಕು. ಒಂದು ಕತ್ತೆ ಪಕ್ಷ, ಇನ್ನೊಂದು ಆನೆ ಪಕ್ಷ. ಜನರ ಹಿತದ ದೃಷ್ಟಿಯಿಂದ ಎರಡೂ ಕತ್ತೆ ಪಕ್ಷಗಳೇ! ನಮ್ಮಲ್ಲಿ ವಾಜಪೇಯಿ ಪ್ರಧಾನಿಯಾದ ಕಾಲದಲ್ಲಿ ಅವರ ಮೊದಲ ಘೋಷಣೆ ಇದೇ ಆಗಿತ್ತು: ಎರಡು ಪಕ್ಷಗಳ ವ್ಯವಸ್ಥೆ ಜಾರಿಗೆ ಬರಬೇಕು, ಎಂದು. ಸದ್ಯದಲ್ಲಿ ಪಾರ್ಲಿಮೆಂಟ್‌ಗೆ ಚುನಾಯಿತರಾಗುವವರಲ್ಲಿ ತುಟಿಯನ್ನು ಬಿಚ್ಚದ ಸದಸ್ಯರು ಬೇಕಾದಷ್ಟು ಮಂದಿ ಇರುತ್ತಾರೆ. ಮೋದಿ–ರಾಹುಲ್ ತಮಗೆ ಇಷ್ಟಬಂದಂತೆ ವರ್ತಿಸಬಹುದು, ಭೂಮಿ ಕಿತ್ತುಕೊಳ್ಳಬಹುದು, ಖನಿಜಗಳನ್ನು ಖಾಸಗಿಯವರಿಗೆ ಬೇಕಾಬಿಟ್ಟಿ ವರ್ಗಾಯಿಸಬಹುದು, ಅಮೆರಿಕಾ ಹೇಳಿದಂತೆ ಕುಣಿಯಬಹುದು ಮತ್ತು ಅದನ್ನು 'ಅಭಿವೃದ್ಧಿ' ಎಂದು ಕರೆಯಬಹುದು.

ನಿಜಕ್ಕೂ ಪ್ರಜಾಪ್ರಭುತ್ವದತ್ತ ಹೊರಳಬೇಕಾದರೆ ನಮ್ಮ ದೇಶವು ಮೊದಲು ಅನುಪಾತೀಯ ಪ್ರಾತಿನಿಧ್ಯದ ಮಾದರಿಯನ್ನು ಜಾರಿಗೊಳಿಸಬೇಕು. ಆಗ ಗೆಲ್ಲಬೇಕೆಂಬ ಕಾರಣಕ್ಕೆ ಪಕ್ಷಗಳು ತಾರೆಯರನ್ನು ಕಣಕ್ಕಿಳಿಸುವುದಿಲ್ಲ, ರಾಜಕೀಯ ಧುರೀಣರನ್ನು ಮತ್ತು ಜನರ ನಡುವಿನಿಂದ ಬಂದ ನಾಯಕರನ್ನು ಚುನಾವಣೆಯ ಅಭ್ಯರ್ಥಿಗಳನ್ನಾಗಿಸುತ್ತವೆ. ಏಕೆಂದರೆ, ಇಡೀ ದೇಶದಲ್ಲಿ ಯಾವುದೇ ಪಕ್ಷವು ಪಡೆಯುವ ಮತಗಳು ಒಟ್ಟು ಮತಗಳ ಶೇಕಡ ಎಷ್ಟು ಎಂಬುದನ್ನಾಧರಿಸಿ ಆ ಅನುಪಾತದಲ್ಲಿ ಸ್ಥಾನಗಳನ್ನು ಪಡೆಯುವುದು ಪಕ್ಷಗಳಿಗೆ ಅನಿವಾರ್ಯ. ಆಗ ಬಿರುಸಿನ ಮಾತಿನ ಬೈಗುಳ ರಾಜಕೀಯದ ಬದಲು ನಿಜಕ್ಕೂ ಜನಹಿತಕ್ಕೆ ಯಾವ ನೀತಿಯು ಆರೋಗ್ಯಕರವೆಂಬ ಚರ್ಚೆ ನಡೆಯಲಾರಂಭವಾಗುತ್ತದೆ. ಹೇಮಮಾಲಿನಿ ಮಥುರಾನಗರಿಯನ್ನು ಸ್ವಚ್ಛಗೊಳಿಸಲಡ್ಡಿಯಿಲ್ಲ, ಆದರೆ ಅದನ್ನಾಕೆ ಪಾರ್ಲಿಮೆಂಟ್ ಸದಸ್ಯೆಯಾಗಿ ಮಾಡಬೇಕಾಗಿಲ್ಲ; ಒಬ್ಬ ಸಾಮಾನ್ಯ ಸಾಮಾಜಿಕ ಕಾರ್ಯಕರ್ತೆಯಾಗಿಯೂ ಮಾಡಬಲ್ಲಳು. ಬೆಡಗು–ಬಿನ್ನಾಣಗಳಿಗೆ ಪ್ರತಿಬಂಧಕವೇನೂ ಇಲ್ಲ, ಆದರೆ ಅವು ಪಾರ್ಲಿಮೆಂಟ್ ಸದಸ್ಯರಾಗಲು ಕಡ್ಡಾಯ ಅರ್ಹತೆಗಳಲ್ಲ. ಮತ ಕೇಳಲು ಅಳುವ ಮುಸುಡಿಗಳ ಪ್ರದರ್ಶನ ಮಾಡುವ ಮುತ್ಸದ್ದಿಗಳು ನಿಸೂರಾಗಿ ತಮ್ಮ ತಮ್ಮ ಅಳುವ–ಕೋಣೆಗಳಿಗೆ ಹೋಗಿ ಕಾಯಂ ಆಗಿ ಅಳುವ ಕಲೆಯನ್ನು ಅಭ್ಯಾಸ ಮಾಡಬಹುದು. ರಾಜಕೀಯವೇ ಇಲ್ಲದ "ರಾಜಕೀಯ" ದೇಶದ ಪ್ರಜಾಪ್ರಭುತ್ವಕ್ಕೆ ಮತ್ತು ಜನತೆಯ ಹಿತಕ್ಕೆ ಮಾರಕವಾದುದು.

✶ ✶ ✶

ಚುನಾವಣೆಯ ಫಲಿತಾಂಶ ಘೋಷಣೆಯಾಗುವುದಕ್ಕೆ ಮುಂಚೆಯೇ ಕೆಲವು ರಾಜಕೀಯ ಪಕ್ಷಗಳು ತಮ್ಮ ಬೇಲಿಗಳನ್ನು ಭದ್ರಪಡಿಸಿಕೊಳ್ಳಲು ಆರಂಭಿಸುತ್ತವೆ. ತಮ್ಮ ಬೇಲಿಯೊಳಗೆ ಯಾರೂ ನುಸುಳಬಾರದೆಂದೇನೂ ಇಲ್ಲ, ಆದರೆ ಒಳಗಿನವರು ಹೊರಕ್ಕೋಡಿಬಿಟ್ಟಾರು ಎಂಬ ಭಯ. ದೇವೇಗೌಡರ ಫಜೀತಿ ನೋಡಿದರೆ ಇದು ಅರ್ಥವಾಗುತ್ತದೆ. ಅವರು ವಿದ್ಯುತ್ ತಂತಿ ಕಟ್ಟಿದರೂ ಬೇಲಿಯ ಮೇಲೆ ಎಗರಿ ಹೊರಕ್ಕೆ ಧಾವಿಸುವವರು ಅವರ ಪಕ್ಷದಲ್ಲಿದ್ದಾರೆ. ಅಂತಹ ಘನವಾದ ಪಕ್ಷ ಅದು. ಚುನಾವಣೆಯ ಕಾವೇರಿದಂತೆ ಲೆಕ್ಕಾಚಾರಗಳು ಆರಂಭವಾಗುತ್ತವೆ. ಯಾವ ಎತ್ತಿನ ಬಾಲವನ್ನು ಹಿಡಿಯುವ ಇರಾದೆ ಇದೆಯೆಂದು ಒಂದು ತರಹದ ಬುದ್ಧಿವಂತಿಕೆಯಿಂದ ಸೂಚಿಸುವಷ್ಟು ನಮ್ಮ "ಹಿರಿಯ" ರಾಜಕಾರಣಿಗಳು ಪ್ರಬುದ್ಧರಾಗಿದ್ದಾರೆ. "ಯಾವ ಕಡೆಗೆ ಜಿಗಿಯಲೂ ಸಿದ್ಧ" ಎಂದು ತಮಗೆ ತಾವು ಹೇಳಿಕೊಂಡು, "ನಿಮ್ಮ ಮನೆಯಲ್ಲಿ ನಮಗೂ ಒಂದು ಚಾಪೆ ಹಾಸಿರಿ" ಎಂದು ಮೋದಿ–ರಾಹುಲ್‌ಗೆ ಸಂದೇಶ ರವಾನಿಸುತ್ತಾರೆ. ಶರದ್ ಪವಾರ್ ಅದನ್ನು ಸೊಗಸಾಗಿ ಮಾಡಿದ್ದಾರೆ. ಅವರ ಕುಟುಂಬದವರಿಗೆಲ್ಲಾ ಸಾಕಾಗುವಷ್ಟು ಚಾಪೆಗಳನ್ನು ಎಲ್ಲ ಪಕ್ಷಗಳಲ್ಲೂ ಹಾಸುವ ಚಾಕಚಕ್ಯತೆ ಅವರದು. ಬೇರೆಯವರೂ ಹಾಗೆ ಮಾಡುತ್ತಾರೆ, ಆದರೆ ಪವಾರ್ ವೈಖರಿಯೇ ಬೇರೆ. ಅವರು ರಾಹುಲ್ ಮನೆಯ ರತ್ನಗಂಬಳಿಯ ಮೇಲೆ ಪವಡಿಸಿ ಸುಖಿಸುತ್ತಿದ್ದಾರೆ, ಆದರೆ ನಾಳೆಗೆ ಬೇಕಾಗಬಹುದೆಂದು ಮೋದಿ ಪಡಸಾಲೆಯಲ್ಲಿ ಒಂದು ಈಚಲು ಚಾಪೆ ಹಾಸಿ ಬಂದಿದ್ದಾರೆ. ಅದೇ ಬುದ್ಧಿವಂತಿಕೆ. ಅದನ್ನು ಪ್ರಕಟಿಸುವ ಕಲೆಯಲ್ಲಿ ನೈಪುಣ್ಯ ಬೆಳೆಸಿಕೊಳ್ಳಬೇಕು. ಅವರ ಈಚಿನ ಒಂದು ಹೇಳಿಕೆ ನೋಡಿ ಹೇಗಿದೆ: "ಚುನಾವಣೆಯಲ್ಲಿ ನಾವೇ ಗೆಲ್ಲುತ್ತೇವೆ (ಅಂದರೆ, 'ರಾಹುಲ್, ನಾನು ನಿನ್ನ ಜೊತೆ', ಎಂದು); ಆದರೆ ಮೋದಿಯವರ ಪಕ್ಷಕ್ಕೆ ಬಹಳ ಹೆಚ್ಚಿನ ಸ್ಥಾನಗಳು ದೊರೆಯುವುದು ಖಚಿತ" (ಅಂದರೆ, 'ಮೋದಿ ಅಣ್ಣನವರೆ, ನನ್ನ ಚಾಪೆಯನ್ನು ಸುತ್ತಿಬಿಡಬೇಡಿ', ಎಂದು). ಎ. ಕೆ. ಆಂಟೋನಿ ಇವರಷ್ಟು ಬುದ್ಧಿವಂತರಲ್ಲ, ಆದರೆ ಲೆಕ್ಕಾಚಾರ ಅವರಿಗೂ ಗೊತ್ತು. ಆದ್ದರಿಂದ ಅವರೆಂದರು, "ಚುನಾವಣಾ ಫಲಿತಾಂಶ ಬಂದನಂತರ ಎಡಪಕ್ಷಗಳ ಬೆಂಬಲವನ್ನು ಕಾಂಗ್ರೆಸ್ ಪಕ್ಷವು ನಿರಾಕರಿಸುವುದಿಲ್ಲ" ಎಂದು. ಅಂದರೆ, ಎಡಪಕ್ಷಗಳಿಗೆ ಒಂದಿಷ್ಟು ಸ್ಥಾನಗಳನ್ನು "ಕರುಣಿಸಲು" ಆಂಟೋನಿಗೆ ಮುಜುಗರವಿಲ್ಲ. ಬೇರೆಯವರು ಎಡಪಕ್ಷಗಳಿಗೆ ಸೊನ್ನೆ ಸ್ಥಾನ ಕೊಟ್ಟರೂ ಆಂಟೋನಿಯವರು ಮುಂಜಾಗ್ರತೆ ವಹಿಸಿ ಕೆಲವು ಸ್ಥಾನಗಳನ್ನು ಕೊಡುತ್ತಾರೆ. ಮಾಧ್ಯಮಗಳು ಬಹುತೇಕ ಮೋದಿ ಭಂಟರಾದ್ದರಿಂದ ಅವು ಈಗಾಗಲೆ "ಪ್ರಧಾನಿ" ಮೋದಿಗೆ ೩೫೦ ಸ್ಥಾನ ನೀಡಿ ಅವರ ಬೆಂಬಲಿಗರಿಗೆ ೧೦೦ ಸ್ಥಾನ ದಾನ ಮಾಡಿಬಿಟ್ಟಿವೆ. ಚುನಾವಣೆಯ ಕರಾಮತ್ತು ಎಂದರೆ ಇದಲ್ಲವೆ!

✶ ✶ ✶

ವಾಲ್ಮೀಕಿಯು ಮರದ ಕೊಂಬೆಯ ಮೇಲೆ ಕೂತು 'ರಾಮ, ರಾಮ' ಎಂದು ನುಲಿಯುವ ಕೋಗಿಲೆ. ಅವನು ಕವಿತೆಯೆಂಬ ಮರದ ಕೊಂಬೆಯ ಮೇಲೆ ಕೂತಿರುವ ಕೋಗಿಲೆ, ಅಷ್ಟೆ. ಆದರೂ ಅವನು ತುಚ್ಛ ಕಾಗೆಯಲ್ಲ. ಕೋಗಿಲೆ ಬಹಳ ಚುರುಕು ಬುದ್ಧಿ ಹೊಂದಿದೆ, "ಬ್ರಾಹ್ಮಣ" ಕೆ. ಎಸ್. ನಾರಾಯಣಾಚಾರ್ಯ ಅವರಂತೆ; ಆದ್ದರಿಂದ ತನ್ನ ಮೊಟ್ಟೆಯನ್ನು ಕಾಗೆಯ ಗೂಡಿನಲ್ಲಿರಿಸುತ್ತದೆ. "ವಸಂತ ಕಾಲ ಬಂದಾಗ ಕಾಗೆ ಯಾವುದು, ಕೋಗಿಲೆ ಯಾವುದು" ಎಂಬುದು ಸ್ವಯಂಸಿದ್ಧ! ನಾರಾಯಣಾಚಾರ್ಯರಂತಹ "ಅಪ್ಪಟ ಬ್ರಾಹ್ಮಣ ವಿದ್ವಾಂಸರು" ಸದಾ ಏನಾದರೂ 'ಸಂಶೋಧನೆ' ಮಾಡುತ್ತಿರುತ್ತಾರೆ. ಅದನ್ನೇ "ಸಂ–ಶೋಧನೆ" (ಅಂದರೆ, ಎಂಥದೋ ಒಂದು ಶೋಧನೆ) ಎನ್ನುತ್ತಾರೆ. ತಪ್ಪು ಕಾಗುಣಿತ ಬರೆಯುವ "ದಡ್ಡ ಶೂದ್ರರು" ಅದನ್ನು "ಸ್ಲಂ–ಶೋಧನೆ" ಎಂದು ಬರೆದುಬಿಡುತ್ತಾರೆ! ಅವರಿಗೆ

ಆಚಾರ್ಯರ ಸಂಶೋಧನೆಯ ಮಹತ್ವದ ಅರಿವಾಗುವುದಿಲ್ಲ, ಬಿಡಿ. ಪ್ರಸ್ತುತ, ನಮ್ಮ ರಾಜ್ಯದ ಬೇಡರ ಜನಾಂಗದವರು ಆಚಾರ್ಯರ ಸಂ–ಶೋಧನೆಯಿಂದ ಬೇಸರಿಸಿಕೊಂಡು ಅವರು ಬರೆದಿರುವ 'ಮಹದ್ಗ್ರಂಥ'ವೊಂದನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಆಗ್ರಹಿಸಿದ್ದಾರೆಂದು ವರದಿಯಾಗಿದೆ. ಅವರು ಬೇಸರಿಸಿಕೊಳ್ಳುವ ಬದಲು ತಾವೂ ಸ್ವತಃ ಒಂದು ಸಂಶೋಧನೆಗೆ ಕೈಹಾಕಿದ್ದರೆ ಚೆನ್ನಾಗಿರುತ್ತಿತ್ತು ಎನಿಸುತ್ತದೆ. "ಎಲ್ಲ ರತ್ನಗಳೂ ರಾಜನಿಗೆ ಸೇರಬೇಕು" ಎಂದು ವಿಶ್ವಾಮಿತ್ರನು ಕ್ಷತ್ರಿಯ ರಾಜನಾಗಿದ್ದಾಗ ಬಯಸಿದ, ವಸಿಷ್ಠನ ಮೇಲೆರಗಿದ, ಆಮೇಲೆ ಬ್ರಹ್ಮರ್ಷಿಯಾದ, ಎಂಬಿತ್ಯಾದಿ ಕತೆ ಗೊತ್ತಲ್ಲವೆ. ಹಾಗೆ ನಮ್ಮ ಆಚಾರ್ಯರು ಉದ್ವೇಗದಿಂದ ಜುಟ್ಟು ಎಗರಿಸಿಕೊಂಡು ತಮ್ಮ ನಾಮದಷ್ಟೇ ಬಲವಾಗಿ ಅಪ್ಪಣೆ ಕೊಡಿಸಿದ್ದಾರೆ, "ವಾಲ್ಮೀಕಿ ಬೇಡನಲ್ಲ, ಅವನು ಬ್ರಾಹ್ಮಣ ಶಿಶು; ಆದರೆ ಬೇಡರ ಮನೆಯಲ್ಲಿ ಬೆಳೆದುಬಿಟ್ಟನಾದ್ದರಿಂದ ಎಲ್ಲರೂ ಈ 'ಸಾತ್ವಿಕ' ಸಂಶೋಧನೆ ಆಗುವವರೆಗೆ ಅವನನ್ನು ಬೇಡನವನೆಂದು ತಪ್ಪಾಗಿ ತಿಳಿದಿದ್ದಾರೆ" ಎಂದು. ಇಂತಹ ವಿಚಿತ್ರ ಸಂಭವಿಸಿದ್ದು ಹೇಗೆ ? ಸಂ–ಶೋಧನೆ ಹೇಳುತ್ತದೆ ಕೇಳಿ : ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಮಗು ವಾಲ್ಮೀಕಿಯನ್ನು ಯಾವುದೋ ಪಕ್ಷಿಯು ಎತ್ತಿಕೊಂಡು ಹೋಗಿ ಒಬ್ಬ ಬೇಡರ ಮನೆಯ ಅಂಗಳದಲ್ಲಿ ಬಿಟ್ಟುಬಿಟ್ಟಿತು. ದಯಾಮಯಿಯಾದ ಬೇಡ ಅದನ್ನು ಸಾಕಿಕೊಂಡ. ಆ ಮಗುವೇ ಜಗದ್ವಿಖ್ಯಾತ ವಾಲ್ಮೀಕಿಯಾಯಿತು.

ನಮ್ಮ ಆಚಾರ್ಯರ ಚಾರಿತ್ರಿಕ ವ್ಯಂಗ್ಯ ಹೇಗಿದೆ ನೋಡಿ : ಯಾವಾಗಲೂ ಬೇಡನು ಹಕ್ಕಿಯನ್ನು ಅರಸಿ ಹೋಗುತ್ತಾನೆ, ಅದು ಸಿಕ್ಕಿದಾಗ ಅದನ್ನು ಕೊಲ್ಲುತ್ತಾನೆ. ಆದರೆ ಇಲ್ಲಿ ಹಕ್ಕಿಯೇ ನೇರವಾಗಿ ಬೇಡರ ಮನೆಗೆ ಹಾರಿದೆ, ಶಿಶುವನ್ನು ದಯಪಾಲಿಸಿದೆ, ಬೇಡನ ಬಾಣಕ್ಕೆ ತುತ್ತಾಗದೆ ಹಿಂದಿರುಗಿದೆ ! ಹೋಗಲಿ, ವಾಲ್ಮೀಕಿಯು ಬೇಡನೆ ಆಗಿದ್ದರೆ ಆಚಾರ್ಯರಿಗೇನು ನಷ್ಟ ? ಅಥವಾ ಅವನು ಬ್ರಾಹ್ಮಣನಾಗಿದ್ದರೆ ರಾಮಾಯಣ ಕಾವ್ಯವು ಈಗಿರುವುದಕ್ಕಿಂತಲೂ ಉತ್ತಮವಾಗಿರುತ್ತಿತ್ತೇನು ? ಹೊಲಸು ಮನಸ್ಸುಗಳು ಪಂಡಿತರನ್ನು ಆವರಿಸುವುದು ಇದೇನೂ ಹೊಸದಲ್ಲ, ಅಲ್ಲವೆ ? ಅವರಿಗೆ ಉತ್ತರ ಕೊಡುವುದು ಬಾಲಿಶ ಸಂವಾದದಲ್ಲಿ ಪಾಲ್ಗೊಂಡಂತೆಯೇ ಸರಿ. ಸಂಶೋಧಕ ಚಿದಾನಂದಮೂರ್ತಿಯವರು ಆಚಾರ್ಯರಿಗೆ ಸ್ವಲ್ಪ ಬುದ್ಧಿ ಹೇಳಿ "ವಾಲ್ಮೀಕಿಯು ಹುಟ್ಟಿನಿಂದ ಬೇಡ, ಆದರೆ ಕಾವ್ಯತ್ವದಿಂದ ಬ್ರಾಹ್ಮಣ" ಎಂಬರ್ಥ ಬರುವ ವಿವರಣೆ ನೀಡಿದ್ದಾರೆ. ಬೇಡರು ಒಳ್ಳೆಯ ಕಾವ್ಯ ಬರೆಯಲಾರರು, ಬರೆಯಬಾರದು, ಎಂಬುದು ಅವರ ತೀರ್ಮಾನ. ಅದೂ ಒಂದು ರೀತಿಯ ಸಂಸ್ಕಾರದ ಫಲ, ಆದ್ದರಿಂದ ಚಿದಾನಂದಮೂರ್ತಿಯವರು ಅಂತಹ ತೀರ್ಮಾನ ಕೈಗೊಂಡಿದ್ದಾರೆ.

ಬೆಂಗಳೂರಿನ ಬಳಿ ಇರುವ ಹಾರೋಹಳ್ಳಿಯ ಕೆಲವು ತುಂಟರು ನಾರಾಯಣಾಚಾರ್ಯರ ಬಗೆಗೇ ಒಂದು ಸಂಶೋಧನೆ ನಡೆಸಿಬಿಟ್ಟಿದ್ದಾರೆ : ಕನಕಪುರದಿಂದ ಹಾರೋಹಳ್ಳಿಗೆ ಹೋಗುವ ರಸ್ತೆಯಲ್ಲಿ ೧೯೩೦ರ ದಶಕದಲ್ಲಿ ಐದಾರು ವಡ್ಡರ ಗುಡಿಸಲುಗಳಿದ್ದುವಂತೆ. ಅಲ್ಲಿ ಒಂದು ಮಗುವಿನ ಜನನವಾಯಿತು. ತಾಯಿ ಹೇಗೂ ವಡ್ಡರವಳು, ಕಲ್ಲುಬಂಡೆ ಒಡೆಯದೆ ಊಟ ದೊರಕುವಂತಿಲ್ಲ. ಮಗುವನ್ನು ಗುಡಿಸಲಿನಲ್ಲಿ ಬಿಟ್ಟು ಅರೆಯತ್ತ ಹೋದಳು. ಇತ್ತ ಒಂದು ನಾಯಿಮರಿ ಬಂದು ಮಗುವನ್ನು ಎತ್ತಿಕೊಂಡು ಕಾನಕಾನಹಳ್ಳಿಯತ್ತ ಓಡಿತು. ಅಲ್ಲಿ ಎಲ್ಲೋ ಒಂದು ಅಯ್ಯಂಗಾರ್ಯರ ಮನೆ. ಅಲ್ಲಿ ಮಗುವನ್ನು ಧೊಪ್ಪನೆ ಕೆಡವಿ ನಾಯಿ ಅಂತರ್ಧಾನವಾಯಿತು. ಅದನ್ನು ಕಂಡ ಆ ಮನೆಯ ಮಹಿಳೆ 'ನಾರಾಯಣ, ನಾರಾಯಣ' ಎಂದು ಕೂಗಿಕೊಂಡಳು. (ನಾಯಿಯನ್ನು 'ನಾರಾಯಣ' ಎನ್ನುವುದು ಆಗ್ಗೆ ರೂಢಿಯಲ್ಲಿತ್ತು.) ಈ ಚುರುಕು ವಡ್ಡರ ಮಗು 'ಹೋ' ಎಂದು ಪ್ರತಿಕ್ರಿಯಿಸಿತಾದ್ದರಿಂದ ಅದಕ್ಕೆ 'ನಾರಾಯಣ' ಎಂಬ ಹೆಸರಿಟ್ಟರು. ಅದು ಮುಂದೆ ಅತ್ಯಂತ ದೊಡ್ಡ ಹುದ್ದೆಗೇರಿ ವಿದ್ವತ್ತಿನಿಂದ ಕಂಗೊಳಿಸಿತು.

– ಇದು ಹಾರೋಹಳ್ಳಿ ಹುಡುಗರ ಸಂಶೋಧನೆ. ವಾಲ್ಮೀಕಿಯ ಕತೆ ೨೧ನೆಯ ಶತಮಾನದಲ್ಲಿ ಬೇರೆಯೇ ರೂಪ ತಳೆದುಬಿಟ್ಟಿತು. ಎರಡು ಕತೆಗಳನ್ನೂ ಕೇಳಿದ ೨೧ನೆಯ ಶತಮಾನದ ಬೇಡರು, "ಇರಲಿ ಬಿಡಿ, ನಾರಾಯಣಾಚಾರ್ಯರು ವಾಲ್ಮೀಕಿ ಬಗ್ಗೆ ಸಂಶೋಧನೆ ನಡೆಸಿದರು, ನಮ್ಮ ಹಾರೋಹಳ್ಳಿ ಯುವಕರು ನಾರಾಯಣನ ಬಗ್ಗೆ ಸಂಶೋಧನೆ ನಡೆಸಿದ್ದಾರೆ," ಎಂದರಂತೆ. ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯಾಗಿದ್ದ ಮಾನ್ಯ ಶ್ರೀ. ಎಸ್. ಬಿ. ಮುದ್ದಪ್ಪ ಅವರು ಮೊನ್ನೆ ಮೊನ್ನೆ ಉದ್ಗರಿಸಿದರು : "ವಾಲ್ಮೀಕಿ ಬೇಡರವನೇ ಆದರೆ ಯಾರಿಗೇನು ಕಷ್ಟ ? ಬೇಡರವನಾಗಿ ಅವನು ರಾಮಾಯಣ ಬರೆಯಬಾರದಿತ್ತೇನು ?" ಅವರೂ ಸಂಸ್ಕೃತ ಭಾಷೆ ಮತ್ತು ಸಾಹಿತ್ಯದಲ್ಲಿ ಸಾಕಷ್ಟು ಪರಿಶ್ರಮ ಮಾಡಿರುವಂಥವರೇ.

ಮುಖ್ಯ ಸಂಗತಿ ಇಷ್ಟೇ: ನೀವು ಕಾವ್ಯದ ಆಸ್ವಾದನೆಯಲ್ಲಿ ಆಸಕ್ತರೋ ಅಥವಾ ಜಾತಿ ತಿಳಿದು ಮೌಲ್ಯಮಾಪನ ಮಾಡುವ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರೋ ? ಬೇಡನ "ಶೋಕವು ಶ್ಲೋಕದ ರೂಪ ಪಡೆಯಿತು" ಎನ್ನುತ್ತಾರೆ; ಈಗ ಅದನ್ನು ಬದಲಾಯಿಸಬೇಕಾದೀತೋ ಹೇಗೆ ?

* * *

ಬಾಳ ಠಾಕ್ರೆಯ ಖಾಸ ನೆಂಟ ರಾಜ ಠಾಕ್ರೆ ಮಹಾರಾಷ್ಟ್ರದ ನವನಿರ್ಮಾಣಕ್ಕೆ ಕಟಿಬದ್ಧರು ! ಅವರು ಆ ರಾಜ್ಯದ ರೈತರಿಗೆ ಚುನಾವಣಾ ಪ್ರಚಾರದ ಸಮಯದಲ್ಲಿ ಹೇಳಿದರಂತೆ, "ನೀವೇಕೆ ಆತ್ಮಹತ್ಯೆ ಮಾಡಿಕೊಳ್ಳುತ್ತೀರಿ ? ನಿಮ್ಮ ಕೃಷಿಗೆ ಅಡಚಣೆ ಉಂಟುಮಾಡಿ ನಿಮ್ಮ ಮನೆಗೆ ನೀರು ತಿದ್ದಿದವರನ್ನು ಕೊಚ್ಚಿಹಾಕಿ," ಎಂದು. ಚುನಾವಣಾ ಆಯೋಗವು ಆಕ್ಷೇಪವೆತ್ತಿ ಅವರಿಗೆ ನೋಟೀಸ್ ಜಾರಿ ಮಾಡಿದೆಯಂತೆ. ಅಲ್ಲ, ಚುನಾವಣಾ ಪ್ರಚಾರ ಭಾಷಣದಲ್ಲಿ ಎಲ್ಲವೂ ವಾಚ್ಯವೇ ಆಗಿರಬೇಕೆ ? ಆಲಂಕಾರಿಕವಾಗಿ ಏನನ್ನೂ ಹೇಳಬಾರದೆ ? "ಕೊಚ್ಚಿ ಹಾಕಿ" ಎಂದರೆ ಮಚ್ಚು ತೆಗೆದುಕೊಂಡು ತಲೆ ಕಡಿಯುವುದು ಎಂಬ ಒಂದೇ ಅರ್ಥ ಇರುತ್ತದೆಯೆ ? "ನಿಮ್ಮ ವಿರುದ್ಧವಾಗಿ ನಿಯಮ ರೂಪಿಸಿ, ಕೃಷಿ ಉತ್ಪನ್ನದಿಂದ ನಿಮಗೆ ನಷ್ಟವಾಗಲು ಕಾರಣರಾಗಿರುವವರನ್ನು ಪ್ರತಿರೋಧಿಸಿ ದೂರವಿಡಿ" ಎಂದೇಕೆ ಅದನ್ನು ಅರ್ಥ ಮಾಡಿಕೊಳ್ಳಬಾರದು ? ಚುನಾವಣಾ ಆಯೋಗದ ಪ್ರತಿಷ್ಠೆ ಯಾಕೋ ಅತಿಯಾಯಿತು ಎನಿಸುತ್ತದೆ. ಮೊನ್ನೆ ಮೊನ್ನೆ ನಮ್ಮ ರಾಜ್ಯದ ಕೊಪ್ಪಳದಲ್ಲಿ ರಾಜಕಾರಣಿಯೊಬ್ಬರು ಹೇಳಿದರಂತೆ : "ನೋಡಿ, ನಿಮ್ಮ ಹಳ್ಳಿಯಲ್ಲಿ ನೀರಿನ ತೊಂದರೆ ವಿಪರೀತವಾಗಿದೆಯೆಂಬುದು ನಮಗೆ ಗೊತ್ತು. ಆದರೆ ಚುನಾವಣೆ ಮುಗಿಯುವ ಮೊದಲೇ ನಿಮಗೆ ನೀರು ಒದಗಿಸಿದರೆ ಅದು 'ಸಂಹಿತೆ'ಗೆ ವಿರೋಧವಾಗಿ ನಡೆದುಕೊಂಡಂತೆ ಆಗಿಬಿಡುತ್ತದೆ." ಚುನಾವಣೆ ಮುಗಿದ ನಂತರವೂ ನೀವು ಬದುಕಿದ್ದರೆ ನೀರು ಕುಡಿಯುವಿರಂತೆ ಸುಮ್ಮನಿರಿ, ಎಂದು ಹೇಳಿದಂತಾಯಿತು. ಅದಲ್ಲವೆ ನೈಜ ಪ್ರಜಾಪ್ರಭುತ್ವದಲ್ಲಿ ಚುನಾವಣೆಯ ಸಂದರ್ಭದಲ್ಲಿ ಆಮಿಷ ಒಡ್ಡದಿರುವುದು ಎಂದರೆ !

* * *

ನಮ್ಮ ದೇಶದಲ್ಲಿ ಕ್ರಿಕೆಟ್ ಎಂಬುದು ಆಟವೋ ಪಿಡುಗೋ ಎಂಬುದರ ಸಾರ್ವಜನಿಕ ಚರ್ಚೆ ನಡೆದೇ ಇಲ್ಲ. ಅಲ್ಲಿ ಕೋಟಿಗಟ್ಟಲೆ ಹಣ ತುಂಬಿರುವುದರಿಂದ ಶ್ರೀನಿವಾಸನ್ ಅಂತರರಾಷ್ಟ್ರೀಯ ಕ್ರಿಕೆಟ್ ಮಂಡಲಿಯ ಅಧ್ಯಕ್ಷನಾಗಲು ಸಾಧ್ಯವಾಗಿದೆ. ಆಟಗಾರರೂ ಸೇರಿದಂತೆ ಮಂಡಲಿಯಲ್ಲಿ ಹತ್ತಾರು ಮಂದಿ ಭಾರಿ ನುಂಗಣ್ಣಗಳ ಹೆಸರುಗಳು ಹೊರಬಂದಿವೆ. ಈ ವರ್ಷ ಅಲ್ಲೆಲ್ಲೋ ದುಬೈನಲ್ಲಿ ಆಟ ಆಡಿಕೊಳ್ಳುತ್ತಾರಂತೆ. ಶ್ರೀನಿವಾಸನ್ ಅಲ್ಲಿ ಈಜಲು ಹೋಗಿ ಸಮುದ್ರದಲ್ಲಿ ಮುಳುಗಿಹೋಗಬಾರದು, ಅಷ್ಟೆ. ಹಣದಲ್ಲಿ ಮುಳುಗಿರುವವನು ನೀರಿನಲ್ಲೇಕೆ ಮುಳುಗಲು ಹೋದಾನು ! ಅದಿರಲಿ, ವಿಶೇಷವೇನೆಂದರೆ ಸರ್ವೋಚ್ಚ ನ್ಯಾಯಾಲಯವು ಕ್ರಿಕೆಟ್ ಮಂಡಲಿಯ ಇಡೀ ಪ್ರಸಂಗಗಳನ್ನು ಪರಿಶೀಲಿಸಿ ಪರ್ಯಾಯವೊಂದನ್ನು ಹಂಗಾಮಿಯಾಗಿ ರಚಿಸಿ ಕೊಟ್ಟಿದೆ. ಮಂಡಲಿಯಲ್ಲಿ ಕಾನೂನುಬಾಹಿರ ಚಟುವಟಿಕೆಗಳು ನಡೆಯುತ್ತಿದ್ದವೆಂಬುದನ್ನು ಗುರುತಿಸಿ ನ್ಯಾಯಾಲಯವು ಅಧ್ಯಕ್ಷ ಶ್ರೀನಿವಾಸನ್ ಅಮಾನತ್ತಿನಲ್ಲಿ ಇರಿಸಲ್ಪಡಬೇಕೆಂದು ಹೇಳಿದೆ. ಇದು ಸ್ವಾಗತಾರ್ಹವಾದ್ದು. ಆದರೆ ಅದೇ ತೀರ್ಪಿನೊಟ್ಟಿಗೆ ನ್ಯಾಯಾಲಯವು ಪ್ರಶ್ನಾರ್ಹವಾದ ಒಂದು ಕ್ರಮವನ್ನು ಅನುಸರಿಸಿದೆ. ಅಧ್ಯಕ್ಷನು ಅಮಾನತ್ತಿನಲ್ಲಿರಿಸಲ್ಪಟ್ಟಾಗ ಬೇರೆ ಯಾರಾದರೂ ಹಂಗಾಮಿಯಾಗಿ ಆ ಸ್ಥಾನದಲ್ಲಿದ್ದು ಕೆಲಸ ನಿರ್ವಹಿಸಬೇಕು. ಮೊಕದ್ದಮೆಯು ಇತ್ಯರ್ಥವಾಗುವವರೆಗೆ ಇದು ಅನಿವಾರ್ಯ – ಹಾಗೆ ಹಂಗಾಮಿಯಾಗಿ ಯಾರನ್ನು ನೇಮಿಸಬೇಕೆಂಬುದನ್ನು (ಶ್ರೀನಿವಾಸನ್ ಇಲ್ಲದ) ಕ್ರಿಕೆಟ್ ಮಂಡಲಿಯ ಕಾರ್ಯಕಾರಿ ಸಮಿತಿಯು ತೀರ್ಮಾನಿಸಬೇಕು. ಅದು ನಿಯಮಬದ್ಧವಾದ ಕ್ರಮ. ಉಪಾಧ್ಯಕ್ಷನು ಮೊಕದ್ದಮೆಯ ತೀರ್ಪು ಹೊರಬರುವವರೆಗೆ ಪ್ರಭಾರಿ ಅಧ್ಯಕ್ಷನಾಗಿರುತ್ತಾನೆ. ಐಪಿಎಲ್ ಯಾರು ನೋಡಿಕೊಳ್ಳಬೇಕೆಂಬುದನ್ನು ಕಾರ್ಯಕಾರಿ ಮಂಡಲಿ ನಿರ್ಧರಿಸಬೇಕು. ಆದರೆ ಪ್ರಸ್ತುತ ಪ್ರಸಂಗದಲ್ಲಿ ಸರ್ವೋಚ್ಚ ನ್ಯಾಯಾಲಯವು ಗವಾಸ್ಕರ್ ಎಂಬ ಕ್ರಿಕೆಟ್ ಆಟಗಾರನನ್ನು ತಾನೇ ಆ ಸ್ಥಾನಕ್ಕೆ ಸೂಚಿಸಿಬಿಟ್ಟಿದೆ. ಇದು ಅಕ್ರಮವಲ್ಲವೆ ಮತ್ತು ಅದನ್ನು ಕ್ರಿಕೆಟ್ ಮಂಡಲಿಯು ನ್ಯಾಯಾಲಯದಲ್ಲಿ ಹೇಳಬೇಕಾಗಿತ್ತಲ್ಲವೆ ? ಕ್ರಿಕೆಟನ್ನು "ಕಾಪಾಡುವ" ಹುಮ್ಮಸ್ಸಿನಲ್ಲಿ ಸರ್ವೋಚ್ಚ ನ್ಯಾಯಾಲಯವು ತನ್ನ ಪರಿಧಿಗೆ ಹೊರತಾದ ಒಂದು ಕೆಲಸ ಮಾಡಲು ಮುನ್ನುಗ್ಗಿದೆ. ಮಾಧ್ಯಮಗಳು ಯಾವಾಗಲೂ ಕಾನೂನು ಕ್ರಮ ಎತ್ತಿಹಿಡಿಯುವುದಾಗಿ

ಹೇಳುತ್ತಿರುತ್ತವೆ; ಆದರೆ ಸರ್ವೋಚ್ಚ ನ್ಯಾಯಾಲಯದ ಕ್ರಮೋಲ್ಲಂಘನೆಯನ್ನು ಪ್ರಶ್ನಿಸಲಿಲ್ಲ. ಮುಂದೆ ಯಾವುದೋ ಕಾವೇರಿ ಟ್ರಿಬ್ಯುನಲ್ ರಚಿಸಬೇಕಾಗಿ ಬಂದರೆ ಅದರ ಅಧ್ಯಕ್ಷರು ಯಾರಿರಬೇಕೆಂದು ಸರ್ವೋಚ್ಚ ನ್ಯಾಯಾಲಯವು ಘೋಷಿಸಬಹುದೆ? ಅಥವಾ ಅಧ್ಯಕ್ಷನನ್ನು ನೇಮಿಸಬೇಕೆಂದು ಕೇಂದ್ರ ಸರ್ಕಾರಕ್ಕೆ ನಿರ್ದೇಶಿಸುವುದಷ್ಟನ್ನೆ ಮಾಡಬೇಕೆ? ಕಾರ್ಯಾಂಗದ ಜವಾಬ್ದಾರಿಯನ್ನು ನ್ಯಾಯಾಂಗವು ತನ್ನ ಮೇಲೆ ಹೇರಿಕೊಳ್ಳಬೇಕಾಗಿಲ್ಲ.

* * *

ಚುನಾವಣೆಗಳು ಹತ್ತಿರ ಬರುತ್ತಿದ್ದ ಹಾಗೆ ಕಪ್ಪುಹಣದ ಚಲಾವಣೆಗೆ ಚಾಲ್ತಿ ಹೆಚ್ಚು. ಚುನಾವಣೆಗಳ ದೆಸೆಯಿಂದ ರಿಯಲ್ ಎಸ್ಟೇಟ್ ವ್ಯವಹಾರಕ್ಕೂ ಧಕ್ಕೆಯಾಗಿದೆ. ಇಲ್ಲಿ ನಡೆಯುವುದೆಲ್ಲ ಕಪ್ಪು ಹಣದಿಂದ ತಾನೆ. ಪ್ರಮುಖ ರಾಜಕೀಯ ಪಕ್ಷಗಳ ಮಧ್ಯೆ ಪೈಪೋಟಿ ಹೆಚ್ಚಿದ ಹಾಗೇ ಹಣ ಹೆಂಡದ ವಿತರಣೆಯು ಏರುತ್ತದೆ. ರೋಡ್ ಷೋಗಳು, ಸಭೆ ಸಮಾವೇಶಗಳ ಜೊತೆಗೆ ನಿತ್ಯೋಪಯೋಗಿ ವಸ್ತುಗಳ ಹಂಚಿಕೆ ಕೂಡ ಜೋರು. ಸೀರೆ, ಕಂಬಳಿ, ಬಟ್ಟೆಬರೆ, ಮೊಬೈಲ್ ಫೋನು, ಇನ್ನೂ ಬಗೆಬಗೆಯ ವಸ್ತುಗಳು ಹಾರಾಡುತ್ತವೆ. 'ನನ್ನ ಮತ ಮಾರಾಟಕ್ಕಿಲ್ಲ' ಎಂದು ತೋರ್ಬೆರಳು ತೋರುವ ಜಾಹೀರಾತುಗಳು ಒಂದು ಕಡೆ ಮಾಧ್ಯಮಗಳಲ್ಲಿ ಪ್ರಚಾರಕ್ಕೆ ನಿತ್ಯ ಬರುತ್ತಿದ್ದರೂ ಮತ ಮಾರುಕಟ್ಟೆ ಮಾತ್ರ ಮುಕ್ತವಾಗಿ ಭರಾಟೆಯಿಂದ ಸಾಗುತ್ತಿದೆ. ಇದನ್ನು ತಡೆಯುವುದು 'ಭಗವಂತ' ಎನ್ನುವವನಿಗೂ ಸಾಧ್ಯವಾಗದು. ಈ ಪೀಡೆಗಳೆಲ್ಲ ನಮ್ಮ ಚುನಾವಣಾ ವ್ಯವಸ್ಥೆಯಲ್ಲಿ ಬೇರೂರಿಬಿಟ್ಟಿವೆ. ಪರಿಸ್ಥಿತಿ ಹೀಗಿರುವಾಗ ಚುನಾಯಿತ ಪ್ರತಿನಿಧಿಗಳೂ ಎಂಥವರಾಗಿರುತ್ತಾರೆ ನೀವೇ ಆಲೋಚಿಸಿ. ಕಾಸಿಗೆ ತಕ್ಕ ಕಜ್ಜಾಯ. ಚುನಾವಣೆಯಲ್ಲಿ ಸ್ಪರ್ಧಿಸಿರುವವರು ನಮ್ಮ ರಾಜ್ಯದಲ್ಲೇ ಸಾವಿರಾರು ಮಂದಿ. ಆಯ್ಕೆಯಾಗುವವರು ಇಪ್ಪತ್ತೆಂಟೇ ಮಂದಿ. ಇಡುಗಂಟು ರೂ. ೨೫,೦೦೦. ಅದನ್ನು ಕಳೆದುಕೊಳ್ಳುವವರೇ ಹೆಚ್ಚು. ಚುನಾವಣೆ ವೆಚ್ಚ ಭರಿಸಲು ಇದೂ ಒಂದು ಆಕರ – ಇದರ ಜೊತೆಗೆ ಪೊಲೀಸರು ಜಪ್ತಿ ಮಾಡುವ ಕೋಟಿಗಟ್ಟಲೆ ಹಣ ಬೇರೆ. ಕರ್ನಾಟಕ ಒಂದರಲ್ಲೇ ಇದುವರೆಗೆ, ಚುನಾವಣೆ ಗಳಿಗೆ ಇನ್ನು ಒಂದು ವಾರ ಇರಬೇಕು ಎನ್ನುವಂತೆಯೇ ಚುನಾವಣಾ ಆಯೋಗದ ಮಾಹಿತಿಯಂತೆ ಪೊಲೀಸರು ವಶಪಡಿಸಿಕೊಂಡಿರುವ ಮೊತ್ತ ಹತ್ತಿರ ಹತ್ತಿರ ಮೂವತ್ತು ಕೋಟಿ. ಇದರಲ್ಲಿ ಸೋರಿಹೋಗಿರುವುದೆಷ್ಟೊ, ಇನ್ನು ಇಡೀ ದೇಶದಲ್ಲಿ ಎಷ್ಟಾಗುತ್ತದೊ. ಚುನಾವಣೆ ಮುಗಿದ ಮೇಲೆ ಗೊತ್ತಾದೀತು. ಬೆಂಗಳೂರು ನಗರದಲ್ಲಿ ಒಂದೇ ದಿನ ೧೩.೭೪ ಲಕ್ಷ ರೂ. ಮದ್ಯ ಹಾಗೂ ಲಕ್ಷಾಂತರ ರೂಪಾಯಿ ನಗದು ವಶಪಡಿಸಿ ಕೊಳ್ಳಲಾಗಿದೆ. ಇದು 'ಕಟ್ಟೆಚ್ಚರ' ವಹಿಸಿರುವ ಚುನಾವಣಾಧಿಕಾರಿಗಳ ಕಣ್ಣಿಗೆ ಬಿದ್ದದ್ದು. ಅವರ ಕಣ್ಣು ತಪ್ಪಿಸಿ ಇನ್ನೆಷ್ಟು ಹಣ ಸಾಗಣೆಯಾಗಿ ವಿತರಣೆ ಯಾಗಿದೆಯೋ ಯಾರು ಬಲ್ಲರು. ಕೋಟ್ಯಾಧಿಪತಿಗಳೇ ಹೆಚ್ಚಾಗಿ ಸ್ಪರ್ಧಿಸಿರುವುದರಿಂದ ಈ ಹಣ ವಿನಿಯೋಗ ಒಂದು ಬಗೆಯಾದಾಗ ಏನೆನ್ನೋಣ. ಇದರಿಂದ ಚುನಾವಣೆಯ ದಿನಗಳಲ್ಲಾದರೂ ಬಡತನ ನಿವಾರಣೆ ಕಿಂಚಿತ್ತಾದರೂ ಆದೀತು! ಇದಲ್ಲದೆ ಸಾಕಷ್ಟು ಜನ 'ಕಾರ್ಯಕರ್ತರಿಗೆ' ದಿನಗೂಲಿಯೂ ಸಿಗುತ್ತದೆ. ಇದರಿಂದ ತಾತ್ಕಾಲಿಕವಾಗಿ ನಿರುದ್ಯೋಗದ ನಿವಾರಣೆಯೂ ಆಯಿತು. ಅಂತೂ ಹದಿನಾರನೆ ಲೋಕಸಭೆ ಚುನಾವಣೆ ಮುಗಿಯುತ್ತದೆ. ಜನಪ್ರತಿನಿಧಿಗಳ ನಡವಳಿಕೆಯೂ ಹಿಂದಿನದಕ್ಕಿಂತ ಬೇರೆಯಾಗಿರದು.

* * *

ಸಾಹಿತಿಗಳು ಮತ್ತು ರಾಜಕೀಯದ ಬಗ್ಗೆ ಸಾಕಷ್ಟು ಚರ್ಚೆ ಪ್ರಿಂಟ್ ಹಾಗೂ ಇಲೆಕ್ಟ್ರಾನಿಕ್ ಮಾಧ್ಯಮದಲ್ಲಿ ಅಬ್ಬರದಿಂದ ನಡೆಯುತ್ತಿದೆ. ಪರ, ವಿರೋಧ ಅಭಿಪ್ರಾಯಗಳು ವ್ಯಕ್ತವಾಗುತ್ತಿವೆ. ಈ ವಿವಾದ ಸೃಷ್ಟಿಸಿರು ವವರು ಮುಖ್ಯವಾಗಿ ಭಾಜಪದವರು. ಇದು ಯಾವತ್ತಿ ನಿಂದಲೂ ನಡೆದದ್ದೆ. ಹಿಂದೆ ಅರವತ್ತರ ದಶಕದಲ್ಲಿ ನಮ್ಮ ಶ್ರೇಷ್ಠ ಕಾದಂಬರಿಕಾರರಲ್ಲಿ ಒಬ್ಬರಾದ ಶಿವರಾಮ ಕಾರಂತರು ಅಳಿದುಹೋದ ಬಲಪಂಥೀಯ ಸ್ವತಂತ್ರ ಪಕ್ಷದ ಅಭ್ಯರ್ಥಿಯಾಗಿ ಲೋಕಸಭೆಗೆ ಸ್ಪರ್ಧಿಸಿದ್ದರು. ಹಾಗೆಯೇ ಬೆಂಗಳೂರಿನಲ್ಲಿ ಒಂದು ಕ್ಷೇತ್ರದಿಂದ ನವ್ಯ ಕಾವ್ಯದ ಹರಿಕಾರ ಗೋಪಾಲಕೃಷ್ಣ ಅಡಿಗರು ಭಾಜಪ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಆಗಲೂ ಸಾಹಿತಿಗಳು ರಾಜಕೀಯದಲ್ಲಿ ಭಾಗವಹಿಸುವುದು ಎಷ್ಟು ಸರಿ ಎಂಬ ವಿವಾದ ಇತ್ತು. ಒಂದೊಂದು ಸಲ ಚುನಾವಣೆ ಬಂದಾಗಲೂ ಇಂಥ ಪ್ರಶ್ನೆ ಏಳುತ್ತಲೇ ಇದೆ ನಮ್ಮ ಚುನಾವಣಾ ವ್ಯವಸ್ಥೆಯ ಒಂದು ಭಾಗವೋ ಎನ್ನುವಂತೆ.

ಇಲ್ಲಿ ಮುಖ್ಯವಾದ ಪ್ರಶ್ನೆ ಇರುವುದು ಸಾಹಿತಿಗಳು ಎಂದಮಾತ್ರಕ್ಕೆ ಅವರು ಈ ದೇಶದ ನಾಗರಿಕರು ತಾನೆ. ಅವರು ಯಾವುದೇ ವಿಷಯದಲ್ಲೂ ತಮ್ಮದೇ ಆದ ಅಭಿಪ್ರಾಯ ಹೊಂದಿರಲು ಸಂವಿಧಾನದ ಪ್ರಕಾರ ಹಕ್ಕು ಇದೆ. ಹಾಗಾಗಿ ಅವರು ರಾಜಕೀಯದಲ್ಲಿ ಭಾಗವಹಿಸಬಾರದು ಎನ್ನುವುದು ಎಷ್ಟು ಸರಿ. ಎಲ್ಲ ನಾಗರಿಕರಿಗಿರುವಂತೆಯೇ ಅವರಿಗೂ ಯಾವುದೇ ಅಭ್ಯರ್ಥಿಯ, ಪಕ್ಷದ ಪರವಾಗಿ ತಮ್ಮ ಅಭಿಪ್ರಾಯ ವ್ಯಕ್ತಗೊಳಿಸಲು ಹಕ್ಕು ಇದ್ದೇ ಇರುತ್ತದೆ. ನಮ್ಮ ಸಾಹಿತಿಗಳು, ಚಿಂತಕರು ಬಹುತೇಕ 'ಜಾತ್ಯತೀತ' ನಿಲುವು ತಳೆದಿದ್ದಾರೆ. ಇದು ಸ್ವಾಗತಾರ್ಹ. ಇದು ಕೋಮುವಾದಿಗಳಿಗೆ, ಹಿಂದುತ್ವವಾದಿಗಳಿಗೆ ಅಪಥ್ಯ. ಅಂಥವರು ಯಾವತ್ತೂ ಭಾಜಪದ ಅವಕೃಪೆಗೆ ತುತ್ತಾಗಿದ್ದಾರೆ. ಸಾರಾಸಗಟಾಗಿ ಎಲ್ಲ ಬುದ್ಧಿಜೀವಿ ಗಳನ್ನು ಕಮ್ಯುನಿಸ್ಟರೆಂದೊ, ಮಾರ್ಕ್ಸ್‌ವಾದಿಗಳೆಂದೊ, ಮುಸ್ಲಿಮರ ಪರ ಎಂದೋ ಹಣೆಪಟ್ಟಿ ಮಾಡುವುದು ಭಾಜಪದ ಮಟ್ಟಿಗೆ ಮೊದಲಿನಿಂದಲೂ ಬಂದದ್ದೆ. ಅವರ 'ಹಿಂದುತ್ವ'ಕ್ಕೆ ಅನುವಾಗಿರುವ ಸಾಹಿತಿಗಳು ಬೇಕಾದಷ್ಟಿದ್ದಾರೆ. ಮತದಾನದ ಹಕ್ಕು ಎಲ್ಲರಿಗೂ ಇರುವಂತೆಯೇ ಸಾಹಿತಿಯಾಗಿರುವವನಿಗೂ ಯಾವುದೇ ಪಕ್ಷದ ಪರವಾಗಿರಲು ಹಕ್ಕಿರುತ್ತದೆ. ಇದನ್ನೇ ದೊಡ್ಡದು ಮಾಡುವುದು ಮೂರ್ಖತನ.

* * *

ಕಳೆದ ಮೂರು ನಾಲ್ಕು ಲೋಕಸಭೆಗಳಲ್ಲಿ ಕಲಾಪಗಳು ಸಮರ್ಪಕವಾಗಿ ನಡೆದಿರುವ ದಿನಗಳೇ ಕಡಿಮೆ. ಮುಂದೆ ಬರುವ ಹದಿನಾರನೆ ಲೋಕಸಭೆ ಇದಕ್ಕಿಂತ ಭಿನ್ನವಾಗಿರದು ಎಂದು ಖಚಿತವಾಗಿ ಹೇಳಬಹುದು. ಏಕೆಂದರೆ ನಿಂತಿರುವ ಅಭ್ಯರ್ಥಿಗಳ ಪಟ್ಟಿಯನ್ನು ಅವಲೋಕಿಸಿದರೆ ಮೂರನೇ ಒಂದು ಭಾಗದಷ್ಟು ಕೂಡ ಹೊಸ ಮುಖಗಳಿಲ್ಲ. 'ಸುರಕ್ಷಿತತೆ' ಹೆಸರಿನಲ್ಲಿ ಎಲ್ಲ ಪ್ರಮುಖ ಪಕ್ಷಗಳವರೂ ಹಳೆ ಹುಲಿಗಳನ್ನೇ ಕಣಕ್ಕಿಳಿಸಿದ್ದಾರೆ. ಪ್ರಶ್ನೆ ಮಾಡಿದರೆ ಅನುಭವ ಮುಖ್ಯ ಎನ್ನುತ್ತಾರೆ. ಇನ್ನು ಮಹಿಳಾ ಅಭ್ಯರ್ಥಿಗಳ ಸಂಖ್ಯೆಯೂ ಕಡಿಮೆಯೇ. ಮೂರನೇ ಒಂದು ಪಾಲಿನಷ್ಟು ಮೀಸಲಾತಿ ಖಂಡಿತ ಕನಸಿನ ಮಾತು. ಯಾವುದೇ ಸರಕಾರ ಅಧಿಕಾರಕ್ಕೆ ಬಂದರೂ ಮಸೂದೆ ಕಪಾಟಿನಲ್ಲೇ ಕೊಳೆಯುವುದು ನಿಶ್ಚಿತ. ಕೆಲ ವಿಷಯಗಳಲ್ಲಿ ಬದಲಾವಣೆ ಸಾಧ್ಯವೇ ಇಲ್ಲವೇನೋ ಎನಿಸುತ್ತದೆ. ಅದೇನೇ ಇರಲಿ, ರಾಜಕಾರಣಿಗಳ ನಾಲಗೆಗೆ ನಿಯಂತ್ರಣವೇ ಇರದು. ಚುನಾವಣೆಯ ಕಾಲ ಬಂದರೆ ಬಾಯಿಗೆ ಬಂದಂತೆ ಮಾತನಾಡುತ್ತಾರೆ. ಏಕವಚನದಲ್ಲಿ ಬಯ್ದಾಡುವುದು, ಮೂದಲಿಸುವುದು, ಚಾರಿತ್ರ್ಯವಧೆ ಇವೆಲ್ಲಕ್ಕೂ ಮಿತಿಯೇ ಇರುವುದಿಲ್ಲ. ಉತ್ತರ ಪ್ರದೇಶ ಇಂಥ ವಿಷಯಗಳಲ್ಲಿ ಮುಂದೆ ಎಂದು ಕಾಣುತ್ತದೆ. ಅಲ್ಲಿ ಅಧಿಕಾರದಲ್ಲಿರುವ ಸಮಾಜವಾದಿ ಪಕ್ಷದ ನಾಯಕ ಮುಲಾಯಮ್ ಸಿಂಗ್ ಯಾದವ್, ಈತನೂ ಪ್ರಧಾನಿಯಾಗುವ ಕನಸುಗಾರರಲ್ಲಿ ಒಬ್ಬ. ರೇಪ್ ಕೇಸಿನಲ್ಲಿ ಗಲ್ಲುಶಿಕ್ಷೆ ವಿಧಿಸುವ ಬಗ್ಗೆ ವಿವಾದಾತ್ಮಕ ಹೇಳಿಕೆ ನೀಡಿ ಫಜೀತಿಗೆ ಸಿಕ್ಕಿಕೊಂಡಿದ್ದಾರೆ. ಅವರ ಹೇಳಿಕೆಯು ಮಹಿಳೆಯರಿಗೆ ಆಕ್ರೋಶ ತಂದಿದೆ. ಅಲ್ಲಿಯವನೇ ಆದ, ಅದೇ ಪಕ್ಷದ ಅಜಮ್ ಖಾನ್ ಮೇಲೆ, ಗುಜರಾತಿನ ಗೃಹಸಚಿವ, ಭಾಜಪದ ಪ್ರಧಾನಿ ಅಭ್ಯರ್ಥಿ ನರೇಂದ್ರ ಮೋದಿಯ ಬಲಗೈ ಭಂಟ ಅಮಿತ್ ಷಾ ವಿರುದ್ಧ ಚುನಾವಣಾ ಆಯೋಗ ಕ್ರಮ ಕೈಗೊಂಡಿದೆ. ಉತ್ತರ ಪ್ರದೇಶದಲ್ಲಿ ಈ ಇಬ್ಬರೂ ಪ್ರಚಾರ ನಡೆಸಕೂಡದೆಂದು ತಡೆಹಾಕಿದೆ. ಇಬ್ಬರ ಮೇಲೂ ಸಂಬಂಧಪಟ್ಟ ಪೊಲೀಸರು ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಿದ್ದರೆ ಇಬ್ಬರಿಗೂ ಇದು ಹೊಸದೇನಲ್ಲ. ಈಗಾಗಲೇ ಅವರು ಹಲವು ಕ್ರಿಮಿನಲ್ ಮೊಕದ್ದಮೆಗಳನ್ನು ಎದುರಿಸುತ್ತಿದ್ದಾರೆ. ಕರ್ನಾಟಕದಲ್ಲೂ ಚುನಾವಣಾ ಆಯೋಗ ನಾಲಿಗೆ ಹರಿಹಾಯಿಸುವವರ ವಿರುದ್ಧ ಕ್ರಮ ಜರುಗಿಸಿದೆ. ಮುಖ್ಯಮಂತ್ರಿ ಸಿದ್ದರಾಮಯ್ಯ ನವರಿಂದ ಹಿಡಿದು, ಈಶ್ವರಪ್ಪ, ಯಡಿಯೂರಪ್ಪ, ಪ್ರಮೋದ್ ಮುತಾಲಿಕ್, ಪ್ರತಾಪಸಿಂಹ, ಪ್ರಹ್ಲಾದ ಜೋಷಿ ಮೊದಲಾದವರ ಮೇಲೆ ನೋಟೀಸು ಜಾರಿಮಾಡಿದೆ. ಅದು ಕ.ಬು.ಗೆ ಸೇರುವುದಂತೂ ಖಚಿತ. ಏಕೆಂದರೆ ಈ ಘಟಾನುಘಟಿಗಳು ಯಾವುದಕ್ಕೂ ಕ್ಯಾರೇ ಎನ್ನುವುದಿಲ್ಲ. ಅಂದಹಾಗೆ ಬಳ್ಳಾರಿಯ ಶ್ರೀರಾಮುಲು ಆತನ ಗುರು ಯಡಿಯೂರಪ್ಪನವರಂತೆಯೇ ಕಟ್ಟಿದ ಪಕ್ಷವನ್ನು ಅಂಬೋ ಎಂದು ಕೈಬಿಟ್ಟು ಭಾಜಪ ಸೇರಿಕೊಂಡು ಕೇಂದ್ರದಲ್ಲಿ ಮಂತ್ರಿ ಆಗೋ ಕನಸು ಕಾಣುತ್ತಿರಬೇಕು. ಇವರನ್ನು ನಂಬಿಕೊಂಡು ಮಾತೃಪಕ್ಷ ತೊರೆದು ಬಂದವರು ಈಗ ಕಂಗಾಲು. ಸಂದರ್ಭ ಸಾಧಕತನಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕೆ? ಭಾಜಪ ನಾಯಕರು ಇದಕ್ಕೆ ಏನೆನ್ನುತ್ತಾರೆ? ರಾಜಕೀಯದಲ್ಲಿ ಏನು ಬೇಕಾದರೂ ಆಗಬಹುದು. ಅದರಲ್ಲೂ ಚುನಾವಣೆಗಳ ಕಾಲದಲ್ಲಿ ಅದಕ್ಕೆ ಲಂಗುಲಗಾಮು ಏನೂ ಇರುವುದಿಲ್ಲ.




✉ ಜಾತಿ ವ್ಯವಸ್ಥೆಯ ಪೋಷಕರು ಯಾರು ? ಪುರುಷನೇ ? ಮಹಿಳೆಯೇ ? ಎಂಬ ಪ್ರಶ್ನೆ ಮೂಡುವುದು ದಿಟ. ಆದರೆ ಭಾರತದಂತಹ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಜಾತಿಯ ಪ್ರತಿಪಾದಕ ಪುರುಷನೆಂಬುದೇ ಈ ಹೊತ್ತಿನ ಸತ್ಯ ಸಂಗತಿ.

ನನ್ನೂರಿನ ಒಕ್ಕಲಿಗ ಅಣ್ಣ–ತಮ್ಮಂದಿರಿಬ್ಬರು ಪುರಾತನ ಕಾಲದಲ್ಲಿ ನೇಗಿಲು ಹಿಡಿದು ಉಳುಮೆ ಮಾಡುತ್ತಿದ್ದ ಪ್ರಸಂಗ. ರಣ–ರಣ ಬಿಸಿಲು. ಬಾಯಾರಿಕೆ ಉಂಟಾಗಿ ನೀರು ಕುಡಿಯಬೇಕೆನ್ನಿಸುತ್ತದೆ. ಆದರೆ ತೊರೆ, ಹಂಚಲು ಆದಿಯಾಗಿ ಎಲ್ಲೂ ನೀರಿನ ಸುಳಿವಿಲ್ಲ. ಆಗ ತಮ್ಮನಿಗೆ ಮಲೆನಾಡಿನ ಕಲ್ಪವೃಕ್ಷ ಎಂದೇ ಬಿಂಬಿತವಾಗಿರುವ 'ಬಗುನಿ' ಎಂಬ ಮರಕ್ಕೆ ಪೂಜಾರಿ (ಘಟ್ಟ ಪ್ರದೇಶದ ಬಿಲ್ಲವ ಸಮುದಾಯದ ಒಂದು ಜಾತಿ) ಸೇಂದಿಗೆ ಮಡಿಕೆ ಕಟ್ಟಿರುವುದು ಕಣ್ಣಿಗೆ ಬೀಳುತ್ತದೆ. ಅಣ್ಣನಿಗೆ ತಿಳಿಯದಂತೆ ಮರವೇರಿದ ತಮ್ಮ ಬಗುನಿ ಹಿಂಗಾರ ಅರಿದು (ಕತ್ತರಿಸಿ) ಸೇಂದಿ ಕುಡಿದು ದಾಹ ನೀಗಿಸಿಕೊಳ್ಳುತ್ತಾನಂತೆ.

ಪೂಜಾರಿಗೆ ಬೇಸರ. ತನ್ನ ಸಂಪತ್ತಿಗೆ ಕೈ ಹಾಕಿದವನಿಗೆ ಬುದ್ಧಿ ಕಲಿಸುವ ಮನದಿಂಗಿತ ಮೂಡುತ್ತಲೇ ಬಾಯಿ ಒಣಗಿದರೂ ಏನೂ ಕುಡಿಯದೆ ಕಾಯಕನಿರತನಾಗಿದ್ದ ಅಣ್ಣನಿಗೆ ಹಾಗೂ ಒಕ್ಕಲಿಗ ಸಮುದಾಯದವರಿಗೆ ದೂರು ನೀಡುತ್ತಾನೆ. ಪಂಚಾಯಿತಿ ಏರ್ಪಟ್ಟು ಅಲ್ಲಿ ತಮ್ಮನಿಗೆ ಪ್ರಶ್ನೆ ಕೇಳಲಾಗುತ್ತದೆ : "ತಮ್ಮ, ನೀನು ಕುಯ್ದಿದ್ದನ್ನು ಕುಡಿಯುವವನಾ ? ಕುಯ್ದುಕೊಂಡು ಕುಡಿಯುವವನಾ ?" ಈ ಅನಿರೀಕ್ಷಿತ ಪ್ರಶ್ನೆ ಎದುರಾದಾಗ ಸಂಪ್ರದಾಯಕ್ಕೆ ಬದ್ಧವಾದ ಉತ್ತರವನ್ನೇ ನೀಡುತ್ತಾನಂತೆ ಆ ತಮ್ಮ : "ಹೌದು ಸ್ವಾಮೀ, ನಾನು ಕುಯ್ದುಕೊಂಡು ಕುಡಿಯುವವನಲ್ಲ. ಕುಯ್ದದ್ದನ್ನು ಕುಡಿಯುವವನು !" ಅಂದಿನಿಂದ ತಮ್ಮನನ್ನು ಒಕ್ಕಲಿಗ ಜಾತಿಯಿಂದ ಬಹಿಷ್ಕಾರ ಮಾಡಲಾಯಿತು. ಅವನಿಗೆ 'ಅರಿಕಾರ' (ಕತ್ತರಿಸಿ ಕುಯ್ದುಕೊಂಡು ಕುಡಿದವನು ಎಂಬ ಅರ್ಥದಲ್ಲಿ.) ಎಂದು ಕರೆದು ಹೆಸರಿಸಲಾಯಿತು. ಹೀಗಾಗಿ ತಮ್ಮ ಅರಿಕಾರನಾಗಿ ಬಿಲ್ಲವ (ಪೂಜಾರಿ) ಸಮುದಾಯದ ಹೆಣ್ಣನ್ನು ಮದುವೆಯಾಗಿ ತಮ್ಮ ವಂಶ ಪೋಷಿಸಿದ. ಅಣ್ಣ ಒಕ್ಕಲಿಗನಾಗಿಯೇ ಮುಂದುವರಿದ.

ನನ್ನಜ್ಜ ಹೇಳುತ್ತಿದ್ದ ಜಾತಿ ಹುಟ್ಟಿನ ಕಟ್ಟುಕತೆ ಅಲ್ಲದ ನಿಜ ಪೌರಾಣಿಕ ಈ ಪ್ರಸಂಗ ಜಾತಿ ಹುಟ್ಟಿನ ಕಾರಣಗಳನ್ನು ಅತ್ಯಂತ ವರ್ಣನೀಯವಾಗಿ ಕಟ್ಟಿಕೊಡುತ್ತದೆ. ಪುರುಷನೇ ಜಾತಿ ಪ್ರಜ್ಞೆಯ ನಿರ್ಣಾಯಕ ಎಂಬುದನ್ನು ಧ್ವನಿಸುತ್ತದೆ. ಈಗ ಅರಿಕಾರರು 'ಜಾತಿ ಪ್ರಮಾಣಪತ್ರ'ದಲ್ಲಿ ಒಕ್ಕಲಿಗರೆಂದೇ ಹೆಸರು ನಮೂದಿಸುತ್ತಾರೆ. ಅಂದಿನ ಅರಿಕಾರರ ಜವರಯ್ಯ ಈಗ ದಾಖಲೆಯ ಪ್ರಕಾರ ಜವರೇಗೌಡನಾಗಿ ಗೋಚರಿಸುತ್ತಾನೆ. ಇದೊಂದು ಬಹುಸಂಖ್ಯಾತ ಜಾತಿಯ ನಡುವೆ ಅಲ್ಪಸಂಖ್ಯಾತ ಸಮುದಾಯ




ತಾವೂ ಜಾತಿ ಶ್ರೇಷ್ಠತೆಯ ನೆಲೆಯಲ್ಲಿ ಗುರುತಿಸಿಕೊಳ್ಳುವ ಪ್ರಯತ್ನವಾಗಿ ಕಾಣುತ್ತದೆ. ಆದರೆ ಇದು ಸಂಬಂಧ ಬೆಸೆಯುವ ಕ್ಷಣದಲ್ಲಿ ಸಂಘರ್ಷವಾಗಿ ಮಾರ್ಪಾಟಾಗುತ್ತಿರುವುದು ನೋವಿನ ಸಂಗತಿಯಾಗಿ ಕಾಡುತ್ತದೆ.

ಕಳೆದ ಎರಡು ವರ್ಷದ ಹಿಂದೆ ಅರಿಕಾರರ ಓದಿದ ಹುಡುಗನೊಬ್ಬ ಒಕ್ಕಲಿಗರ ಹುಡುಗಿಯನ್ನು ಮದುವೆಯಾದ. ಕೊನೆಗೆ ಅವನು ಒಕ್ಕಲಿಗನಲ್ಲ, ಅರಿಕಾರ ಎಂದು ತಿಳಿಯುತ್ತಲೇ ಅವಳ ಕಡೆಯವರು ಪಂಚಾಯಿತಿ ಮಾಡಿ ಅವನಿಗೆ ದಂಡ ವಿಧಿಸಿದ್ದಲ್ಲದೆ ಬಾಂಧವ್ಯದ ಬೆಸುಗೆ ಕತ್ತರಿಸಿ ಅವಳನ್ನು ಮನೆಗೆ ಎಳೆದೊಯ್ದರು.

ನನ್ನ ಕಾಲೇಜಿನ ವಿದ್ಯಾರ್ಥಿಯೊಬ್ಬ ಸ್ಕಾಲರ್‌ಶಿಪ್‌ಗೆ ಅರ್ಜಿ ಹಾಕುವ ಸಲುವಾಗಿ 'ಜಾತಿ ಪ್ರಮಾಣಪತ್ರ'ವನ್ನು ಅಡ್ಡಾದಿಡ್ಡಿ ಮಡಚಿ ತನ್ನ ಒಳ ಜೋಬಿನೊಳಗೆ ಇಟ್ಟುಕೊಂಡಿದ್ದನೆಂದು ತೋರುತ್ತದೆ. ಕಿರುಪರೀಕ್ಷೆಗೆ 'ಕಾಪಿಚೀಟಿ' ಅಡಗಿಸಿಟ್ಟುಕೊಂಡಿರುವನೆಂದು ಭಾವಿಸಿದ ನಾನು ಅದೇನು ತೆಗೆದುಕೊಡು ಎಂದೆ. "ಬೇಡ ಸಾರ್, ಇದು ಅದಲ್ಲ" ಎಂದ. ಕೊನೆಗೂ ಕಸಿದುಕೊಂಡು ನೋಡಿದೆ. ಜಾತಿ ಪ್ರಮಾಣ ಪತ್ರ ! ಮತ್ತೆ ಆತನಿಗೆ ವಾಪಸ್ಸು ಕೊಟ್ಟೆ. ಹೊರಗೆ ಬಂದವನು, "ಸಾರ್ ದಯವಿಟ್ಟು ನಾನು ಇಂಥವನು ಅಂತ ಯಾರಿಗೂ ಹೇಳಬೇಡಿ !" ಎಂದ. ಕಣ್ಣಂಚಲ್ಲಿ ಮಾಲೆಗೊಂಡ ಹನಿಗಳು ಪಳಪಳನೆ ಉದುರಿದವು. "ಯಾರಿಗೂ ಹೇಳಲ್ಲ, ಅಳಬೇಡ, ಯಾಕೆ ಮುಜುಗರ ?" ಪ್ರಶ್ನೆ ಮಾಡಿದೆ. ಅದಕ್ಕೆ ಅವನ ಉತ್ತರ ಹೀಗಿತ್ತು : "ಸಾರ್, ನಮ್ಮಪ್ಪ ಎಸ್.ಟಿ., ನಮ್ಮಮ್ಮ ಒಕ್ಕಲಿಗರ ಗೌಡ್ರು. ಅಪ್ಪನ ದೃಷ್ಟಿಯಲ್ಲಿ ನಾನು ಎಸ್.ಟಿ.ಯೇ ಆದ್ರೆ ಗೆಳೆಯರ ಹತ್ರ ನಾನು ಗೌಡ್ರು ಅಂತಾನೆ ಪರಿಚಯಿಸಿಕೊಂಡಿದ್ದೇನೆ. ದಯವಿಟ್ಟು ಸಾರ್ !" ಎಂದು ಕೈಮುಗಿದು ನಿಂತ. ಅಪ್ಪನ ಜಾತಿ ಅಮ್ಮನ ಪ್ರೀತಿಯಲ್ಲಿ ಬೇಯುತ್ತಿರುವ ಹುಡುಗನ ಮನಃಸ್ಥಿತಿ ಕಂಡು ಬೆರಗಾಗಿ ನಿಂತೆ.

ಈ ನಡುವೆ ಜಾತಿ ವ್ಯವಸ್ಥೆ ಇನ್ನಷ್ಟು ಸಂಕೀರ್ಣಗೊಳ್ಳಲು ಪುರುಷಪ್ರಧಾನ ಅಸ್ತಿತ್ವವೇ ಕಾರಣವಾಗಿದೆ. ಭವಿಷ್ಯದಲ್ಲಿ ಮಹಿಳೆ ಈ ಬೇಡಿಯಿಂದ ಬಿಡುಗಡೆ ಹೊಂದಲು ಉತ್ತಮ ಶಿಕ್ಷಣ ಹಾಗೂ ಸ್ವಾವಲಂಬಿ ಉದ್ಯೋಗವನ್ನು ಹೊಂದುವುದು ಅನಿವಾರ್ಯ ಪರಿಹಾರ ಕೂಡ ಆಗಿದೆ.

*ಮೂಡಿಗೆರೆ* **ಸಂಪತ್ ಬೆಟ್ಟಗೆರೆ**

✉ ಭಾರತ ಸ್ವಾತಂತ್ರ್ಯ ಸಂಗ್ರಾಮದ ಸುದೀರ್ಘ ಹೋರಾಟದ ಇತಿಹಾಸವೇ ರೋಮಾಂಚನಕಾರಿ ಮತ್ತು ಅವಿಸ್ಮರಣೀಯ. ದೇಶದುದ್ದಗಲಕ್ಕೂ ಹಲವಾರು ರೈತರು, ಕಾರ್ಮಿಕರು, ವಿದ್ಯಾರ್ಥಿಗಳು, ಕೃಷಿಕೂಲಿಕಾರರೆನ್ನುವ ಭೇದವಿಲ್ಲದೇ ಅಹರ್ನಿಶಿ ಹೋರಾಟ ಮಾಡಿದ ಫಲಶ್ರುತಿಯೇ ದೇಶದ ಸ್ವಾತಂತ್ರ್ಯ. ಸಮಗ್ರ ಏಳು ದಶಕಗಳ ಅವಿಶ್ರಾಂತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಕ್ಕಳು, ಹಿರಿಯರು, ವಯಸ್ಕರು, ಸರ್ವಧರ್ಮೀಯರು ಹಾಗೂ ಸರ್ವವರ್ಗದ ಜನರು ಶ್ರಮಪಟ್ಟು ಹೋರಾಡಿದ ಘಟನೆಗಳು, ಮರೆಯಲಾಗದ ಘಟನೆಗಳು. ಅಂತಹದ್ದೊಂದು ಸ್ವಾತಂತ್ರ್ಯ ಹೋರಾಟದ ಘಟನೆಯಲ್ಲಿ ಮಹಿಳೆಯರೇ ಭಾಗವಹಿಸಿದ್ದೊಂದು ಹೆಗ್ಗಳಿಕೆ.

ಬ್ರಿಟಿಷ್ ಸರ್ಕಾರದ ಕರನೀತಿಯ ವಿರುದ್ಧ ಕರನಿರಾಕರಣೆ ಉಪವಾಸ ಸತ್ಯಾಗ್ರಹವನ್ನು ಮಹಿಳೆಯರೇ ನಡೆಸಿ ಯಶಸ್ಸು ಸಾಧಿಸಿದ್ದು ಬಹುಶಃ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿಯೇ ವಿರಳವಾದ ಘಟನೆಯಾಗಿರುವುದು.

ಭಾರತ ಸ್ವಾತಂತ್ರ್ಯ ಸಂಗ್ರಾಮದ ಸುವರ್ಣ ಸಂಪುಟದಲ್ಲಿ ಉತ್ತರಕನ್ನಡ ಜಿಲ್ಲೆಯ ಕರ ನಿರಾಕರಣೆಯ ಸತ್ಯಾಗ್ರಹವೊಂದು ರೋಮಾಂಚಕಾರಿ

ಪುಟವಾಗಿದ್ದು, ಅದರಲ್ಲಿ ಮಾವಿನಗುಂಡಿಯಲ್ಲಿ ನಡೆದ ಮಹಿಳೆಯರ ಉಪವಾಸ ಸತ್ಯಾಗ್ರಹವು ಅವರ ದೇಶಭಕ್ತಿ, ಛಲ, ಸಂಕಲ್ಪ, ಸಹನೆ, ತ್ಯಾಗ ಮತ್ತು ಧೈರ್ಯಗಳ ನಿದರ್ಶನವಾಗಿದೆ. ೧೯೩೨ ಮೇ ೧೮ರಂದು ಕರ ನೀಡದ ರೈತರ ಎಮ್ಮೆಗಳನ್ನು ರಸ್ತೆ ಕೆಲಸದ ಕಾರಕೂನ ಹಾಗೂ ಓರ್ವ ಹವಾಲ್ದಾರ ಪಡೆದುಕೊಂಡಾಗ ಅವುಗಳನ್ನು ಮರಳಿ ಪಡೆಯಲು ಬಾಣಂತಿಯರು, ವಯಸ್ಕರು ಮತ್ತು ಮಕ್ಕಳು ಸಹಿತವಾಗಿ ಉಪವಾಸ ಸತ್ಯಾಗ್ರಹವನ್ನು ನಡೆಸಿದರು.

ಈ ಉಪವಾಸ ಸತ್ಯಾಗ್ರಹದಲ್ಲಿ ೩೨ ದಿನಗಳ ಉಪವಾಸಗೈದ ತ್ಯಾಗಲಿ ಭುವನೇಶ್ವರಮ್ಮ, ೨೨ ದಿವಸಗಳ ಕಾಲ ಉಪವಾಸ ಮಾಡಿದ ಕಲ್ಲಾಳ ಲಕ್ಷ್ಮಮ್ಮ ಅವಿಸ್ಮರಣೀಯ ಹೋರಾಟಗಾರ್ತಿಯರು. ಈ ಸತ್ಯಾಗ್ರಹಗಳೊಂದಿಗೆ ಹೋರಾಟದ ಮುಂಚೂಣಿಯಲ್ಲಿದ್ದವರು ದೊಡ್ಮನೆ ಮಹಾದೇವಮ್ಮ, ಕುಳಿಬೀಡು ಗಣಪಮ್ಮ, ಪಣಜಿಬೈಲ್ ದುಗ್ಗಮ್ಮ, ಕಿಳಿಬೀಡು ಭಾಗೀರಥಮ್ಮ, ಕಲ್ಲಾಳ ಕಾವೇರಮ್ಮ, ಹೊಸಕಪ್ಪ ಸೀತಮ್ಮ, ಗುಜಿಗೊಂಡ ಮಹಾದೇವಮ್ಮ ಹಾಗೂ ಹೆಗ್ಗಾರ ದೇವಮ್ಮ ಪ್ರಮುಖರಾಗಿರುವರು.

ಆಗಿನ ಮದ್ರಾಸ್ ಹಿಂದೂ ಪತ್ರಿಕೆ ಈ ಘಟನೆಯನ್ನು ವರದಿ ಮಾಡಿದ್ದರಿಂದ ಇದೊಂದು ರಾಷ್ಟ್ರಮಟ್ಟದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಹೋರಾಟದಲ್ಲಿ ಮಹಿಳೆಯರು ಭಾಗವಹಿಸಿದ ಪ್ರಮುಖ ಘಟನೆಯಾಗಿತ್ತು.

*ಧಾರವಾಡ* **ಸದಾಶಿವ ಮರ್ಜಿ**

✉ ಏಪ್ರಿಲ್ ೨೦೧೮ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾಗಿರುವ 'ದೇವರಿದ್ದಾನೋ ಇಲ್ಲವೋ' ಎಂಬ ಬರ್ಟ್ರಂಡ್ ರಸೆಲ್ ಅವರ ಲೇಖನದ ಕನ್ನಡ ಭಾವಾನುವಾದ ಶ್ರೀಮಾನ್ ಎಂ. ಅಬ್ದುಲ್ ರೆಹಮಾನ್ ಪಾಷ ಅವರ ಲೇಖನಿಯಲ್ಲಿ ಬಹಳ ಅಚ್ಚುಕಟ್ಟಾಗಿ ಮೂಡಿಬಂದಿದೆ.

"ನೈಸರ್ಗಿಕ ಶಕ್ತಿಗಳು ಅವನ ವಿರುದ್ಧ ಕೆಲಸ ಮಾಡದಿದ್ದಲ್ಲಿ ಮನುಷ್ಯ ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳುವುದರಲ್ಲಿ ಸ್ವತಂತ್ರನಾಗಿದ್ದಾನೆ. ಅದು ಅವನಿಗೆ ಸಿಕ್ಕ ಅವಕಾಶ, ಅದು ಅವನದೇ ಜವಾಬ್ದಾರಿ." ಈ ಸಾಲುಗಳು ಅಕ್ಷರಶಃ ನಿಜ. ಪ್ರಕೃತಿನಿಯಮಗಳನ್ನು ಅರಿತು ಜಾಣತನದಿಂದ ಜೀವಿಸುವವನ ಬದುಕು ಹಸನಾಗುತ್ತದೆ. ತನ್ನ ಇಚ್ಛಾಶಕ್ತಿಯ ಬಲದಿಂದ ಮನುಷ್ಯ ತನಗೆ ಬೇಕಾದುದನ್ನು ಸಾಧಿಸಬಲ್ಲ ಎಂಬುದಕ್ಕೆ ಅನೇಕ ಮಹನೀಯರ ಉದಾಹರಣೆಗಳು ನಮ್ಮ ಮುಂದಿವೆ. ದೇವರಿದ್ದಾನೋ, ಇಲ್ಲವೋ ನಾವಂತೂ ಇದ್ದೇವೆ. ದೇಹವೆಂಬ ನಮ್ಮ ಯಂತ್ರ ಸರಿಯಾಗಿ ಕೆಲಸ ಮಾಡುತ್ತಿರುವವರೆಗೆ ಜಗತ್ತಿನ ಎಲ್ಲ ಕಷ್ಟಕೋಟಲೆಗಳನ್ನು ಎದುರಿಸಿ ನಿಲ್ಲುವ ಚೈತನ್ಯ ನಮ್ಮೊಳಗೆ ಇರುತ್ತದೆ. ನಮ್ಮ ಅನೇಕ ಸಂದೇಹಗಳಿಗೆ ಸಮರ್ಪಕವಾದ ಉತ್ತರ ಸಿಗುವುದಿಲ್ಲ. ಅಂತಹ ವ್ಯರ್ಥ ಚಿಂತನೆಗಳಿಗೆ ಸಮಯ ಹಾಳುಮಾಡದೆ ಬದುಕಲು ನಮಗೆ ದೊರೆತಿರುವ ಅವಕಾಶವನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡು ಅದರ ಸವಿಯನ್ನು ಅನುಭವಿಸುವುದನ್ನು ಕಲಿಯಬೇಕಾಗಿದೆ. ಚಿಂತನಾಸಕ್ತರಿಗೆ ಉಪಯುಕ್ತ ಲೇಖನ. ಪ್ರಕಟಿಸಿದ್ದಕ್ಕೆ ಧನ್ಯವಾದಗಳು.

*ಬೆಂಗಳೂರು* **ಸರೋಜ ಕೃಷ್ಣಮೂರ್ತಿ**

✉ ಆತುರದಿಂದ ದಾರಿ ಕಾಯುತ್ತಿದ್ದ ೨೦೧೮ರ ವಿಶೇಷ ಸಂಚಿಕೆ ತಲುಪಿದೆ. ಉತ್ಸಾಹದಿಂದ ಪರಿವಿಡಿ ಮೇಲೆ ಕಣ್ಣಾಡಿಸಿದೆ. ಮೊದಲನೆಯ ಹಂತದಲ್ಲಿ ಈ ಕೆಳಗೆ ತಿಳಿಸಿದ ಲೇಖನಗಳನ್ನು ಓದಿದೆ, ಸಂತಸಪಟ್ಟೆ. ಲೇಖಕರೆಲ್ಲರೂ ತಮ್ಮ ವಿಚಾರಗಳನ್ನು ಪ್ರಭಾವಿತವಾಗಿ ಮಂಡಿಸಿದ್ದಾರೆ. ಈವರೆಗೆ ನಾನೋದಿದ ಲೇಖನಗಳು, ಸಂಪಾದಕೀಯ, ಈ ತಿಂಗಳು, ಹರ್ಷ ತಾರದ ವರ್ಷ ೨೦೧೩, ಗುಜರಾತ್ ಅಭಿವೃದ್ಧಿ ಮಾದರಿ V/s ಮಾನವ ಅಭಿವೃದ್ಧಿ ಮಾದರಿ, ಸಂಚಿಕೆಯಲ್ಲಿಯ ನಾಲ್ಕು ಸಂದರ್ಶನಗಳು, ಭಾರತದಲ್ಲಿ ಸ್ತ್ರೀವಾದಿ ಚಳವಳಿ ಮತ್ತು ದಲಿತ ಮಹಿಳಾ ಸಮಸ್ಯೆ, ನವಚಳವಳಿಗಳ ಪಥವೂ ಎಡಪಕ್ಷಗಳ ಸ್ಪಂದನವೂ, ದೀಪಸ್ತಂಭದ ಅಡಿಯಲ್ಲಿ ಮುಂತಾದವುಗಳು. ಈ ವಿಶೇಷ ಸಂಚಿಕೆಯಲ್ಲಿ ಮುಂದಿನ ಸಂಚಿಕೆ ಬರುವವರೆಗೂ ಸಾಕಾಗುವಷ್ಟು ವಿಷಯಗಳನ್ನು ಒದಗಿಸಿದ್ದೀರಿ. ಧನ್ಯವಾದಗಳು.

*ಮುಂಬಯಿ* **ಹ. ಶ್ರೀ. ಆಡೂರ**

# ಕ್ಷ - ಕಿರಣ

ಪ್ರಕಾಶ್ ಎಸ್.

## ರಿಲೆಯನ್ಸ್ ಸರ್ಕಸ್!



## ಪ್ರ ಮೋದಿ FAN: ಶ್ರೀರಾಮ ಸೇನೆ




## ಮೂರು ಮಹಾ ಸುಳ್ಳುಗಳು

ಮೋದಿ ಪ್ರಧಾನಿಯಾದರೆ...











## ಸ್ವಾತಂತ್ರ್ಯಾನಂತರದ ಭಾರತ – ೫

# ಭಾರತ – ಚೀಣಾ ಯುದ್ಧ ನೆಹರೂ ಯುಗದ ಅಂತ್ಯ

ಎರಡು ಪಂಚವಾರ್ಷಿಕ ಯೋಜನೆಗಳು ಮುಕ್ತಾಯಗೊಂಡರೂ ಜನಸಾಮಾನ್ಯರ ಸ್ಥಿತಿ ಉತ್ತಮಗೊಳ್ಳಲಿಲ್ಲ. ಉದ್ಯೋಗಾವಕಾಶ ಹೆಚ್ಚಿದಾಗ್ಯೂ ನಿರುದ್ಯೋಗದ ಸಮಸ್ಯೆ ನಿವಾರಣೆಯಾಗಲಿಲ್ಲ. ಸರಕಾರದ ಆರ್ಥಿಕ ನೀತಿಯ ಫಲಾನುಭವಿಗಳು, ಶ್ರೀಮಂತ ರೈತರು, ಜಮೀನುದಾರರು ಮತ್ತು ಬಂಡವಾಳಗಾರರಾಗಿದ್ದರೇ ಹೊರತು ಜನಸಾಮಾನ್ಯರಲ್ಲ. ಭೂಸುಧಾರಣೆಗಳು, ಒಂದೊಂದು ರಾಜ್ಯದಲ್ಲಿ ಒಂದೊಂದು ಬಗೆ ಇದ್ದು ಭೂಮಾಲಿಕರ ಪ್ರಾಬಲ್ಯ ಕಡಿಮೆ ಏನಾಗಲಿಲ್ಲ. ಹೋರಾಟಗಳ ಫಲವಾಗಿ ಕಾರ್ಮಿಕರು ಕೆಲವು ರಿಯಾಯಿತಿಗಳನ್ನು ಪಡೆದುಕೊಂಡರೂ ಅವರ ಹಿತಾಸಕ್ತಿಗಳನ್ನು ಕಾಪಾಡಲು ಕಾನೂನುಗಳು ಬಂದಾಗ್ಯೂ ಪರಿಸ್ಥಿತಿ ಅಷ್ಟೇನೂ ಸುಧಾರಿಸಲಿಲ್ಲ. ಸಂಘಟಿತ ಉದ್ಯಮಗಳಲ್ಲಿನ ಕಾರ್ಮಿಕರ ಆರ್ಥಿಕ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಉತ್ತಮಗೊಂಡರೂ ಅಸಂಖ್ಯಾತ ಅಸಂಘಟಿತ ಕಾರ್ಮಿಕರ ಸ್ಥಿತಿ ಹೀನಾಯವಾಗಿತ್ತು. ಇವತ್ತಿಗೂ ಅದೇ ಪರಿಸ್ಥಿತಿ ಮುಂದುವರಿಯುತ್ತಿದೆ.

ಸ್ವತಂತ್ರ ಭಾರತದ ಎರಡನೇ ದಶಕದ ಉತ್ತರಾರ್ಧವನ್ನು (೧೯೬೨–೬೭) ಪ್ರಜಾಪ್ರಭುತ್ವದ ಸತ್ವಪರೀಕ್ಷೆಯ ಕಾಲ ಎಂದು ಕರೆಯಬಹುದು. ಭಾರತದ ಪ್ರಧಾನಿಯಾಗಿ ನೆಹರೂ ಅವರ ಹದಿನೇಳು ವರ್ಷಗಳ ಕಾಲದ ದೀರ್ಘವಾದ ಆಡಳಿತದ ನಂತರ ಅಧಿಕಾರದ ಹಸ್ತಾಂತರ ಸುಲಲಿತವಾಗಿ ಆದದ್ದಲ್ಲದೆ, ಭಾರತದಲ್ಲಿ ನೆಹರೂ ನಂತರ ಅರಾಜಕತೆಯನ್ನು ನಿರೀಕ್ಷಿಸಿದ್ದವರನ್ನು ಹತಾಶಗೊಳಿಸಿತು. ಎರಡು ಯುದ್ಧಗಳನ್ನು ಎದುರಿಸಿ, ಒಂದು ಚೀಣದೊಂದಿಗೆ, ಇನ್ನೊಂದು ಪಾಕಿಸ್ತಾನದೊಂದಿಗೆ ದೇಶ ಚೇತರಿಸಿಕೊಂಡು ಮುಂದುವರಿಯಿತು. ಮೂರನೇ ಪಂಚವಾರ್ಷಿಕ ಯೋಜನೆ ಹಾಗೂ ಮೂರನೇ ಸಾರ್ವತ್ರಿಕ ಚುನಾವಣೆಗಳಲ್ಲಿ ಹೆಚ್ಚಿನ ವ್ಯತ್ಯಾಸವೇನಿರಲಿಲ್ಲ. ಆರ್ಥಿಕ ಯೋಜನೆಯ ಮಟ್ಟಿಗೆ ಎರಡನೇ ಪಂಚವಾರ್ಷಿಕ ಯೋಜನೆಯ ಔದ್ಯೋಗೀಕರಣ ನೀತಿಯೇ ಮುಂದಿನ ಯೋಜನೆಗಳಲ್ಲೂ ಮುಂದುವರಿಯಿತು. ಪ್ರಮುಖ ಕೈಗಾರಿಕಾ ಕ್ಷೇತ್ರಗಳ ಮಟ್ಟಿಗೆ ಸಾರ್ವಜನಿಕ ಕ್ಷೇತ್ರದ ವಿಸ್ತರಣೆಯ ಕಾರ್ಯ ಮುಂದುವರಿಯಿತು. ೧೯೬೨ರಲ್ಲಿ ಜರುಗಿದ ಮೂರನೇ ಸಾರ್ವತ್ರಿಕ ಚುನಾವಣೆಗಳಲ್ಲಿ, ನಂತರದ ಚುನಾವಣೆಗಳಲ್ಲಿ ಕಾಂಗ್ರೆಸ್ಸಿನದೇ ಪ್ರಾಬಲ್ಯ. ಕಮ್ಯುನಿಸ್ಟ್ ಪಾರ್ಟಿ ವಿರೋಧ ಪಕ್ಷದಲ್ಲಿ ತನ್ನ ಪ್ರಮುಖ ಸ್ಥಾನವನ್ನು ಉಳಿಸಿಕೊಂಡಿತು. ಈ ಚುನಾವಣೆಗಳಲ್ಲಿ ಬಲಪಂಥೀಯ ಸ್ವತಂತ್ರ ಪಾರ್ಟಿಯ ಪ್ರವೇಶ ಒಂದು ಪ್ರಮುಖ ಬೆಳವಣಿಗೆ. ಹಾಗೆಯೇ, ಹಿಂದುತ್ವವಾದಿ ಜನಸಂಘದ ಏಳಿಗೆಯನ್ನು ಗಮನಿಸಬಹುದು. ಗಾಂಧಿ ಕೊಲೆಯಾದ ಮೇಲೆ ನಿಷೇಧಿತವಾಗಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಸಾಂಸ್ಕೃತಿಕ ಸಂಘಟನೆಯಾಗಿ ಮುಂದುವರಿಯುವ ಮುಚ್ಚಳಿಕೆ ಬರೆದುಕೊಟ್ಟು ಅಂದಿನ ಗೃಹಸಚಿವ ಸರ್ದಾರ್ ವಲ್ಲಭಭಾಯಿ ಪಟೇಲರ ಕೃಪೆಯಿಂದ ಮರುಜೀವ ಪಡೆದುಕೊಂಡಿತು. ಆರೆಸ್ಸೆಸ್‌ನ ರಾಜಕೀಯ ಅಂಗವಾಗಿ ರೂಪುಗೊಂಡ ಭಾರತೀಯ ಜನಸಂಘ ೧೯೫೨ರ ಮಹಾ ಚುನಾವಣೆಗಳಲ್ಲಿ ಲೋಕಸಭೆಯಲ್ಲಿ ಮೂರು ಸ್ಥಾನಗಳನ್ನು ಪಡೆದುಕೊಂಡಿತ್ತು, ೧೯೫೭ರಲ್ಲಿ ನಾಲ್ಕು ಸ್ಥಾನಗಳನ್ನು ಪಡೆಯಿತು. ೧೯೬೨ರಲ್ಲಿ ೧೪ ಸ್ಥಾನಗಳನ್ನು, ೧೯೬೭ರಲ್ಲಿ ೩೫ ಸ್ಥಾನಗಳನ್ನು ಹೊಂದಿತ್ತು. ಅನಂತರ ಭಾರತೀಯ ಜನತಾಪಕ್ಷವಾದ ಮೇಲೆ ೧೯೭೧ರಲ್ಲಿ ೨೨ ಸ್ಥಾನಗಳನ್ನು ಪಡೆದಿತ್ತು. ದಕ್ಷಿಣ ಭಾರತದಲ್ಲಿ ಅದು ಒಂದು ಸ್ಥಾನವನ್ನೂ ಗಳಿಸಿರಲಿಲ್ಲ. ಈಗ ಈ ಹಿಂದುತ್ವವಾದಿ ಬಲಪಂಥೀಯ ಕೋಮುವಾದಿ ಸಂಘಟನೆ ಕೇಂದ್ರದಲ್ಲಿ ಅಧಿಕಾರ ಗ್ರಹಣದ ಮಟ್ಟಕ್ಕೇರಿದೆ. ಈ ಬೆಳವಣಿಗೆಗೆ ಕಾಂಗ್ರೆಸ್ಸಿನ ನೀತಿಗಳು ಎಷ್ಟು ಹೊಣೆಯೋ, ಅಷ್ಟೇ ಎಡಪಕ್ಷಗಳ ವೈಫಲ್ಯವೂ ಕಾರಣ. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಈ ಬೆಳವಣಿಗೆ ಸ್ವಾಗತಾರ್ಹವಾದ್ದಲ್ಲ, ೧೯೫೯ರಲ್ಲಿ ಕಾಂಗ್ರೆಸ್ಸಿನಲ್ಲೇ ಇದ್ದ ಬಲಪಂಥೀಯರ ಗುಂಪು ಹೊರಬಂದು ಸ್ಥಾಪಿಸಿಕೊಂಡ ಸ್ವತಂತ್ರ ಪಾರ್ಟಿ ಹೆಚ್ಚು ಕಾಲ ಉಳಿಯಲಿಲ್ಲ. ಚಕ್ರವರ್ತಿ ರಾಜಗೋಪಾಲಾಚಾರಿ ನೇತೃತ್ವದಲ್ಲಿ ಕಾಂಗ್ರೆಸ್ಸಿನ ಪ್ರಮುಖರಾದ ಮೀನು ಮಸಾನಿ, ಎನ್. ಜಿ. ರಂಗ, ಕೆ. ಎಂ. ಮುನ್ಷಿ ಮುಂತಾದವರಿಂದ ಸ್ಥಾಪನೆಗೊಂಡ ಈ ಪಕ್ಷ ೧೯೬೨ರ ಚುನಾವಣೆಗಳಲ್ಲಿ ೧೮ ಸ್ಥಾನಗಳನ್ನು ಪಡೆಯಿತು. ಮುಖ್ಯವಾಗಿ ಭೂಸುಧಾರಣೆಗಳನ್ನು, ಸಾರ್ವಜನಿಕ ಉದ್ಯಮಗಳ ಸ್ಥಾಪನೆಯನ್ನು, ಕಾಂಗ್ರೆಸ್ ಅನುಮೋದಿಸಿದ್ದ 'ಸಮಾಜವಾದಿ ಮಾದರಿ ಸಮಾಜ ಸ್ಥಾಪನೆ'ಯ ಗುರಿಯನ್ನು ವಿರೋಧಿಸಿದ ಈ ಪಕ್ಷ ಭಾರತದ ರಾಜಕಾರಣದಲ್ಲಿ ಅಸ್ತಿತ್ವದಲ್ಲಿ ಹೆಚ್ಚು ಕಾಲ ಉಳಿಯಲಿಲ್ಲ. ಬರಬರುತ್ತ ಕಾಂಗ್ರೆಸ್ ಸರಕಾರದ ನೀತಿಗಳು ಹೆಚ್ಚು ಹೆಚ್ಚು ಬಂಡವಾಳಶಾಹಿ ಪರನೀತಿಯನ್ನು ಪಾಲಿಸತೊಡಗಿಕೊಳ್ಳುತ್ತಿದ್ದಂತೆ ಸ್ವತಂತ್ರ ಪಕ್ಷ ಅದೃಶ್ಯವಾಯಿತು.

ಅರವತ್ತರ ದಶಕದ ಒಂದು ಪ್ರಮುಖ ಘಟನೆ ಎಂದರೆ ಗೋವಾ ವಿಮೋಚನೆ. ೧೯೪೭ರಲ್ಲಿ ಭಾರತ ಬ್ರಿಟಿಷ್ ಆಳ್ವಿಕೆಯಿಂದ ಮುಕ್ತಗೊಂಡು ಸ್ವತಂತ್ರವಾದರೂ ಅದು ಅಪೂರ್ಣವಾಗಿತ್ತು. ಪೋರ್ಚುಗೀಸರ ಆಳ್ವಿಕೆಯಲ್ಲಿ ಭಾರತದ ಗೋವಾ, ದೀವ್, ದಾಮನ್, ಫ್ರೆಂಚರ ಅಧೀನದಲ್ಲಿದ್ದ ಪಾಂಡಿಚೆರಿ, ಮಾಹೆ, ಕಾರೈಕಲ್, ಯಾನಮ್ ಇನ್ನೂ ವಸಾಹತುಶಾಹಿಗಳ ವಶದಲ್ಲಿಯೇ ಇತ್ತು. ಅಂತರರಾಷ್ಟ್ರೀಯ ಹಾಗೂ ಭಾರತದ ಒತ್ತಾಯಗಳಿಗೆ ಮಣಿದು ಫ್ರಾನ್ಸ್ ಸಂಧಾನದ ಮೂಲಕ ತನ್ನ ಆಳ್ವಿಕೆಯಲ್ಲಿದ್ದ ಸ್ವಾಸ್ಥ್ಯಗಳನ್ನು ತೆರವುಗೊಳಿಸಿತು. ೧೯೫೪ರಲ್ಲಿ ಮುನ್ನೂರು ವರ್ಷಗಳಾದ ಮೇಲೆ ಪೋರ್ಚುಗೀಸರ ವಶದಲ್ಲಿದ್ದ ಗೋವಾದ ವಿಮೋಚನೆಗೆ ಭಾರತಾದ್ಯಂತ ಬೃಹತ್ ಆಂದೋಳನವೇ ನಡೆಯಿತಲ್ಲದೆ, ಸೈನಿಕ ಕಾರ್ಯಚರಣೆಯೂ ಅಗತ್ಯವಾಯಿತು. ನಾಲ್ಕು ನೂರ ಐವತ್ತು ವರ್ಷಗಳಿಂದ ಪೋರ್ಚುಗೀಸ್ ಸಾಮ್ರಾಜ್ಯಶಾಹಿಗಳ ವಶದಲ್ಲಿದ್ದ ಗೋವಾ, ದೀವ್, ದಾಮನ್‌ಗಳನ್ನು ಪೋರ್ಚುಗೀಸ್ ಸರಕಾರ ತನ್ನ ಸಾಗರದಾಚೆಯ ಪ್ರಾಂತವನ್ನಾಗಿ ಮಾಡಿಕೊಳ್ಳಲು ಹವಣಿಸಿತ್ತು. ಹಾಗೇನಾದರೂ ಆಗಿದ್ದಲ್ಲಿ ಈ ಪ್ರದೇಶ ಉತ್ತರ ಅಟ್ಲಾಂಟಿಕ್ ಮಿಲಿಟರಿ ಕೂಟದ (ನ್ಯಾಟೋ) ವ್ಯಾಪ್ತಿಗೆ ಒಳಪಡುತ್ತಿದ್ದಿತು. ಭಾರತ ಸ್ವಾತಂತ್ರ್ಯಗೊಂಡು ಹದಿನೈದು

ಸಿ. ಆರ್. ಕೃಷ್ಣರಾವ್

ವರ್ಷಗಳಾಗುತ್ತ ಬಂದರೂ ಪೋರ್ಚುಗೀಸರು ಕಾಲ್ತೆಗೆಯುವ ಸೂಚನೆಯೇ ಇರಲಿಲ್ಲ. ಗೋವಾ ವಿಮೋಚನೆಗಾಗಿ ಆ ಸಂದರ್ಭದಲ್ಲಿ ಉಗ್ರವಾದ ಹೋರಾಟ ಪ್ರಾರಂಭವಾಯಿತು. ಗೋವಾದ ಗಡಿ ದಾಟಿ ಹೋರಾಟ ನಡೆಸಲು ಎಲ್ಲ ಕಡೆಗಳಿಂದಲೂ ಜಾಥಾಗಳು ಹೊರಟವು. ಈ ಜಾಥಾಗಳನ್ನು ಗಡಿಯಲ್ಲಿ ತಡೆಯಲಾಯಿತು. ಕರ್ನಾಟಕದಿಂದಲೂ ಜಾಥಾಗಳು ಭಾಗವಹಿಸಿದ್ದುವು. ಪೋರ್ಚುಗೀಸರ ದಬ್ಬಾಳಿಕೆಯ ವಿರುದ್ಧವಾಗಿ ದೇಶಾದ್ಯಂತ ಬಂದ್ ಆಚರಿಸಿ ಕೇಂದ್ರ ಸರಕಾರದ ಮೇಲೆ ಗೋವಾ ವಿಮೋಚನೆಗಾಗಿ ಒತ್ತಾಯ ತರಲಾಯಿತು. ಇಷ್ಟೆಲ್ಲ ಚಳವಳಿಯ ನಂತರ ಭಾರತ ಸರಕಾರ ೧೯೬೧ರಲ್ಲಿ ಸೈನಿಕ ಕಾರ್ಯಾಚರಣೆ ನಡೆಸಿತು. ಯಾವುದೇ ಪ್ರತಿರೋಧ ತೋರದೆ ಪೋರ್ಚುಗೀಸರು ಪಲಾಯನ ಮಾಡಿದರು. ಭಾರತದ ಈ ಕ್ರಮವನ್ನು ಪಶ್ಚಿಮ ರಾಷ್ಟ್ರಗಳು ದುರಾಕ್ರಮಣ ಎಂದು ಖಂಡಿಸಿದುವು. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಭಾರತವನ್ನು ಆಕ್ರಮಣಕಾರಿ ಎಂದು ಖಂಡಿಸುವ ನಿರ್ಣಯವನ್ನು ಆ ರಾಷ್ಟ್ರಗಳು ಮಂಡಿಸಿದ್ದುವು.



ವಿ. ಕೆ. ಕೃಷ್ಣ ಮೆನನ್

ಭಾರತದ ಸೈನಿಕ ಕಾರ್ಯಾಚರಣೆಗೆ ಪೂರ್ಣಬೆಂಬಲ ನೀಡಿದ್ದ ಸೋವಿಯೆತ್ ಒಕ್ಕೂಟದ ವೀಟೋದಿಂದ ನಿರ್ಣಯ ಭದ್ರತಾ ಮಂಡಳಿಯಲ್ಲಿ ಅಂಗೀಕಾರವಾಗಲಿಲ್ಲ. ಭಾರತದ ರಕ್ಷಣಾ ಸಚಿವರು ವಿಶ್ವಸಂಸ್ಥೆಯಲ್ಲಿ ಭಾರತದ ನಿಯೋಗದ ನಾಯಕರೂ ಆಗಿದ್ದ ವಿ. ಕೆ. ಕೃಷ್ಣ ಮೆನನ್ ಪಶ್ಚಿಮ ರಾಷ್ಟ್ರಗಳನ್ನು ತರಾಟೆಗೆ ತೆಗೆದುಕೊಂಡು ಮಾಡಿದ ಅಮೋಘವಾದ ಸುದೀರ್ಘ ಭಾಷಣ ಈಗಲೂ ನೆನಪಿಗೆ ಬರುತ್ತದೆ. 'ವಸಾಹತುಶಾಹಿ ವ್ಯವಸ್ಥೆಯೇ ಖಾಯಂ ದುರಾಕ್ರಮಣ' ಎಂದು ಅವರು ಕರೆದಿದ್ದರು. ಗೋವಾ ವಿಮೋಚನೆಯೊಂದಿಗೆ ಭಾರತದ ರಾಜಕೀಯ ಸ್ವಾತಂತ್ರ್ಯ ಪೂರ್ಣಗೊಂಡಿತು.

ಗೋವಾ ವಿಮೋಚನೆಯ ಖುಷಿಯ ಹಿಂದೆಯೇ ಬಂದದ್ದು ಭಾರತ–ಚೀಣಾ ಗಡಿವಿವಾದದ ಕಿರಿಕಿರಿ. ಇದು ಎರಡೂ ದೇಶಗಳ ಮಧ್ಯೆ ಸಶಸ್ತ್ರ ಸಂಘರ್ಷಕ್ಕೆ ಎಡೆಮಾಡಿದ್ದು ಅನಿರೀಕ್ಷಿತ. ಐವತ್ತರ ದಶಕದ ಪ್ರಾರಂಭದಲ್ಲಿ ಚೀಣೀ ಜನತಾ ಗಣರಾಜ್ಯ ಅಸ್ತಿತ್ವಕ್ಕೆ ಬಂದಾಗಿನಿಂದ ಭಾರತ–ಚೀಣಾ ಸಂಬಂಧಗಳು ಅನ್ಯೋನ್ಯ ವಾಗಿದ್ದುವು. ಅವು 'ಹಿಂದೀ–ಚೀಣೀ ಭಾಯಿ ಭಾಯಿ' ಎನ್ನುವ ಮಟ್ಟಕ್ಕೂ ಹೋಗಿತ್ತು. ಟಿಬೆಟ್ಟಿನಿಂದ ಪರಾರಿಯಾಗಿ ಬಂದ ದಲಾಯಿಲಾಮಾ ಮತ್ತು ಆತನ ಅನುಯಾಯಿಗಳಿಗೆ ಭಾರತ ಮಾನವೀಯ ದೃಷ್ಟಿಯಿಂದ ಆಶ್ರಯ ನೀಡಿದ್ದೇ ಸಂಬಂಧಗಳ ವಿರಸಕ್ಕೆ ನಾಂದಿಯಾಯಿತು. ಈ ಸಂದರ್ಭದಲ್ಲಿ ಭಾರತ ಮೊದಲಿನಿಂದ ಟಿಬೆಟ್ ಚೀಣಾದ ಭಾಗ ಎಂದು ಮಾನ್ಯ ಮಾಡಿತ್ತು ಎನ್ನುವುದನ್ನು ಇಲ್ಲಿ ಹೇಳಬೇಕಿದೆ. ಮತ್ತೆ ಭಾರತ ವಿಶ್ವಸಂಸ್ಥೆಯಲ್ಲಿ ಚೀಣಾಕ್ಕೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನಕ್ಕಾಗಿ ಒತ್ತಾಯ ತರುತ್ತಲೇ ಇತ್ತು. ಹಾಗಿದ್ದರೂ ಚೀಣಾ ಗಡಿ ವಿವಾದವನ್ನು ಕೆದಕತೊಡಗಿತು. ಭಾರತದ ಈಶಾನ್ಯದಲ್ಲಿ ಭಾರತ–ಚೀಣಾ ಗಡಿ ಬ್ರಿಟಿಷರ ಕಾಲದಿಂದಲೂ ಇತ್ಯರ್ಥ ವಾಗಿರಲಿಲ್ಲ. ನಿರ್ಜನವಾದ ಈ ಪ್ರದೇಶದಲ್ಲಿ ಮೆಕ್‌ಮೋಹನ್ ರೇಖೆ ಎಂಬುದೊಂದು ಇದ್ದಾಗ್ಯೂ ಅದು ಅಧಿಕೃತವಾಗಿ ಮಾನ್ಯವಾಗಿರಲಿಲ್ಲ. ಈ ಭೂ ಭಾಗದಲ್ಲಿ ಚೀಣಾ ತನ್ನ ಸಿಂಕಿಯಾಂಗ್ ಪ್ರಾಂತದಿಂದ ಟಿಬೆಟಿಗೆ ಸಂಪರ್ಕ ಏರ್ಪಡಿಸಲು ಅಕ್ಸೈಚಿನ್ ರಸ್ತೆ ಎಂಬ ರಸ್ತೆಯ ನಿರ್ಮಾಣದಲ್ಲಿ ತೊಡಗಿತ್ತು. ಸಮಸ್ಯೆಯನ್ನು ಮಾತುಕತೆಯಿಂದ ಬಗೆಹರಿಸಿಕೊಳ್ಳಲು ಎಲ್ಲ ವ್ಯವಧಾನವೂ ಇತ್ತು. ಆಗಾಗ ಗಡಿಪ್ರದೇಶದಲ್ಲಿ ಸಣ್ಣಪುಟ್ಟ ಘರ್ಷಣೆಗಳು ಸಂಭವಿಸುತ್ತಲೇ ಇದ್ದುವು. ಆದರೆ ದಿಢೀರ್ ಎಂದು ಚೀಣಾ ೧೯೬೨ರ ಕೊನೆಯಲ್ಲಿ ದಾಳಿಯನ್ನಾರಂಭಿಸಿತು. ಈ ಸೈನಿಕ ಕಾರ್ಯಾಚರಣೆಯಲ್ಲಿ ಚೀಣಾ ತನಗೆ ಸೇರಿದ್ದೆಂದು ಪರಿಗಣಿಸಿದ್ದ ಭಾರತದ ಭೂಪ್ರದೇಶಗಳನ್ನು ಆಕ್ರಮಿಸಿಕೊಂಡು ಯುದ್ಧಸ್ತಂಭನ ಘೋಷಿಸಿತು. ಚೀಣೀಯರ ಈ ಅನಿರೀಕ್ಷಿತ ದಾಳಿ ಹಾಗೂ ಭಾರತದ ಭೂಪ್ರದೇಶಗಳ ಅತಿಕ್ರಮಣ ಇವತ್ತಿಗೂ ಮುಂದುವರಿದಿದೆ. ಚೀಣೀಯರು ಎಸಗಿದ ಈ ದ್ರೋಹವನ್ನು ಭಾರತದ ಜನತೆ ಏಕಕಂಠದಿಂದ ಖಂಡಿಸಿದರು. ಭಾರತದ ಕ್ರಮಕ್ಕೆ ಕಟಿಬದ್ಧರಾಗಿ ನಿಂತರು. ಆದರೂ ಚೀಣೀ ದುರಾಕ್ರಮಣ ಭಾರತಕ್ಕೆ ಆಘಾತಕಾರಿಯಾಗಿತ್ತು, ಅನುಭವಿಸಿದ ಪರಾಜಯ ನೋವುಂಟು ಮಾಡಿತ್ತು. ಈಗಲೂ ಈ ಯುದ್ಧದ ವಿಚಾರದಲ್ಲಿ ವಿವಾದ ಇದ್ದೇ ಇದೆ. ಸಂಭವಿಸಿದ ಈ ಸಂಘರ್ಷದಿಂದ ಭಾರತ–ಚೀಣಾ ಸಂಬಂಧಗಳು ಕೆಲಕಾಲ ಸ್ಥಗಿತಗೊಂಡವು. ಸ್ವತಃ ಪ್ರಧಾನಿ ಜವಹರಲಾಲ್ ನೆಹರು ಅವರಿಗೆ, ರಕ್ಷಣಾ ಸಚಿವರು ಹಾಗೂ ಭಾರತದ ವಿದೇಶಾಂಗ ನೀತಿ ರೂಪಿಸಿದವರಲ್ಲೊಬ್ಬರೂ ಆದ ವಿ. ಕೆ. ಕೃಷ್ಣ ಮೆನನ್‌ರಿಗೆ ಈ ಘಟನೆ ಆಘಾತಕಾರಿಯಾಗಿತ್ತು. ಕಮ್ಯುನಿಸ್ಟ್ ರಾಷ್ಟ್ರವೊಂದು ದುರಾಕ್ರಮಣದಲ್ಲಿ ತೊಡಗದು ಎಂಬ ನಂಬಿಕೆಯನ್ನು ಚೀಣೀಯರು ಛಿದ್ರಗೊಳಿಸಿದ್ದರು. ಪ್ರಧಾನಿ ಜವಹರಲಾಲ್ ನೆಹರು ರಕ್ಷಣಾ ಸಚಿವ ಕೃಷ್ಣ ಮೆನನ್ ಅವರನ್ನು ಹರಕೆಯ ಕುರಿಯಾಗಿಸಿ ಅವರಿಂದ ರಾಜೀನಾಮೆ ಪಡೆದುಕೊಂಡಿದ್ದು ಕಿಂಚಿತ್ತೂ ಸಮಂಜಸವಲ್ಲ. ಕಾಂಗ್ರೆಸ್ ನಾಯಕತ್ವದ ಪರಂಪರೆಯೇ ಅಂಥದ್ದು. ವೈಫಲ್ಯಕ್ಕೆ ಅನ್ಯರನ್ನು ಗುರಿಯಾಗಿಸುವುದು ಅದರ ಜಾಯಮಾನ. ಕೆಲಕಾಲಾನಂತರ ಭಾರತ–ಚೀಣಾ ಎರಡೂ ದೇಶಗಳ ಮಧ್ಯೆ ಸಂಬಂಧಗಳು ಸಹಜಸ್ಥಿತಿಗೆ ಮರಳಿ, ಗಡಿವಿವಾದಕ್ಕೆ ಶಾಂತಿಯುತವಾದ ಇತ್ಯರ್ಥ ಕಾಣಲು ಬದ್ಧತೆ ಪ್ರಕಟವಾಗಿದ್ದರೂ ಪ್ರಗತಿ ಮಾತ್ರ ಶೂನ್ಯ. ಗಡಿಪ್ರದೇಶದಲ್ಲಿ ಚೀಣೀಯರ ಕಿರಿಕಿರಿ ಮುಂದುವರಿಯುತ್ತಲೇ ಇದೆ.



ಗೋವಾ ವಿಮೋಚನಾ ಹೋರಾಟ

ಚೀಣೀ ದುರಾಕ್ರಮಣದ ಸಂದರ್ಭವನ್ನು ಉಪಯೋಗಿಸಿಕೊಂಡು ಪಾರ್ಲಿಮೆಂಟಿನಲ್ಲಿ ಪ್ರಮುಖ ವಿರೋಧ ಪಕ್ಷವಾಗಿದ್ದ ಕಮ್ಯುನಿಸ್ಟ್ ಪಾರ್ಟಿಯ ಮೇಲೆ ಕಾಂಗ್ರೆಸ್ ಸರಕಾರ ದಾಳಿ ನಡೆಸಿದ್ದು ಅಕ್ಷಮ್ಯ. ಚೀಣೀ ಸೈನಿಕರು ದಾಳಿ ಪ್ರಾರಂಭಿಸುತ್ತಿದ್ದಂತೆಯೇ ಕೇಂದ್ರ ಸರಕಾರ ಭಾರತ ರಕ್ಷಣಾ ಕಾಯಿದೆ ಅನ್ವಯಿಸಿ ದೇಶಾದ್ಯಂತ ಪ್ರಮುಖ ಕಮ್ಯುನಿಸ್ಟ್ ನಾಯಕರುಗಳನ್ನು ಬಂಧನದಲ್ಲಿರಿಸಿತು. ಚೀಣಾ ಕಮ್ಯುನಿಸ್ಟ್ ರಾಷ್ಟ್ರ ಎನ್ನುವುದೇ ಅದಕ್ಕೆ ಆಧಾರ. ಚೀಣೀ ದುರಾಕ್ರಮಣದ ವಿಚಾರದಲ್ಲಿ ಕಮ್ಯುನಿಸ್ಟ್ ಪಾರ್ಟಿಯೊಳಗೆ ಭಿನ್ನಾಭಿಪ್ರಾಯಗಳಿದ್ದುವು ಎಂಬುದು ನಿಜ. ಆದರೆ ಪಕ್ಷ ಈ ಬಗ್ಗೆ ರಾಷ್ಟ್ರ ವಿರೋಧಿ ಧೋರಣೆ ತಳೆದಿರಲಿಲ್ಲ. ಹಾಗಾಗಿ ಕಮ್ಯುನಿಸ್ಟರು ಯಾರೂ ಭೂಗತರಾಗದೆ ಬಂಧನಕ್ಕೊಳಗಾದರು. ಕಮ್ಯುನಿಸ್ಟರನ್ನು ದೇಶದ್ರೋಹಿಗಳೆಂದು ಕರೆದು ಮತ್ತೆ ತಲೆ ಎತ್ತದಂತೆ ಬಡಿದು ಹಾಕುವುದು ಕಾಂಗ್ರೆಸ್ಸಿನ ಲೆಕ್ಕಾಚಾರವಾಗಿತ್ತು. ಆದರೆ ಅದು ಫಲಿಸಲಿಲ್ಲ. ಚೀಣೀ ದುರಾಕ್ರಮಣ ಸ್ವತಂತ್ರ ಭಾರತದ ಇತಿಹಾಸದಲ್ಲಿ ಒಂದು ಕಪ್ಪು ಚುಕ್ಕೆ ಎನ್ನುವುದಂತೂ ನಿಜ. ಈ ಆಘಾತದಿಂದ ಪ್ರಧಾನಿ ನೆಹರು ಚೇತರಿಸಿಕೊಳ್ಳಲೇ ಇಲ್ಲ. ಕಾಂಗ್ರೆಸ್ ಸಂಘಟನೆಯ

ಮೇಲೂ ಚೀಣೀಯರು ನಡೆಸಿದ ದಾಳಿ ಸಾಕಷ್ಟು ಪರಿಣಾಮ ಉಂಟುಮಾಡಿತು. ಕಾಂಗ್ರೆಸ್ಸಿನಲ್ಲಿದ್ದ ಬಲಪಂಥೀಯರ ಒತ್ತಡ ಹೆಚ್ಚಿತು. ಕೇಂದ್ರ ಸರಕಾರದಲ್ಲಿ ಮತ್ತು ಕಾಂಗ್ರೆಸ್ ಹೈಕಮಾಂಡ್‌ನಲ್ಲಿ ಇರಸು-ಮುರುಸು ಅಧಿಕವಾಗಿತ್ತು. ಈ ಸಂದರ್ಭದಲ್ಲಿ ತಮಿಳುನಾಡಿನ ಕಾಂಗ್ರೆಸ್ ನಾಯಕ ಕಾಮರಾಜ್ ನಾಡಾರ್‌ರನ್ನು ಕಾಂಗ್ರೆಸ್ ಅಧ್ಯಕ್ಷ ಗಾದಿಗೆ ತರಲಾಯಿತು. ಅದಕ್ಕೂ ಮುನ್ನ ಕಾಂಗ್ರೆಸ್ ಸಂಘಟನೆಯನ್ನು ಬಲಗೊಳಿಸುವ ನೆಪ ಮುಂದುಮಾಡಿಕೊಂಡು ಜವಹರಲಾಲ್ ನೆಹರು ಕೇಂದ್ರ ಸಚಿವ ಸಂಪುಟದಿಂದ ಮೊರಾರ್ಜಿ ದೇಸಾಯಿ, ಲಾಲ್‌ಬಹದ್ದೂರ್ ಶಾಸ್ತ್ರಿ, ಎಸ್. ಕೆ. ಪಾಟೀಲ್, ಜಗಜೀವನರಾಮ್, ಬಿ. ಗೋಪಾಲರೆಡ್ಡಿ, ಕೆ. ಎಚ್. ಶ್ರೀಮಾಲಿ ಮೊದಲಾದ ಆರು ಮಂದಿ ಹಿರಿಯ ಸಚಿವರನ್ನು ಹೊರಹಾಕಿ ಸಂಪುಟ ಪುನಾರಚನೆ ಮಾಡಿದರು. ಚೀಣೀಯರಿಂದ ಅನುಭವಿಸಿದ ಸೋಲಿನ ಹಿನ್ನೆಲೆಯಲ್ಲಿ ಕಾಂಗ್ರೆಸ್ಸಿನಲ್ಲಿ ಸಂಪ್ರದಾಯವಾದಿಗಳ ಹಾಗೂ ಬಲಪಂಥೀಯರ ಕೈಮೇಲಾಯಿತು. ವಿದೇಶೀ ನೀತಿಯಲ್ಲಿ ಅಮೆರಿಕ ಪರ ಧೋರಣೆಗೆ ಒತ್ತಾಯ ಅಧಿಕಗೊಂಡಿತು. ಚೀಣೀ ದುರಾಕ್ರಮಣದ ವಿಚಾರದಲ್ಲಿ ಸೋವಿಯೆತ್ ಒಕ್ಕೂಟದ ತಟಸ್ಥ ಧೋರಣೆಯನ್ನು ಉಪಯೋಗಿಸಿಕೊಂಡು ಅದರೊಂದಿಗೆ ಸಂಬಂಧಗಳನ್ನು ದುರ್ಬಲಗೊಳಿಸಲು ಪ್ರಯತ್ನವೂ ನಡೆಯಿತು. ಚೀಣೀ ಯುದ್ಧದಿಂದಾಗಿ ಮೂರನೇ ಪಂಚವಾರ್ಷಿಕ ಯೋಜನೆಯ ಕಾರ್ಯಗಳಿಗೂ ಧಕ್ಕೆಯಾಯಿತು. ಯೋಜನೆಗೆ ಮೀಸಲಾಗಿಟ್ಟಿದ್ದ ಹಣ ದೇಶದ ರಕ್ಷಣೆಗೆ ವಿನಿಯೋಗವಾಯಿತು. ಈ ಆಘಾತದಿಂದ ಚೇತರಿಸಿಕೊಳ್ಳಲು ಭಾರತಕ್ಕೆ ವರ್ಷಗಳೇ ಬೇಕಾದುವು. ೧೯೬೩ರ ಆಗಸ್ಟ್ ತಿಂಗಳಲ್ಲಿ ಮೊದಲ ಬಾರಿಗೆ ನೆಹರು ಸರಕಾರ ಪಾರ್ಲಿಮೆಂಟಿನಲ್ಲಿ ಅವಿಶ್ವಾಸ ನಿರ್ಣಯ ಎದುರಿಸಬೇಕಾಗಿ ಬಂದಿತು. ಇದಕ್ಕೂ ಮುನ್ನ ಲೋಕಸಭೆಗೆ ನಡೆದ ಮೂರು ಉಪ ಚುನಾವಣೆಗಳಲ್ಲಿ ಕಾಂಗ್ರೆಸ್ ಸೋಲನ್ನು ಅನುಭವಿಸಿತ್ತು. ಈ ಎಲ್ಲ ಬೆಳವಣಿಗೆಗಳೂ ನೆಹರು ಅವರ ಆರೋಗ್ಯದ ಮೇಲೆ ಪರಿಣಾಮ ಬೀರಿತು. ೧೯೬೩ರ ಕೊನೆಯಲ್ಲಿ ನೆಹರು ಅಸ್ವಸ್ಥರಾದರು. ಅವರ ಆರೋಗ್ಯ ಸುಧಾರಿಸಲೇ ಇಲ್ಲ. ೧೯೬೪ರ ಮೇ ೨೭ರಂದು ಅವರು ನಿಧನ ಹೊಂದಿದರು.

ಅಲ್ಲಿಗೆ ಸ್ವತಂತ್ರ ಭಾರತದ ಇತಿಹಾಸದಲ್ಲಿ ಒಂದು ಅಧ್ಯಾಯ ಮುಗಿದಂತಾಯಿತು. ೧೯೪೭ರ ಆಗಸ್ಟ್ ೧೫ರಂದು ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡು ಹದಿನೇಳು ವರ್ಷಗಳ ಕಾಲ ದೇಶದ ಆಳ್ವಿಕೆ ನಡೆಸಿದ ನೆಹರು ದೇಶದ ಆಗುಹೋಗುಗಳ ಮೇಲೆ ತಮ್ಮ ವಿಶಿಷ್ಟ ಛಾಪು ಮೂಡಿಸಿದ್ದಾರೆ. ಅವರ ಸಾಧನೆಗಳು, ದೌರ್ಬಲ್ಯಗಳು, ದೇಶ ಕಟ್ಟುವುದರಲ್ಲಿ ಅವರು ಸಲ್ಲಿಸಿರುವ ಕಾಣಿಕೆಗಳ ಬಗ್ಗೆ ಬೇಕಾದಷ್ಟು ಅಭಿಪ್ರಾಯಗಳು ಪ್ರಕಟಗೊಂಡಿವೆ. ಇನ್ನೂ ಚರ್ಚೆ ನಡೆಯುತ್ತಲೇ ಇದೆ. ಅದೇನೇ ಇದ್ದರೂ ಈ ದೇಶದ ವಿದೇಶಾಂಗ ನೀತಿಯನ್ನು ರೂಪಿಸಿದವರು, ಅಲಿಪ್ತನೀತಿಯ, ಚಳುವಳಿಯ ಸಂಘಟಕರಲ್ಲಿ ಒಬ್ಬರೂ ದೇಶದ ಆರ್ಥಿಕಾಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತಂದವರೂ ಹಾಗೂ ಪಾರ್ಲಿಯಮೆಂಟರಿ ವ್ಯವಸ್ಥೆಗೆ ಬುನಾದಿ ನಿರ್ಮಿಸಿದವರೂ ಆಗಿ ನೆಹರು



ದಲಾಯಿಲಾಮಾ

ಅವರು ಸಲ್ಲಿಸಿದ ಕಾಣಿಕೆಯನ್ನು ಅಲ್ಲಗಳೆಯುವಂತಿಲ್ಲ. ಅಂದಿನ ದಿನಗಳಲ್ಲಿ ಪಾರ್ಲಿಯಮೆಂಟಿನಲ್ಲಿ, ಅಂದರೆ ಲೋಕಸಭೆ ಮತ್ತು ರಾಜ್ಯಸಭೆಗಳಲ್ಲಿ ವ್ಯವಸ್ಥಿತವಾದ ರೀತಿಯಲ್ಲಿ ಚರ್ಚೆಗಳು ನಡೆಯುತ್ತಿದ್ದುವು. ಕಲಾಪಗಳು ನಿಯಮಬದ್ಧವಾಗಿ ನಡೆಯುತ್ತಿದ್ದುವು. ಈಗಿನಂತೆ ಅದು ದೊಂಬಿಯಾಗಿರಲಿಲ್ಲ, ಕಲಾಪಗಳಿಗೆ ಅಡ್ಡಿ ಮಾಡುವ, ಸದನವನ್ನು ಮುಂದೂಡುವ, ಚರ್ಚೆಯೇ ಇಲ್ಲದೆ ಪ್ರಮುಖವಾದ ಮಸೂದೆಗಳು, ಬಜೆಟ್ ಅಂಗೀಕಾರವಾಗುವ ಪ್ರವೃತ್ತಿ ಇರಲಿಲ್ಲ, ಆಡಳಿತ ಪಕ್ಷ ಹಾಗೂ ಪ್ರತಿಪಕ್ಷಗಳು ನೀತಿನಿಯಮಗಳಿಗೆ ಬದ್ಧವಾಗಿದ್ದು ಸುಸೂತ್ರವಾದ ಚರ್ಚೆಗೆ ಅನುವು ಮಾಡಿಕೊಡುತ್ತಿದ್ದುವು. ಕಾಂಗ್ರೆಸ್ ಪಕ್ಷ ಅಧಿಕವಾದ ಬಹುಮತ ಹೊಂದಿತ್ತು ನಿಜ. ಎರಡೂ ಕಡೆ ಚರ್ಚೆಗೆ ಮೆರುಗು ನೀಡುವ ಸಮರ್ಥತೆ ಹೊಂದಿದ ಸದಸ್ಯರುಗಳಿದ್ದರು. ಪ್ರತಿಯೊಂದು ಅಧಿವೇಶನದ ಅಂತ್ಯದಲ್ಲೂ ವಿದೇಶಾಂಗ ನೀತಿ ಕುರಿತು ಚರ್ಚೆಗೆ, ಖಾಸಗಿ ನಿರ್ಣಯಗಳು ಮತ್ತು ಮಸೂದೆಗಳ ಚರ್ಚೆಗೆ ಅವಕಾಶವಿರುತ್ತಿತ್ತು. ಈಗ ಅಂಥ ಚರ್ಚೆ ನಡೆಯದೆ, ಕೇವಲ ಶಕ್ತಿಪ್ರದರ್ಶನಕ್ಕೆ, ಆರ್ಭಟಕ್ಕೆ ಆಸ್ಪದವಿದ್ದು ಕಲಾಪಗಳು ಅನಿರ್ದಿಷ್ಟ ಕಾಲ ನಡೆಯದೇ ಇರುವುದು ಶೋಚನೀಯ. ಕಳೆದ ಹದಿನೈದು ವರ್ಷಗಳಿಂದ ಇಂಥ ಪ್ರವೃತ್ತಿ ಬೆಳೆದಿರುವುದು ನಮ್ಮ ಪಾರ್ಲಿಯಮೆಂಟರಿ ವ್ಯವಸ್ಥೆಯಲ್ಲಿ ಕಪ್ಪು ಚುಕ್ಕೆಯಾಗಿದೆ. ಆಡಳಿತದಲ್ಲಿದ್ದ ಕಾಂಗ್ರೆಸ್ ಪಕ್ಷದ ಪ್ರಮುಖರು, ಪ್ರಧಾನಿಯಿಂದ ಹಿಡಿದು ಸಚಿವರು ಹಾಗೂ ಸದಸ್ಯರು ಬಿಟ್ಟರೆ ಪ್ರತಿಪಕ್ಷದಲ್ಲಿ ಪ್ರೊ|| ಹಿರೇನ್ ಮುಖರ್ಜಿ, ಎಸ್. ಎ. ಡಾಂಗೆ, ಎ. ಕೆ. ಗೋಪಾಲನ್, ಚಂದ್ರಶೇಖರ್, ಆಚಾರ್ಯ ಕೃಪಲಾನಿ, ಮಧುಲಿಮಯೆ, ರಾಮಮನೋಹರ ಲೋಹಿಯ, ಜಾರ್ಜ್ ಫರ್ನಾಂಡಿಸ್, ಈಶ್ವರ ಐಯ್ಯರ್, ಆನಂದನ್ ನಂಬಿಯಾರ್, ರೇಣುಚಕ್ರವರ್ತಿ, ಪಾರ್ವತಿ ಕೃಷ್ಣನ್, ಇಂದ್ರಜಿತ್ ಗುಪ್ತ, ಭೂಪೇಶ್ ಗುಪ್ತ, ಪಿ. ರಾಮಮೂರ್ತಿ ಮುಂತಾದ ಘಟಾನುಘಟಿಗಳಿದ್ದರು. ರಾಜ್ಯಸಭೆಯಲ್ಲಿ ಸರ್ವಪಲ್ಲಿ ರಾಧಾಕೃಷ್ಣನ್ ಸಭಾಧ್ಯಕ್ಷರಾಗಿ ಶೋಭಿಸಿದರೆ, ಲೋಕಸಭೆಯಲ್ಲಿ ಜಿ. ವಿ. ಮಾವಲಂಕರ್, ಅನಂತಶಯನಮ್ ಐಯ್ಯಂಗಾರರಂಥವರು ಸಭಾಧ್ಯಕ್ಷರಾಗಿದ್ದರು. ನಮ್ಮ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ಆ ದಿನಗಳು ಮರಳಿಯಾವೆ ? ಹದಿನಾರನೇ ಲೋಕಸಭೆಗೆ ಪ್ರಮುಖ ಪಕ್ಷಗಳ ಅಭ್ಯರ್ಥಿಗಳ ಪಟ್ಟಿ ನೋಡಿದರೆ ಉತ್ತರ ಖಂಡಿತ ಇಲ್ಲ. ಕೋಟ್ಯಾಧೀಶರು, ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪಿಗಳಾಗಿರುವವರು, ಭ್ರಷ್ಟಾಚಾರದಲ್ಲಿ ಮುಳುಗಿರುವವರು, ಕಳಂಕಿತರೇ ಹೆಚ್ಚು ಮಂದಿ ಇದ್ದಾರೆ. ಸಮ್ಮಿಶ್ರ ಸರಕಾರದ ಯುಗದಲ್ಲಿ ಸದನವೂ ಅದರ ಪ್ರತಿರೂಪವೇ ಎನ್ನೋಣವೆ ?

**(ಮುಂದುವರಿಯುವುದು)**



ಭಾರತ – ಚೀಣಾ ಯುದ್ಧ

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್



ಏಪ್ರಿಲ್ ೧೭ರಂದು ತಮ್ಮ ೮೭ನೇ ವಯಸ್ಸಿನಲ್ಲಿ ನಿಧನರಾದ ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್ ಲ್ಯಾಟಿನ್ ಅಮೆರಿಕದ ಅತ್ಯಂತ ಪ್ರಭಾವಶಾಲಿ ಲೇಖಕರಲ್ಲೊಬ್ಬರು. ಅವರ *ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್* ಕಾದಂಬರಿಯನ್ನು ಓದದವರೇ ವಿರಳ. ಲ್ಯಾಟಿನ್ ಅಮೆರಿಕನ್ನರು ಪ್ರಥಮ ಬಾರಿ ಸಾಹಿತ್ಯದಲ್ಲಿ ತಮ್ಮನ್ನು ಗುರುತಿಸಿಕೊಂಡ ಈ ಕಾದಂಬರಿ ಈ ಶತಮಾನದ ಅತ್ಯಂತ ಪ್ರಭಾವಶಾಲಿ ಸಾಹಿತ್ಯ ಕೃತಿಗಳಲ್ಲಿ ಒಂದಾಗಿದೆ. ಕಾದಂಬರಿಕಾರರಾಗಿ ೧೯೮೨ರಲ್ಲಿ ನೊಬೆಲ್ ಪ್ರಶಸ್ತಿಗೆ ಪಾತ್ರರಾದ ಗೇಬ್ರಿಯೆಲ್ ತಮ್ಮ ಬರವಣಿಗೆಯನ್ನು ಆರಂಭಿಸಿದ್ದು ತನಿಖಾ ಪತ್ರಿಕೋದ್ಯಮ ಅಥವಾ ಇನ್ವೆಸ್ಟಿಗೇಟಿವ್ ಜರ್ನಲಿಸಂ ಎಂಬುದು ಗಮನಾರ್ಹ. ಪ್ರಶಸ್ತಿಯಿಂದ ಬಂದ ಹಣದಲ್ಲಿ ಅವರು ಕ್ಯಾಂಬಿಯೊ ಎಂಬ ಪತ್ರಿಕೆಯ ಷೇರುಗಳನ್ನು ಖರೀದಿಸಿದರು. ನಾನೊಬ್ಬ ಪತ್ರಕರ್ತ. ನಾನು ಪತ್ರಕರ್ತನಲ್ಲದಿದ್ದರೆ ನಾನು ಯಾವ ಪುಸ್ತಕವನ್ನೂ ಬರೆಯಲು ಆಗುತ್ತಿರಲಿಲ್ಲ. ನನ್ನ ಪುಸ್ತಕಗಳಿಗೆಲ್ಲಾ ಸಾಮಗ್ರಿ ಒದಗಿಸಿರುವುದು ನೈಜ ಘಟನೆಗಳು ಎಂಬುದು ಗೇಬ್ರಿಯೆಲ್ ಮಾತುಗಳು. ಲೂಸಿಯಾ ಸಾಂತಿಯಾಗಾ ಮಾರ್ಕ್ವೆಜ್ ಮತ್ತು ಗೇಬ್ರಿಯೆಲ್ ಇಲಿಜಿಯೋ ಗಾರ್ಸಿಯಾ ಅವರ ೧೨ ಮಕ್ಕಳಲ್ಲಿ ಮೊದಲನೆಯ ಮಗ ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್. (ಜನನ: ಮಾರ್ಚ್ ೬, ೧೯೨೭ರಂದು) ಅವರ ತಂದೆ ಒಬ್ಬ ಹೋಮಿಯೋಪತಿ ಔಷಧ ಮಾರಾಟಗಾರರಾಗಿದ್ದರು.

ಲ್ಯಾಟಿನ್ ಅಮೆರಿಕದ ಸುತ್ತಮುತ್ತಲಿನ ಸಾಮಾಜಿಕ ಸಮಸ್ಯೆಗಳನ್ನು ವಸ್ತುವಾಗಿಟ್ಟುಕೊಂಡು ಅವರು ಬರೆದ ಸಾಹಿತ್ಯೇಕರ (ನಾನ್ ಫಿಕ್ಷನ್) ಕೃತಿಗಳು ರಾಜಕೀಯ ವಲಯದಲ್ಲಿ ಗಮನ ಸೆಳೆದವು. ಗೇಬ್ರಿಯೆಲ್ ಅವರ ಪ್ರಥಮ ಸಣ್ಣ ಕಥೆ ಪ್ರಕಟವಾದದ್ದು ೧೯೪೭ರಲ್ಲಿ. ಆನಂತರ ೧೯೫೫ರಲ್ಲಿ ಅ ಸ್ಟೋರಿ ಆಫ್ ಎ *ಶಿಫ್‌ವ್ರೆಕ್ಡ್ ಸೈಲರ್* ಪ್ರಕಟವಾಯಿತು. *ನ್ಯೂಸ್ ಆಫ್ ಕಿಡ್ನಾಪಿಂಗ್* ಎಂಬ ಕಥೆ ಕೊಲಂಬಿಯಾದಲ್ಲಿ ನಡೆಯುತ್ತಿದ್ದ ಕೊಕೇನ್ ಕಳ್ಳಸಂತೆ ಮಾರಾಟವನ್ನು ಕುರಿತದ್ದು. ತಮ್ಮ ನ್ಯೂ ಜರ್ನಲಿಸಂ ಮಾದರಿ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡುವ ಸಲುವಾಗಿ ಗೇಬ್ರಿಯೆಲ್ ೧೯೯೪ರಲ್ಲಿ ಫೌಂಡೇಷನ್ ಫಾರ್ ಎ ನ್ಯೂ ಐಬೆರೋ-ಅಮೆರಿಕನ್ ಜರ್ನಲಿಸಂ ಸ್ಥಾಪಿಸಿದರು. ಯುನೆಸ್ಕೋ ಸಹಾಯದಿಂದ ಆರಂಭವಾದ ಈ ಸಂಸ್ಥೆ ಉದಯೋನ್ಮುಖ ಪತ್ರಕರ್ತರಿಗೆ ಶಿಕ್ಷಣ ನೀಡುತ್ತಿದೆ.

ಗೇಬ್ರಿಯೆಲ್ ಅವರ ಬರಹಗಳೂ ಎಡಪಂಥೀಯ ತತ್ವಗಳನ್ನು ಪ್ರತಿಪಾದಿಸುತ್ತವೆ ಎಂಬ ಆರೋಪದ ಹಿನ್ನೆಲೆಯಲ್ಲಿ ಅವರು ೧೯೫೫ರಲ್ಲಿ ಸೋವಿಯತ್ ದೇಶಗಳು ಮತ್ತು ರೋಮ್‌ಗೆ ತೆರಳಿದರು. ಅನಂತರ ಪ್ಯಾರಿಸ್‌ಗೆ. ಮೂರು ವರ್ಷಗಳ ನಂತರ ೧೯೫೮ರಲ್ಲಿ ಕೊಲಂಬಿಯಾಗೆ ಮರಳಿ ಬಂದು ಮರ್ಸಿಡೆಸ್ ಬಾರ್ಕಾ ಅವರನ್ನು ವಿವಾಹವಾದರು. *ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್* ಕಾದಂಬರಿಯನ್ನು ೧೮ ತಿಂಗಳಲ್ಲಿ ರಚಿಸಿದ ಗೇಬ್ರಿಯೆಲ್ ಅದನ್ನು ಪೂರೈಸುವ ವೇಳೆಗೆ ಮನೆಯಲ್ಲಿದ್ದ ಎಲ್ಲಾ ಆಸ್ತಿಪಾಸ್ತಿ ಮಾರಿಕೊಂಡಿದ್ದರು. ಜೊತೆಗೆ ಸಾಲದ ಹೊರೆಯೂ ಇತ್ತು. ಆದರೆ ಕಾದಂಬರಿ ಪ್ರಕಟವಾದ ಮೊದಲ ವಾರದಲ್ಲೇ ಮುದ್ರಿಸಿದ ಎಲ್ಲಾ ೮೦೦೦ ಪ್ರತಿಗಳೂ ಮಾರಾಟವಾಗಿದ್ದವು. ಈ ಕಾದಂಬರಿಯನ್ನು ಮೆಚ್ಚಿಕೊಂಡವರಲ್ಲಿ ಅಮೆರಿಕದ ಅಧ್ಯಕ್ಷ ಕ್ಲಿಂಟನ್ ಒಬ್ಬರು. ಅವರ ಕೊನೆಯ ಕೃತಿ ಮೆಮೊರೀಸ್ ಆಫ್ ಮೈ ಮೆಲಾನ್‌ಕಲಿ ವೋರ್ಸ್ ಪ್ರಕಟವಾದದ್ದು ೨೦೦೪ರಲ್ಲಿ. ಕನ್ನಡದಲ್ಲೂ ಮಾರ್ಕ್ವೆಜ್ ಪುಸ್ತಕಗಳು ಅನುವಾದವಾಗಿವೆ. ವಿಶ್ವಕಥಾಕೋಶದ ೨೪ನೆಯ ಸಂಪುಟ 'ಕಿವುಡು ವನದೇವತೆ'ಯಲ್ಲಿ ಪ್ರಕಟವಾದ ಕಥೆಯೊಂದು ಇದೇ ಸಂಚಿಕೆಯ ಪುಟ ೪೯ರಲ್ಲಿ ಕೊಡಲಾಗಿದೆ.

**ವೈ. ಜಿ. ಮುರಳೀಧರನ್**
ನಂ. ೬೦೦, 'ಸಂಧ್ಯಾರಾಗ', ೧ನೇ ಹಂತ, ೧ನೇ ಫೇಸ್, ಚಂದ್ರಾಲೇಔಟ್, ೧೫ನೇ ಅಡ್ಡರಸ್ತೆ
ನಾಗರಭಾವಿ ಅಂಚೆ, ಬೆಂಗಳೂರು – ೫೬೦ ೦೭೨

## ನೆನಪು

ದಿನಾಂಕ ೧೭-೪-೨೦೧೪ರಂದು ನಮ್ಮನ್ನಗಲಿದ
ಲ್ಯಾಟಿನ್ ಅಮೆರಿಕಾದ ಎಡಪಂಥೀಯ ಸಾಹಿತಿ,
ನೊಬೆಲ್ ಪ್ರಶಸ್ತಿ ಪುರಸ್ಕೃತ
**ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್**
ಜಾಗತಿಕ ಸಾಹಿತ್ಯಕ್ಕೆ ಅಪಾರ ಕೊಡುಗೆ
ನೀಡಿದ್ದಾರೆ. ಕಣ್ಮರೆಯಾದ ಸಾಹಿತಿಗೆ
'ಹೊಸತು' ಬಳಗದ ನುಡಿನಮನ ಸಲ್ಲುತ್ತದೆ.

## ದೆಲೌರಾನ ಕನಸು

ಮಂಜು ಮುಸುಕಿದ ಬಯಲು
ವಿಸ್ತಾರಕ್ಕೆ
ಗಾಜು ಕಿಟಕಿಯ ತಿಟ್ಟು
ಸಿಯಾರ್ವ ಮಾರಿಯಾ
ಉಡಿಯ ತುಂಬಾ
ಎಂದೂ ಖಾಲಿಯಾಗದ ದ್ರಾಕ್ಷಿ ಗೊಂಚಲು
ತಣ್ಣನೆ ಬೆರಳುಗಳಿಂದ
ಮಿಡಿಯುತ್ತಾ
ಕಿತ್ತು ಬಾಯಿಗಿಟ್ಟಂತೆಲ್ಲಾ
ಅದೇ ತೊಟ್ಟಿನಲ್ಲಿ ಮತ್ತೆ
ಇನ್ನೊಂದು ಹಣ್ಣು
ಧಾವಂತವಿಲ್ಲ ಸಿಯಾರ್ವ ಮಾರಿಯಾ
ದ್ರಾಕ್ಷಿ ಗೊಂಚಲಿನ ಕೊನೆಯ ಹಣ್ಣಿನಲ್ಲಿ
ಇರುವುದು
ಸಾವು

*(ಮಾರ್ಕ್ವೆಜ್‌ನ Of Love and Other Demons ಕಾದಂಬರಿಯಿಂದ ಪ್ರೇರಿತ)*

**ರೋಸಿ ಡಿ'ಸೋಜಾ**
ನಂ. ೨೧ (೮), 'ಸಾವಿತ್ರಿ', ಈಜುಕೊಳದ ರಸ್ತೆ
ಕೋದಂಡರಾಮಪುರ ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩



# ಋಗ್ವೇದ ಪ್ರವೇಶಿಕೆ

# ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಚೀಣಾದಲ್ಲಿ ಕನ್‌ಫ್ಯೂಶಿಯಸ್ ಪರಂಪರೆಯು ವಿಶಾಲವಾಗಿ ನೆಲೆಗೊಂಡಿತ್ತು. ಅದೇ ಸಮಯದಲ್ಲಿ ತವೋವಾದಿಗಳ ಪರಂಪರೆಯೂ ಉನ್ನತ ಸ್ಥಾನ ಪಡೆದುಕೊಂಡಿದ್ದಿತು. ತವೋವಾದಿಗಳು ಪ್ರಕೃತಿಯನ್ನು ಜೀವನದ ಮಾದರಿಯನ್ನಾಗಿ ಸ್ವೀಕರಿಸಿದ್ದುದು ಅವರನ್ನು ಬೇರೆ ತತ್ವಜ್ಞಾನಿಗಳಿಂದ ಭಿನ್ನೈಸಿದ್ದಿತು. ಅಂತಹ ಹಿನ್ನೆಲೆಯಲ್ಲಿ ಕನ್‌ಫ್ಯೂಶಿಯಸ್ ಪಂಥದ ಹ್ಸುನ್–ತ್ಸೆ ಎಂಬುವನು ತವೋವಾದಿಗಳಿಗೊಂದು ಪ್ರಶ್ನೆ ಹಾಕಿದ್ದ. ಅವನ ಪದ್ಯವನ್ನು ಹು ಶೀ ಎಂಬುವನು ಆಂಗ್ಲಭಾಷೆಗೆ ಅನುವಾದಿಸಿದ್ದಾನೆ. ಅದಕ್ಕೆ "ಪ್ರಾಚೀನ ಪ್ರಯೋಜನಾವಾದಿ" ಎಂಬ ಶೀರ್ಷಿಕೆ ನೀಡಲಾಗಿದೆ. ಅದು ಭಾಗಶಃ ಹೀಗಿದೆ :

*ಪ್ರಕೃತಿ ವೈಭವ ನಿನಗೆ ಸಂಪತ್ತು, ಅದೇ ಧ್ಯಾನದ ವಸ್ತು :*
*ಅದನು ರೂಢಿಸಿಕೊಂಡು ನಿಯಂತ್ರಿಸಬಾರದೇಕೆ ?*
*ಪ್ರಕೃತಿಯ ಮಡಿಲಲ್ಲಿ ನೀನೊಬ್ಬ ವಿಧೇಯ, ಹೊಗಳಿ ಬೆಂಡಾಗಿರುವೆ,*
*ಅದನು ಹತೋಟಿಗೊಳಪಡಿಸಿ ಉಪಯೋಗ ಪಡೆಯಬಾರದೆ !*
.................................................................
*ಪದಾರ್ಥದ ಆಸರೆ ನಿನಗೆ ಬೇಕು, ಅದರ ವಿಸ್ಮಯ ನಿನಗದ್ಭುತ :*
*ಇರಲಿ, ನಿನ್ನದೇ ಸಾಮರ್ಥ್ಯ ತೆರೆದುಕೊಳ್ಳುವುದೆಂದು ?*
*ಅದರಿಂದ ಆ ಪದಾರ್ಥವ ನೀ ಬದಲಿಸಿ ಸುಖಿಸುವುದೆಂದು ?*
*ಓ, ನಿನ್ನ ಚಿಂತನೆಯೆ : ಪದಾರ್ಥದ ಸೊಗಸೇನು, ಅದಂತಾದುದು ಹೇಗೆ !*
*ಆಗಲಯ್ಯ, ಅವು ಕ್ಷಯಿಸದಂತೆ ಅವನ್ನು ಒಪ್ಪ ಮಾಡಬಾರದೆ ?*
*ಆ ನಿನ್ನ ವಿಚಾರಗಳ ಹೊಳೆ ಬೇರೆ :*
*'ಪದಾರ್ಥಗಳ ಮೂಲ ಕಾರಣ ಎಂಥದು ?'*
*ನಿರರ್ಥಕ ಯತ್ನ ನಿನ್ನದು.*
*ಪ್ರಕೃತಿ ನೀಡುವುದನ್ನು ಪಡೆ, ಚೆನ್ನಾಗಿ ಸುಖಿಸು.*
*ನಾ ಹೇಳುವೆ ಕೇಳು : ಮಾನವನ ಕೈಬಿಟ್ಟು ಪ್ರಕೃತಿ ಮರ್ಮ ತಿಳಿಯ ಹೊರಟೆಯಲ್ಲ !*
*ನಿನಗಿನ್ನು ವಿಶ್ವವು ಅರ್ಥವಾದೀತೆಂತು ?*

*   *   *

ಋಗ್ವೇದದ ದೇವತೆಗಳದು ಒಂದು ವೈಶಿಷ್ಟ್ಯವಿದೆ : ಅದೇನೆಂದರೆ ಸ್ತುತಿಸಲ್ಪಡುವ ಯಾವುದೇ ಸಂದರ್ಭದಲ್ಲೂ ಅವರು ಬೇರೆಲ್ಲ ದೇವತೆಗಳಿಗಿಂತಲೂ ಮಿಗಿಲಾದವರು. ಅಗ್ನಿ, ಸವಿತೃ, ಇಂದ್ರ, ರುದ್ರ, ವರುಣ, ಹೀಗೆ ಯಾರನ್ನು ಗಮನಿಸಿದರೂ ಸ್ತೋತೃವಿನ ದೃಷ್ಟಿಯಲ್ಲಿ ದೇವತೆಯು ಉಚ್ಚತಮ ಸ್ಥಾನ ಪಡೆಯುತ್ತಾ ಸಾಗುವುದುಂಟು. 'ಈ ಮುಂಚೆ ಬೇರೊಬ್ಬ ದೇವತೆಯ ಬಗೆಗೂ ಇಂಥವೇ ಮಾತುಗಳನ್ನು ಹೇಳಿದ್ದೆಯಲ್ಲಾ' ಎಂದು ಯಾರೂ ಋಗ್ವೇದದ ಕವಿಯನ್ನು ಪ್ರಶ್ನಿಸುವುದಿಲ್ಲ, ಯಾರೂ ಅವನನ್ನು ಪಕ್ಷಾಂತರ ಮಾಡಿದ್ದಕ್ಕಾಗಿ ಛೇಡಿಸುವುದಿಲ್ಲ. ಪಕ್ಷಾಂತರಿಗಳ ನೀತಿಯೇ ಅದು, ಪ್ರಕೃತದಲ್ಲಿ ಯಾವ ಪಕ್ಷದಿಂದ ಲಾಭದ ನಿರೀಕ್ಷೆಯಿದೆಯೋ ಆ ಪಕ್ಷವನ್ನು ಶ್ರೇಷ್ಠವೆಂದು ಬಿಂಬಿಸುವುದು. ಬಹು ದೇವತೆಗಳಿರುವ ಸಂದರ್ಭದ ಈ ಅಭ್ಯಾಸವು ಏಕದೇವತೆಯ ಪರಿಕಲ್ಪನೆಯ ಸಂದರ್ಭದಲ್ಲಿ ಅವಾಸ್ತವವಾಗುತ್ತದೆ. ಕೆಲವು ಶತಮಾನಗಳ ಅವಧಿಯಲ್ಲಿ ರಚಿತವಾದ ಋಗ್ವೇದದ ಸೂಕ್ತಗಳಲ್ಲಿ ವಿವಿಧ ಘಟ್ಟಗಳ ವಿಶಿಷ್ಟ ದೃಷ್ಟಿಯ ಪ್ರತಿಫಲನವಿರುವುದು ಅಸಾಂಗತ್ಯ ದೋಷವೆನಿಸಿಕೊಳ್ಳುವುದಿಲ್ಲ, ಏಕೆಂದರೆ ದೃಷ್ಟಿಭೇದವು ವಿಕಸನದ ಹಾದಿಯ ಒಂದು ಪರಿಣಾಮ. ಪ್ರಕೃತಿಯನ್ನು ನೋಡುವ ಮತ್ತು ಅರ್ಥೈಸಿಕೊಳ್ಳುವ ವಿಧಾನದಲ್ಲಿ ನೂತನವಾದೊಂದು ದೃಷ್ಟಿಯು ಬೆಳೆದಾಗ ಹಿಂದಿನ ದೃಷ್ಟಿಯು ಗೌಣವಾಗುತ್ತದೆ. ಹಾಗೆಂದು ಸದಾ ಕಾಲಕ್ಕೂ ಅದು ಗೌಣವಾಗಿಯೇ ಉಳಿಯುವುದಿಲ್ಲ. ಅನೇಕ ಶತಮಾನಗಳ ವಿವಿಧ ದೃಷ್ಟಿಗಳೆಲ್ಲಾ ಒಂದೇ ಕಡೆ ಇರಿಸಲ್ಪಟ್ಟಾಗ ಋಗ್ವೇದದಂತಹ ಗ್ರಂಥವು ಏಕಕಾಲಕ್ಕೆ ಬೇರೆ ಬೇರೆ ನಿಲುವುಗಳನ್ನು ತೆಗೆದುಕೊಂಡಂತೆ ಗೋಚರಿಸುತ್ತದೆ; ಆದರೆ ಆ ಯಾವ ನಿಲುವುಗಳೂ ಅಂತಿಮವಲ್ಲ. ಇದು ಪ್ರಸ್ತುತ ಮಾಲಿಕೆಯಲ್ಲಿ ಹನ್ನೊಂದನೆಯ ಕಂತು.






ಅಂದರೆ, ಪ್ರಕೃತಿಯನ್ನು ನೋಡಿ ವಿಸ್ಮಿತವಾಗುವುದೊಂದು ರೀತಿ, ಅದನ್ನು ರೂಢಿಸಿಕೊಂಡು ಬೆಳೆಯುವುದು ಇನ್ನೊಂದು ರೀತಿ. ತತ್ತ್ವಶಾಸ್ತ್ರ ಮತ್ತು ವಿಜ್ಞಾನ ಗಳೆರಡಕ್ಕೂ ಅದು ಉಗಮ ಸ್ಥಾನ. ಋಗ್ವೇದದಲ್ಲಿ ಈ ಎರಡು ಬಗೆಗಳಿಗೂ ಪ್ರಾತಿನಿಧ್ಯವಿದೆ. ನಾವೀಗಾಗಲೆ ನೋಡಿರುವಂತೆ 'ಋತ'ವು ಎರಡು ಮಾದರಿ ಗಳಿಗೂ ಆದಿಕಲ್ಪನೆ. ಪ್ರಕೃತಿಯೊಳಗೆ ಹೊಗುತ್ತಾ ಫಲವನ್ನು ಸ್ವೀಕರಿಸಿ ಆಸ್ವಾದಿಸುವುದು ಒಂದು ಕ್ರಿಯೆ; ಅದೇ ಸಮಯದಲ್ಲಿ ಆರಾಧನಾಭಾವದಿಂದ ನೋಡಿ ಅದನ್ನು ಪರಿಪರಿಯಾಗಿ ಹೊಗಳುವುದು ಇನ್ನೊಂದು ಕ್ರಿಯೆ. ವಿಶ್ವದ ಎಲ್ಲ ಸಂಸ್ಕೃತಿಗಳಲ್ಲೂ ಕಾಣಬರುವ ವಿಧಾನ ಇದು. ೧೯ನೆಯ ಶತಮಾನದ ಆಂಗ್ಲ ಕವಿ ವರ್ಡ್ಸ್‌ವರ್ತ್‌ನಂತೆ ಋಗ್ವೇದದ ಕವಿಯು ತಾನು ಪ್ರಕೃತಿಯ ಆರಾಧಕ, ಅದರಿಂದ ತಾನು ಬಹಳ ವಿಧಗಳಲ್ಲಿ ಸುಖ ಪಡೆದಿರುವುದುಂಟು, ಎಂದು ಹೇಳಿಕೊಳ್ಳುವುದಿಲ್ಲ. ಆದರೆ ಪ್ರಕೃತಿಯ ಭಾಗಗಳಾದ ನೀರು, ಬೆಂಕಿ, ವಾಯು, ಭೂಮಿ, ಮರ, ಹೂವು, ಹಣ್ಣು, ಮಳೆ, ಸೂರ್ಯೋದಯ, ರಾತ್ರಿ, ನದಿ, ಕಾಡು, ಝರಿ, ಇತ್ಯಾದಿಗಳನ್ನೆಲ್ಲಾ ಕಂಡು ದಂಗಾಗುತ್ತಾನೆ, ಸ್ವಾಗತಿಸುತ್ತಾನೆ ಮತ್ತು ಧನ್ಯತೆಯ ಭಾವದಿಂದ ನಮಿಸಿ ತನ್ನ ಕೇಳಿಕೆಗಳನ್ನು ಮುಂದಿಡುತ್ತಾನೆ. ಪ್ರಕೃತಿಯ ಒಂದೊಂದು ಅಂಗದ ವಿಚಿತ್ರವನ್ನೂ ಅರ್ಥಮಾಡಿಕೊಳ್ಳುವ ಇರಾದೆ ಅವನದು, ಆದರೆ ಅದರಿಂದ ತಕ್ಷಣದ ಉಪಯೋಗ ಏನಿರಬಹುದು ಎಂಬುದು ಅವನ ಮಹದಾಸಕ್ತಿಯಲ್ಲ. "ಅದು ಸುಂದರವಾಗಿದೆ, ವಿಸ್ಮಯವನ್ನು ಸ್ಫುರಿಸುತ್ತದೆ" ಎಂಬುದಷ್ಟೇ ಪ್ರಯೋಜನ; ಆದಾಗ್ಯೂ ಪ್ರಕೃತಿಯ ಬಗ್ಗೆ ಒಂದು ಆರಾಧನಾಭಾವ. ಇದು ಋಗ್ವೇದದ ಕವಿಗಳ ದೃಷ್ಟಿ.

ಆರ್ನಾಲ್ಡ್ ಟಾಯನ್‌ಬಿಯ ಒಂದು ಗ್ರಂಥವಿದೆ : "ಇತಿಹಾಸಕಾರನೊಬ್ಬನು ಮತಧರ್ಮವನ್ನು ನೋಡುವ ಬಗೆ" (ಲಂಡನ್, ೧೯೫೬) ಎಂಬುದು ಅದರ ಶೀರ್ಷಿಕೆ. ಅಲ್ಲಿ ಆತನ ಮಾತೊಂದಿದೆ : "ಬಹುಶಃ ಮಾನವನು ಮೊದಲಿಗೆ ಪ್ರಕೃತಿಯನ್ನು ಆರಾಧಿಸಲು ಹೊರಡಲಿಲ್ಲವೆಂದು ಬಗೆಯುವುದು ಸರಿಯೆನಿಸುತ್ತದೆ. ತನ್ನ ಉದ್ದೇಶಗಳನ್ನು ಸಫಲಗೊಳಿಸಿಕೊಳ್ಳಲು ಪ್ರಕೃತಿಯನ್ನು ಉಪಯೋಗಿಸಿಕೊಳ್ಳುವ ಸಾಮರ್ಥ್ಯವಿನ್ನೂ ಇಲ್ಲದಿದ್ದಾಗ ಮಾನವ ಪ್ರಕೃತಿಯನ್ನೇಕೆ ಆರಾಧಿಸಲು ಮುಂದಾಗಬೇಕು ! ತನ್ನ ಪ್ರಭಾವವನ್ನು ಬೀರಲು ಸಾಧ್ಯವಿರದಂತಹ ಸಂದರ್ಭದಲ್ಲಿ ಯಾವುದೇ ಶಕ್ತಿಯನ್ನು ಮಾನವ ಆರಾಧಿಸಿಯಾನೆಂದು ಊಹಿಸಿಕೊಳ್ಳುವುದೇ ಕಷ್ಟ" (ಪು. ೧೮). ಅದಾವ ಮಾನವ ಜನಾಂಗದ ಇತಿಹಾಸದಿಂದ ಟಾಯನ್‌ಬಿಗೆ ಇಂತಹ ಬೋಧೆ ದೊರಕಿತೋ ತಿಳಿಯದು. ಋಗ್ವೇದದ ಹೊರಗೆ ನಿಂತು ಯೋಚಿಸಿದರೂ ಈ ಅಭಿಪ್ರಾಯವು ದೋಷಪೂರಿತವಾದುದೆಂದು ತಿಳಿಯುತ್ತದೆ. ಮೊದಲನೆಯದಾಗಿ, 'ಪ್ರಕೃತಿಯನ್ನು ಹತೋಟಿಗೆ ತೆಗೆದುಕೊಳ್ಳಬೇಕು, ತೆಗೆದುಕೊಳ್ಳಲು ಸಾಧ್ಯ' ಎಂಬ ಮಾತೇ ಅಪ್ರಕೃತ. ಬೇಕನ್ ಕಾಲದ ಮಾತು ಅದು. ಆ ಅಹಂಕಾರವು ಮಾನವನಲ್ಲಿ ಕ್ಷೀಣಿಸಿದೆ. ಹತೋಟಿಗೆ ತೆಗೆದುಕೊಳ್ಳುವುದು ಸಾಧ್ಯವಾದರೆ, ಅದರ ನಂತರ ಆರಾಧನಾಭಾವವಾದರೂ ಏಕೆ ಬೇಕು ಮತ್ತು ಹೇಗೆ ಬರುತ್ತದೆ ? ವಿಶ್ವದ ಸಾಂಸ್ಕೃತಿಕ ಇತಿಹಾಸದಲ್ಲಿ ಅತ್ಯಂತ ಪುರಾತನವಾದ ಆಚರಣೆಯೆಂದರೆ ಪ್ರಕೃತಿಯ ಅನುಕರಣೆ ಮತ್ತು ಆರಾಧನೆ. ಪ್ರತಿಯೊಂದು ಪ್ರಕೃತಿ ಶಕ್ತಿಯೂ ದೇವತಾರೂಪವನ್ನು ಧರಿಸುತ್ತದೆಯಾದ್ದರಿಂದ ಆದಿಯಲ್ಲಿ ಬಹುದೇವತೆಗಳಿರುವುದು ಸರ್ವೇಸಾಮಾನ್ಯ. ಕ್ರಮೇಣ ಅವನ್ನೆಲ್ಲಾ ಒಂದರಲ್ಲಿ ಒಳಗೊಳಿಸುತ್ತಾ ಏಕದೇವತೆಯ ಪರಿಕಲ್ಪನೆಯನ್ನು ಬೆಳೆಸಿಕೊಳ್ಳಲಾಗುತ್ತದೆ. ಅದನ್ನೇ "ಏಕಂ ಸತ್" ಎಂದು ನಂತರ ಹಿಗ್ಗಿಸಲಾಗುತ್ತದೆ (ಋ.೧.೧೬೪.೪೬).

ಋಗ್ವೇದದ ದೇವತೆಗಳ ಕಲ್ಪನೆಯಲ್ಲಿ ಇನ್ನೊಂದು ಮುಖ್ಯಾಂಶವಿದೆ : ಅವರೆಲ್ಲಾ ಮನುಷ್ಯರೂಪ ಮತ್ತು ಮನುಷ್ಯನ ಅಂಗಾಂಗಗಳನ್ನು ಹೊಂದಿರುತ್ತಾರೆ. ಅಗ್ನಿಯ ನಾಲಿಗೆ, ಇಂದ್ರನ ಕೈಗಳು ಹಾಗೂ ಆಯುಧ, ಸವಿತೃವಿನ ಕಣ್ಣು, ಮರುತ್ತುಗಳ ಉಸಿರು, ಸರಸ್ವತಿಯ ಸ್ತನ, ಇತ್ಯಾದಿಗಳು ಋಗ್ವೇದದಲ್ಲಿ ಪ್ರಸಿದ್ಧವಾಗಿವೆ. ವಿಶ್ವದ ಸರ್ವಸ್ವವೂ ಆದ ಪುರುಷನಿಗೆ ಸಾವಿರ ತಲೆಗಳು ಸಾವಿರ ಕಣ್ಣುಗಳು ಮತ್ತು ಸಾವಿರ ಕಾಲುಗಳು, ಇವೆ. ದೇವತೆಗಳ ರೂಪಗಳನ್ನು ಮಾನವ ರೂಪವನ್ನಾಧರಿಸಿ ಕಲ್ಪಿಸಿಕೊಳ್ಳುವುದು ಸಹ ಎಲ್ಲ ಮಾನವ ಸಂಸ್ಕೃತಿಗಳಲ್ಲೂ ಕಂಡುಬರುವ ಒಂದು ಲಕ್ಷಣ. ರೂಪರ್ಟ್ ಬ್ರೂಕ್ ಎಂಬ ಆಂಗ್ಲಕವಿಯು "ಸ್ವರ್ಗ" ಎಂಬ ಕವನವೊಂದನ್ನು ರಚಿಸಿದ್ದಾನೆ. ಮಾನವಕಲ್ಪಿತ ಸ್ವರ್ಗದ ಲಕ್ಷಣಗಳು ಸುಪರಿಚಿತವಾದವು. ಆನೆ, ಕುದುರೆ, ಪುಷ್ಪೋದ್ಯಾನ, ಮುಂತಾದುವಲ್ಲದೆ ಅಲ್ಲಿ ತಿಲೋತ್ತಮೆಯರಂತಹ ಅಪ್ಸರೆಯರು ಸಹ ಇರುತ್ತಾರೆ. ಬ್ರೂಕ್ ಕೇಳುತ್ತಾನೆ, "ಹಾಗಿದ್ದರೆ ಮೀನು ಕಲ್ಪಿಸಿಕೊಳ್ಳುವ ಸ್ವರ್ಗ ಹೇಗಿರುತ್ತದೆ ?" ಎಂದು. ಮೀನಿಗೆ ಬೇಕಾದಂತಹ ಅಪಾರ ನೀರು ಮತ್ತು ಆಹಾರ ಅಲ್ಲಿರುತ್ತವೆ, ಎನ್ನುತ್ತಾನವನು.

ಹೀಗೆ ಋಗ್ವೇದದ ಕವಿಗಳು ಕಲ್ಪಿಸಿಕೊಂಡ ದೇವತೆಗಳೆಲ್ಲಾ ಯಾವುದಾದರೊಂದು ಪ್ರಾಕೃತಿಕ ಅಂಶವನ್ನು ಪ್ರತಿನಿಧಿಸುತ್ತಾರೆಂದು ಹೇಳಿದರೆ ಅದು ತಪ್ಪಾಗುತ್ತದೆ. ಇಂದ್ರ, ವರುಣ, ಪ್ರಜಾಪತಿ, ಅದಿತಿ, ಮುಂತಾದವರು ಯಾವೊಂದು ಪ್ರಕೃತಿ ತತ್ತ್ವದ ಪ್ರತಿನಿಧಿಗಳೂ ಅಲ್ಲ; ಆದರೆ ಋಗ್ವೇದ ಕಾಲದ ಜೀವನಕ್ಕೆ ತೀರಾ ಹೊರತಾದಂಥವರೂ ಅಲ್ಲ. ಅವರವರಲ್ಲಿ ಎಂಥದೋ ಸ್ಪರ್ಧೆ ಇದೆ, ಒಬ್ಬ ದೇವತೆಯನ್ನು ಇನ್ನೊಬ್ಬ ದೇವತೆಯು 'ಸೋಲಿಸಿ' ಉನ್ನತ ಸ್ಥಾನಕ್ಕೇರುವುದುಂಟು, ಇತ್ಯಾದಿ ವಿಶ್ಲೇಷಣೆಗಳನ್ನು ಕೆಲವು ವಿದ್ವಾಂಸರು ಆಗಾಗ್ಗೆ ಕೊಡುತ್ತಾ ಬಂದಿದ್ದಾರೆ. ಉದಾಹರಣೆಗೆ, ಇಂದ್ರ ಮತ್ತು 'ಅಸುರ' ವರುಣನ ನಡುವೆ ಅಂತಹ ಪೈಪೋಟಿ ಇದ್ದು ಕೊನೆಗೆ ಇಂದ್ರನು ವಿಜಯಿಯಾದನೆಂದು ಕೆಲವರ ಅಭಿಮತ; ಅದನ್ನು ಪ್ರಶ್ನಿಸಿ, ಅಂತಿಮವಾಗಿ ವರುಣನೇ ವಿಜಯ ಸಾಧಿಸಿದನೆಂದು ಆರ್. ಎನ್. ದಾಂಡೇಕರ್ ವಾದಿಸಿದ್ದಾರೆ. ಇಂದ್ರನು ರಾಜನ್ಯ ಶಕ್ತಿಯನ್ನೂ ಅದಕ್ಕೆ ಪ್ರತಿಯಾಗಿ ವರುಣನು ನೈತಿಕ ಶಕ್ತಿಯನ್ನೂ ಪ್ರತಿನಿಧಿಸುತ್ತಾರೆಂಬ ಒಂದು ವಿಮರ್ಶೆ ಇದೆ. ಋಗ್ವೇದದ ಕವಿಗಳು ಅವೆರಡನ್ನೂ ಸ್ವೀಕರಿಸುತ್ತಾರೆಯೇ ವಿನಾ ಅವುಗಳಲ್ಲಿ ಒಂದನ್ನು ಆಯ್ದುಕೊಂಡು ಇನ್ನೊಂದನ್ನು ದೂರೀಕರಿಸುವುದಿಲ್ಲ. ಚಾರಿತ್ರಿಕ ದೃಷ್ಟಿಯಿಂದ ಇಂತಹ ವಾದಗಳಿಗೆ ಸರ್ವಥಾ ಅವಕಾಶವಿಲ್ಲ, ಏಕೆಂದರೆ ಆಯಾ ಕಾಲಘಟ್ಟದ ಜೀವನಕ್ರಮ ಮತ್ತು ಪಡೆಯಬಯಸುವ ರಕ್ಷಣೆಯನ್ನನುಸರಿಸಿ ಒಮ್ಮೆ ಈ ದೇವತೆ ಮತ್ತೊಮ್ಮೆ ಇನ್ನೊಬ್ಬ ದೇವತೆ ಉನ್ನತಸ್ಥಿತಿಗೆ ಏರುತ್ತಿರುವುದುಂಟು. ಋಗ್ವೇದದಲ್ಲಿ ಇಂದ್ರನ ಸ್ಥಾನವೇನೆಂದು ನಿಷ್ಕರ್ಷೆ ಮಾಡಹೊರಟರೆ ನಾವು ಸಂದಿಗ್ಧತೆಯಲ್ಲಿ ಸಿಲುಕಿಕೊಳ್ಳುತ್ತೇವೆ. ಅವನ ವ್ಯಕ್ತಿತ್ವ ಅಷ್ಟು ಸಂಕೀರ್ಣವಾಗಿ ಚಿತ್ರಿತವಾಗಿದೆ. ಋಗ್ವೇದದ ಕವಿಗಳು ಪದೇಪದೇ ಹೇಳುವಂತೆ ಅವನು ಅವರ ನೆಚ್ಚಿನ ರಕ್ಷಕ, ಮಹಾನ್ ಪರಾಕ್ರಮಿ. ಖಾಸಾ ಸ್ನೇಹಿತನಾಗಿ ಬಂದು ತಮ್ಮ ಬುಡಕಟ್ಟುಗಳ ಸಮಿತಿಗಳಲ್ಲಿ ಭಾಗಿಯಾಗುತ್ತಾನೆಂದು ಅವನನ್ನು ಶ್ಲಾಘಿಸುತ್ತಾರೆ. ಒಂದು ಮಂತ್ರದಲ್ಲಿ ಹೀಗೆ ಹೇಳಲಾಗಿದೆ : "ಅಯ್ಯಾ ಇಂದ್ರ, ನಮ್ಮ ಈ ಪೃಥ್ವಿಯು ಈಗಿರುವುದಕ್ಕಿಂತಲೂ ಹತ್ತು ಪಟ್ಟು ದೊಡ್ಡದೇ ಆಗಿದ್ದು, ಜನರೂ ಅಷ್ಟೇ ಬೃಹತ್ತಾಗಿ ವರ್ಧಿಸಿದ್ದರೂ ಚಿಂತೆ ಇರುತ್ತಿರಲಿಲ್ಲ; ಏಕೆಂದರೆ ನಿನ್ನ ಸಾಮರ್ಥ್ಯವು ಅಷ್ಟು ಪ್ರಸಿದ್ಧವಾದುದು. ವೃತ್ರಾದಿಗಳ ವಧೆಯಿಂದ ಅದನ್ನು ನೀನು ಸಾಬೀತುಪಡಿಸಿದ್ದೀಯೆ" (೧.೫೨.೧೧ : ಯದಿನ್ನ್ವಿಂದ್ರ ಪೃಥಿವೀ ದಶಭುಜಿಃ ಅಹಾನಿ ವಿಶ್ವಾ ತತನಂತ ಕೃಷ್ಟಯಃ। ಅತ್ರಾಹ ತೇ ಮಘವನ್ ವಿಶ್ರುತಂ ಸಹೋ ದ್ಯಾಮನು ಶವಸಾ ಬರ್ಹಣಾ ಭುವತ್॥). ಈ ಮಂತ್ರಕ್ಕೆ ಮುನ್ನ ಇಂದ್ರನನ್ನು ಒಂದೇ ಕಾಲಕ್ಕೆ ನೂರಾರು ಮಂದಿ ಆಹ್ವಾನ ನೀಡಿ ಬರಮಾಡಿಕೊಳ್ಳಲು ಕಾತುರರಾಗಿರುತ್ತಾರೆ ಎಂದು ಹೇಳಿದೆ (೧.೫೨.೧ : ಶತಂ ಯಸ್ಯ ಸುಭ್ವಃ ಸಾಕಮೀರತೇ). ಇಂದ್ರನ ಪ್ರತಾಪವನ್ನು ಸ್ಮರಿಸುವಾಗ ಅವನ ಒಂದು ಮಹಾನ್ ಕೃತ್ಯವನ್ನು ಋಗ್ವೇದದ ಕವಿಗಳು ತಪ್ಪದೆ ಪ್ರಸ್ತಾಪಿಸುತ್ತಾರೆ. "ಸೋಮರಸ ಪಾನದಿಂದ ಅವನ ಹರ್ಷವು ಮುಗಿಲು



ಮುಟ್ಟಿರುತ್ತದೆ. ಆ ಹುಮ್ಮಸ್ಸಿನಲ್ಲಿ ಅವನು ವೃತ್ರನ ವಧೆ ಮಾಡಿ ನದಿಗಳನ್ನು ಬಿಡುಗಡೆಗೊಳಿಸುತ್ತಾನೆ ಮತ್ತು ವೇಗವಾಗಿ ಹರಿಯುವ ನೀರಿನಲ್ಲಿ ಪರ್ವತದಂತೆ ಸ್ಥಿರವಾಗಿ ನಿಂತು ಬಲವನ್ನು ಹೆಚ್ಚಿಸಿಕೊಳ್ಳುತ್ತಾನೆ" (ಮಂತ್ರ ೨: ಇಂದ್ರೋ ಯತ್ ವೃತ್ರಂ ಅವಧೀತ್ ನದೀವೃತಂ ಉಬ್ಜನ್ ಅರ್ಣಾಂಸಿ ಜರ್ಹಷಾಣೋ ಅಂಧಸಾ). ಸರ್ಪರೂಪದಲ್ಲಿ ವೃತ್ರನು ಎಲ್ಲೋ ಗವಿಯಲ್ಲಿ ನೀರನ್ನೆಲ್ಲಾ ತಡೆದಿಟ್ಟುಕೊಂಡಿರುತ್ತಾನೆ ಮತ್ತು ಇಂದ್ರನು ಅವನನ್ನು ಪರಾಭವಗೊಳಿಸಿ ಕೊಲ್ಲುತ್ತಾನೆ ಹಾಗೂ ನೀರನ್ನು ರಭಸವಾಗಿ ಹರಿಸುತ್ತಾನೆ ಎಂಬುದು ಋಗ್ವೇದದಲ್ಲಿ ಹತ್ತಾರು ಸಲ ಉಕ್ತವಾಗಿದೆ. ಇಲ್ಲಿ 'ಸರ್ಪ' ಯಾವುದು, 'ವೃತ್ರ' ಎಂದರೆ ಯಾರು, ಎಂಬ ಪ್ರಶ್ನೆಗಳನ್ನು ಬಹಳ ಹಿಂದಿನಿಂದಲೂ ಚರ್ಚಿಸುತ್ತಾ ಬರಲಾಗಿದೆ. ವೃತ್ರನ ಹತ್ಯೆಗೆ ಇಂದ್ರನು ತನ್ನ ಆಯುಧವಾದ ವಜ್ರವನ್ನು ಬಳಸುತ್ತಾನೆ. ಅದರಿಂದ ವಲನೆಂಬುವವನನ್ನೂ ಇಂದ್ರನು ಕೊಲ್ಲುತ್ತಾನೆ. ವೃತ್ರನು ನೀರನ್ನು ಹಿಡಿದಿಟ್ಟುಕೊಂಡು ಅಂತರಿಕ್ಷಕ್ಕೂ ಮೇಲೆಲ್ಲೋ ಇರುವುದುಂಟು. ತನ್ನ ಬಲದಿಂದ ಇಂದ್ರನು ವೃತ್ರನನ್ನು ಅಲ್ಲಿಯೂ ಸಂಹರಿಸುತ್ತಾನೆ ಮತ್ತು ನೀರು ಹರಿಸುತ್ತಾನೆ (೧.೫೨.೬). ಮೋಡದಿಂದ ಮಳೆ ಸುರಿಸುತ್ತಾನೆ, ಇಲ್ಲವೆ ಹಿಮವನ್ನು ಕರಗಿಸಿ ನದಿಯ ಪ್ರವಾಹವನ್ನುಂಟು ಮಾಡುತ್ತಾನೆ ಎಂಬ ಸೂಚನೆ ವೃತ್ರನ ವಧೆಯಲ್ಲಿ ಅಡಕಗೊಳಿಸಲಾಗಿದೆಯೆಂಬ ಅಭಿಪ್ರಾಯವಿದೆ. ಹೇಗೂ ಋಗ್ವೇದದ ಕವಿಗಳು ವಾಯವ್ಯ ಭಾರತದಲ್ಲಿದ್ದವರು ಮತ್ತು ಶಿಶಿರ ಋತುವಿನಲ್ಲಿ ಹಿಮಾಲಯವು ಹಿಮದಿಂದ ಆವೃತವಾಗಿರುತ್ತಿದ್ದುದನ್ನು ಕಂಡಿದ್ದವರು. ನೀರನ್ನು ಹೆಪ್ಪುಗಟ್ಟಿಸಿ ಹಿಡಿದಿಟ್ಟವನು ವೃತ್ರ ಮತ್ತು ಅದನ್ನು ಮುಕ್ತಗೊಳಿಸುವವನು ಇಂದ್ರ. ಮೋಡದಿಂದ ಮಳೆ ಸುರಿಸಿ ಇಂದ್ರನು ಸೂರ್ಯನನ್ನು ಜನರಿಗೆ ಕಾಣುವಂತೆ ಮಾಡುತ್ತಾನೆ (೧.೫೨.೮: ಅಯಚ್ಛಥಾ ಬಾಹ್ವೋಃ ವಜ್ರಂ ಆಯಸಮಧಾರಯೋ ದಿವ್ಯಾ ಸೂರ್ಯಂ ದೃಶೇ ॥). ವೃತ್ರನಿಗೂ ಮೋಡಕ್ಕೂ ಸಂಬಂಧವು ಇಲ್ಲಿ ಸ್ಪಷ್ಟವಾಗಿ ಸೂಚಿತವಾಗಿದೆ. ಇನ್ನೊಂದು ವಿಶೇಷವೆಂದರೆ ಮೋಡವನ್ನು ಚದುರಿಸುವ ಮರುತ್ತುಗಳು ಸದಾ ಇಂದ್ರನೊಡನಿದ್ದು ವೃತ್ರನ ವಧೆಗೆ ಸಾಕ್ಷಿಗಳಾಗುತ್ತಾರೆ ಮತ್ತು ಹರ್ಷದಿಂದ ಇಂದ್ರನನ್ನು ಗೌರವಿಸುತ್ತಾರೆ (೧.೫೨.೧೫: ವೃತ್ರಸ್ಯ ಯದ್ಭೃಷ್ಟಿಮತಾ ವಧೇನ ನಿ ತ್ವಮಿಂದ್ರ ಪ್ರತ್ಯಾನಂ ಜಘಂಥ).

ಇಂದ್ರನು ವೃತ್ರನನ್ನು ಸಂಹರಿಸುವುದು ನಿಶ್ಚಿತವೆಂದು ಕವಿಗೆ ಭರವಸೆ ಇದೆ. ಆದ್ದರಿಂದ ಅವನೆನ್ನುತ್ತಾನೆ: "ನನ್ನ ಸಹವಾಸದಲ್ಲಿರುವವರೇ ಕೇಳಿ: ಬೇಕಾದರೆ ನೀವು ಹತ್ತು ಹಸುಗಳನ್ನು ಕೊಟ್ಟು ನನ್ನಿಂದ ಇಂದ್ರನನ್ನು ಪಡೆದುಕೊಳ್ಳಿ, ನನಗೇನೂ ನಷ್ಟವಿಲ್ಲ; ಏಕೆಂದರೆ, ವೃತ್ರನನ್ನು ಕೊಂದನಂತರ ಇಂದ್ರನು ನನ್ನಲ್ಲಿಗೆ ವಾಪಸ್ಸಾಗುತ್ತಾನೆ, ಆಗ ನನ್ನ ಹಸುಗಳನ್ನು ಹಿಂದಿರುಗಿಸಿ" (೪.೨೪.೧೦: ಕ ಇಮಂ ದಶಭಿರ್ಮಮೇಂದ್ರಂ ಕ್ರೀಣಾತಿ ಧೇನುಭಿಃ। ಯದಾ ವೃತ್ರಾಣಿ ಜಂಘನತ್ ಅಥೈನಂ ಮೇ ಪುನರ್ದದತ್ ॥). ಇಂದ್ರನಲ್ಲಿ ಇವರಿಗೆ ಎಷ್ಟು ಭರವಸೆ ಇದೆಯೆಂದರೆ ಗೀತೆಯಲ್ಲಿ ಭಗವಾನನು 'ನೀನು ನನ್ನ ಭಕ್ತನಾಗು, ನನ್ನನ್ನು ಸೇವಿಸು, ನನಗೆ ನಮಿಸು' (೯.೩೪ ಮತ್ತು ೧೮.೬೫) ಎಂದು ಅರ್ಜುನನಿಗೆ ಹೇಳುವಂತೆ ಋಗ್ವೇದದ ಕವಿಯು "ಇಂದ್ರನನ್ನುಳಿದು ಬೇರೆ ಯಾರನ್ನೂ ಹೊಗಳ ಬೇಡ, ಹಾಗೇನಾದರೂ ಮಾಡಿದರೆ ಅದು ಇಂದ್ರನಿಗೆ ಅಪಚಾರವಾಗುತ್ತದೆ" ಎನ್ನುತ್ತಾನೆ (೮.೧.೧: ಮಾ ಚಿತ್ ಅನ್ಯದ್ವಿ ಶಂಸತ ಸಖಾಯೋ ಮಾ ರಿಷಣ್ಯತ). ಅಂತೆಯೇ, "ಬೇರೆಯವರು ಯಾವ ದೇವತೆಯನ್ನು ಬೇಕಾದರೂ ತುಷ್ಟೀಕರಿಸಲಿ, ನಮಗೆ ಮಾತ್ರ ನೀನೇ ವರ್ಧಕ" (೮.೧.೩: ಅಸ್ಮಾಕಂ ಬ್ರಹ್ಮೇದಮಿಂದ್ರ ಭೂತು ತೇಽಹಾ ವಿಶ್ವಾ ಚ ವರ್ಧನಂ) ಎನ್ನುತ್ತಾನೆ. ಮುಂದುವರಿದು "ನೀನು ನಮ್ಮ ತಂದೆ, ತಾಯಿ, ಸೋದರ, ಇತ್ಯಾದಿಗಳಿಗಿಂತಲೂ ಹೆಚ್ಚು ಹತ್ತಿರವಾದವನು. ಸಂಪತ್ತನ್ನು ಕೊಡುವುದರಲ್ಲಿ ನೀನು ತಾಯಿ ಸಮಾನ" ಎನ್ನುತ್ತಾನೆ (೮.೧.೬: ವಸ್ಯಾನ್ ಇಂದ್ರಾಸಿ ಮೇ ಪಿತುರುತ ಭ್ರಾತುರಭುಂಜತಃ। ಮಾತಾ ಚ ಮೇ ಛದಯಥಃ ಸಮಾ ವಸೋ ವಸುತ್ವನಾಯ ರಾಧಸೇ ॥). ಏಕಕಾಲಕ್ಕೆ ಅವನು ಅನೇಕ ಕಡೆ ಇರಬೇಕಾದಂತಹ ದೇವತೆ, ಏಕೆಂದರೆ ಎಲ್ಲೆಲ್ಲೂ ಅವನಿಗಾಗಿ ಗಾನ ಮಾಡುವವರಿದ್ದಾರೆ. ಜೊತೆಗೆ, ಅವನು ವೀರಾಗ್ರಣಿಯಾಗಿ ಯುದ್ಧದಲ್ಲಿ ತೊಡಗಿಕೊಳ್ಳುತ್ತಾನೆ ಮತ್ತು ವಿರೋಧಿಗಳ 'ಪುರ'ಗಳನ್ನು ನಾಶಗೊಳಿಸುತ್ತಾನೆ, ಆದ್ದರಿಂದ 'ಎಲ್ಲಿ ಹೋದೆ, ಎಲ್ಲಿದ್ದೀಯೆ' ಎಂದು ಸದಾ ಅವನ ಪ್ರತೀಕ್ಷೆಯಲ್ಲಿರುತ್ತಾರೆ (ಮಂತ್ರ ೭: ಕ್ವೇಯಥ ಕ್ವೇದಸಿ ಪುರುತ್ರಾ ಚಿದ್ಧಿ ತೇ ಮನಃ। ಅಲರ್ಷಿ ಯುಧ್ಮ ಖಜಕೃತ್ಪುರಂದರ ಪ್ರ ಗಾಯತ್ರಾ ಅಗಾಸಿಷುಃ ॥). "ಪುರಂದರ" ಎಂದರೆ ಪುರಗಳನ್ನು ಅಥವಾ ವಸತಿಗಳನ್ನು ಪೋಷಿಸುವವನಲ್ಲ, ಅವನು ಅವನ್ನು ನಾಶಪಡಿಸುತ್ತಾನೆ. ಒಬ್ಬ ದೇವತೆ ಹಾಗೆ ಮಾಡುವುದು ಹೊಗಳಿಕೆಗೆ ಕಾರಣವಾಗಬಹುದೆ? ಋಗ್ವೇದದ ಸಂದರ್ಭದಲ್ಲಿ ಇದೊಂದು ಬಹಳ ಕ್ಲಿಷ್ಟವಾದ ಮತ್ತು ಚರ್ಚಿತವಾಗಿರುವ ಪ್ರಶ್ನೆ. ಇಂದ್ರನಲ್ಲದೆ ಬೇರಾವ ದೇವತೆಗಳೂ 'ಪುರಂದರ'ರಲ್ಲ.

ಪ್ರಶ್ನೆಯ ಹಿನ್ನೆಲೆಯನ್ನು ಸರಿಯಾಗಿ ಗಮನಿಸೋಣ: ಋಗ್ವೇದದ ಕವಿಗಳು ಸ್ವತಃ ಬುಡಕಟ್ಟು ಹಂತದ ಸಾಮಾಜಿಕ ವ್ಯವಸ್ಥೆಯಲ್ಲಿದ್ದವರು; ಆದಾಗ್ಯೂ ಅವರು ಬೇರೆ ಬುಡಕಟ್ಟುಗಳ ಜನರನ್ನು ಹೀಯಾಳಿಸುತ್ತಾರೆ, ಅವರನ್ನು ನಾಶಗೊಳಿಸುವ ದೇವತೆಗಳನ್ನು ಪುರಸ್ಕರಿಸುತ್ತಾರೆ. ಹಿಂದಾಗಲೆ ನಾವು ನೋಡಿರುವಂತೆ ಋಗ್ವೇದದಲ್ಲಿ ಹಲವು ಬುಡಕಟ್ಟುಗಳು ಪ್ರಸ್ತಾಪಗೊಂಡಿವೆ. ಅವುಗಳಲ್ಲಿ ಪಂಚಜನರು, ಪಣಿಗಳು, ಮುಖ್ಯವಾದವರು. ಈ ಪಂಚಜನರಿಗೆ ಮತ್ತು ಪಣಿಗಳಿಗೆ 'ಪುರ'ಗಳು ಇದ್ದಂತೆ ತೋರುವುದಿಲ್ಲ. ಬಹುಶಃ ಋಗ್ವೇದದ 'ಆರ್ಯ' ಬುಡಕಟ್ಟುಗಳನ್ನು ವಿರೋಧಿಸಿದ್ದಷ್ಟೇ ಅವರೆಸಗಿದ ತಪ್ಪಿರಬಹುದು. ಹಾಗಿದ್ದರೆ 'ಪುರ'ಗಳು ಯಾರವು ಮತ್ತು ಇಂದ್ರ ಅವನ್ನು ಧ್ವಂಸಗೊಳಿಸುವುದೇಕೆ? ಋಗ್ವೇದದ ಕವಿಗಳ ಬುಡಕಟ್ಟಿನವರು ವಸತಿಗಾಗಿ 'ಪುರ'ಗಳನ್ನು ಕಟ್ಟಿಕೊಂಡಿರಲಿಲ್ಲವೆ? ಕಟ್ಟಿಕೊಂಡಿದ್ದರೆ, ತಮ್ಮದಲ್ಲದ ಪುರಗಳನ್ನು ನಾಶಪಡಿಸಬೇಕಾದ ಅಗತ್ಯವೇನಿತ್ತು ಮತ್ತು ಹಾಗೆ ನಾಶಪಡಿಸುವ ಇಂದ್ರನನ್ನು ಕಲ್ಪಿಸಿಕೊಳ್ಳಬೇಕಾಗಿತ್ತೇಕೆ? ಅಥವಾ, ತಾವಿನ್ನೂ ಏರಲಾಗದಿದ್ದ ನಾಗರಿಕತೆಯ ಹಂತಕ್ಕೇರಿದ್ದವರೇನಾದರೂ ಪುರಗಳನ್ನು ಕಟ್ಟಿಕೊಂಡಿದ್ದು, ಅವರನ್ನು ಮತ್ತು ಅವರ ಪುರಗಳನ್ನು ಧ್ವಂಸಮಾಡಬೇಕಾಗಿ ಬಂದಿತೆ? ಪುರಗಳನ್ನು ಕಟ್ಟಿಕೊಂಡಿದ್ದವರಿಗೆ ಅವನ್ನು ರಕ್ಷಿಸಿಕೊಳ್ಳುವಷ್ಟು ಸಾಮರ್ಥ್ಯವಿರಲಿಲ್ಲವೆ? ಅವರೇನಾದರೂ ಪುರಗಳನ್ನು ತೊರೆದುಹೋಗಿಬಿಟ್ಟಿದ್ದರೆ ಅಂತಹ ನಿರ್ಜನ ಪುರಗಳನ್ನು ಇಂದ್ರನು ಧ್ವಂಸಮಾಡುವುದು ಎಂತಹ ಪರಾಕ್ರಮ?

ಹೀಗೆ ಪ್ರಶ್ನೆಗಳು ಹಲವು. ಅವುಗಳನ್ನೆತ್ತುವುದು ಸುಲಭ, ಆದರೆ ನಮಗೆ ದೊರೆತಿರುವ ಮಾಹಿತಿ ಮತ್ತು ಲಭ್ಯವಿರುವ ಆಧಾರಗಳ ಸಹಾಯದಿಂದ ಅವಕ್ಕೆ ಖಚಿತವಾದ ಉತ್ತರ ನೀಡುವುದು ಆಗದ ಮಾತು. ಕೆಲವು ವಿದ್ವಾಂಸರು ತಮಗೆ ತೋಚಿದಂತೆ 'ಖಚಿತ'ವಾದ ಉತ್ತರಗಳನ್ನು ಕೊಟ್ಟಿದ್ದಾರೆ, ಆದರೆ ಅವನ್ನು ಬೇರೆ ವಿದ್ವಾಂಸರು ಅಂಗೀಕರಿಸಿಲ್ಲ. ಮೂಲತಃ ಇಂತಹ ಪ್ರಶ್ನೆಗಳಿಗೆ ಉತ್ತರ ಹುಡುಕಲು ಅಗತ್ಯವಾದ ಬೌದ್ಧಿಕ ವಾತಾವರಣವನ್ನು ಸಹ ನಾವಿನ್ನೂ ರಚಿಸಿಕೊಂಡಿಲ್ಲ. ಆರ್ಯರು ಎಲ್ಲಿಯವರು ಎಂಬ ಪ್ರಶ್ನೆಯೇ ಅಪ್ರಾಸಂಗಿಕವೆಂದು ಹೇಳುವ ವಿದ್ವಾಂಸರು ನಮ್ಮಲ್ಲಿದ್ದಾರೆ. ಬಹುಶಃ ಪ್ರಸಕ್ತ ರಾಜಕೀಯ-ಸಾಂಸ್ಕೃತಿಕ ಸನ್ನಿವೇಶಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿಕೊಳ್ಳಲು ಹಾಗೆ ಹೇಳುವುದು ಅಗತ್ಯವಿರಬಹುದು! ಆರ್ಯರು ಹೊರಗಿನಿಂದ ಬಂದು ಇಲ್ಲಿಯದೇನನ್ನೋ ನಾಶಗೊಳಿಸಿದರೆಂಬುದನ್ನು ಒಪ್ಪಿದರೆ ನಂತರದ ಶತಮಾನಗಳಲ್ಲಿ ಬಂದು ಇಲ್ಲಿ ಧ್ವಂಸ-ಕೃತ್ಯಗಳನ್ನು ಎಸಗಿದ್ದವರನ್ನು ದೂಷಿಸುವ ರಾಜಕೀಯ ಅಸಿಂಧುವಾಗಿಬಿಡುತ್ತದೆ. 'ಅಯೋಧ್ಯೆ' ರಾಜಕೀಯವು ಆಗ ಸಾಧ್ಯವಾಗುವುದಿಲ್ಲ. ಭಾರತದ ಇತಿಹಾಸದಲ್ಲಿ ಸಿಂಧೂ ನದಿ ನಾಗರಿಕತೆಯೆಂದು ಹೆಸರಾಗಿರುವ ಉನ್ನತ ಹಂತದ ವ್ಯವಸ್ಥೆಯಲ್ಲಿ ನಗರೀಕರಣವು ವ್ಯಾಪಕವಾಗಿತ್ತು. ಹರಪ್ಪ, ಮೊಹೆಂಜೊದಾರೊ, ಕಾಲಿಬಂಗನ್,

## ನೆರಳು



ಯಾವ ರೀತಿ
ಕೊಡೆ ಹಿಡಿದರೂ
ನೆನೆಯುವುದು
ಖಚಿತ
ಆ ನೆರಳು !

ಡಾ॥ ವಿ. ಪುಗಳೇಂದಿ, ಬಳ್ಳಾರಿ

ಲೋಥಾಲ್, ಮುಂತಾದವು ಆ ಪ್ರಾಚೀನ ನಾಗರಿಕತೆಯ ಕೇಂದ್ರಗಳು. ಪಶು ಸಂಗೋಪನಾ ಹಂತದಲ್ಲಿದ್ದು ಕ್ರಮೇಣ ಕೃಷಿಯತ್ತ ಹೆಜ್ಜೆ ಹಾಕುತ್ತಿದ್ದ ಋಗ್ವೇದದ ಆರ್ಯರು ನಗರಗಳನ್ನು ಕಂಡಿದ್ದಿರ ಬಹುದು; ಆದರೆ ಕಟ್ಟಿರಲಿಲ್ಲ. ಋಗ್ವೇದದ ಜನರೇ ಸಿಂಧೂ ನಾಗರಿಕತೆಯ ನಗರಗಳನ್ನು ಕಟ್ಟಿದ್ದರೆಂದು ಖ್ಯಾತ ಉತ್ಖನನ ಶಾಸ್ತ್ರಜ್ಞ ಎಸ್. ಆರ್. ರಾವ್ ವಾದಿಸಿದ್ದಾರೆ, ಆದರೆ ಅದನ್ನು ವಿಶದಪಡಿಸುವ ೪೦೦ ಪುಟಗಳ ಅವರ ಗ್ರಂಥವನ್ನು ಮಾನ್ಯ ಮಾಡಿದವರೇ ಇಲ್ಲ. ಅವರು ಹರಪ್ಪ ಸಂಸ್ಕೃತಿಯ ಕಾಲದ ಮೊಹರುಗಳಲ್ಲಿರುವ ಲಿಪಿಯನ್ನು ನಾವು ಅ–ಆ–ಇ–ಈ ಓದುವಷ್ಟೇ ಸರಾಗವಾಗಿ ಓದುತ್ತಿದ್ದರು, ಆದರೆ ಇಂದಿಗೂ ಆ ಲಿಪಿಯನ್ನು ತಿಳಿಯಲಾಗಿಲ್ಲವೆಂಬುದು ಅತ್ಯಂತ ಸತ್ಯ. ಋಗ್ವೇದದ ಜನಸಮುದಾಯವೇ ಹರಪ್ಪ ಸಂಸ್ಕೃತಿಯ ನಿರ್ಮಾತೃಗಳೆಂಬುದು ನಿಜವಾದರೆ ಒಂದು ಗಂಭೀರ ಅಸಾಂಗತ್ಯ ನಮ್ಮನ್ನು ಕಾಡುತ್ತದೆ : ಒಮ್ಮೆ ಭಗ್ನವಾದ ನಗರಗಳನ್ನು ತಂತ್ರಜ್ಞ ರಾಗಿದ್ದಾಗ್ಯೂ ಮತ್ತೊಮ್ಮೆ ಅವರೇಕೆ ಪುನರ್ನಿರ್ಮಿಸಲಿಲ್ಲ, ಎಂಬುದು ಆ ಪ್ರಶ್ನೆ. ಹರಪ್ಪ ಸಂಸ್ಕೃತಿಯ ಅವಶೇಷಗಳಲ್ಲಿ ದೊರೆತಿರುವ ಸುಟ್ಟ ಇಟ್ಟಿಗೆಗಳು ಪ್ರಖ್ಯಾತವಾಗಿವೆ. ಮತ್ತೆ ನಮ್ಮ ದೇಶದಲ್ಲಿ ನಗರೀಕರಣದ ಸೂಚನೆ ಸಿಕ್ಕುವುದು ಅಶೋಕನ ಕಾಲದ ವೇಳೆಗೆ, ಆಗ ಮತ್ತೆ ಸುಟ್ಟ ಇಟ್ಟಿಗೆಗಳು ಕಾಣಬರುತ್ತವೆ. ಅಂದರೆ, 'ಪುರಂದರ' ಇಂದ್ರನು ಪುರಗಳನ್ನು ನಾಶಮಾಡಬಲ್ಲವ ನಾಗಿದ್ದ, ಆದರೆ ಅವನನ್ನು ಹೊಗಳುತ್ತಿದ್ದ ಋಗ್ವೇದದ ಕವಿಗಳ ಸಮುದಾಯಕ್ಕೆ ಪುರಗಳನ್ನು ಕಟ್ಟುವ ತಂತ್ರ ತಿಳಿದಿರಲಿಲ್ಲವೆಂದರ್ಥ. ಆರ್ಯರು ಭಾರತಕ್ಕೆ ವಾಯವ್ಯ ದಿಕ್ಕಿನಿಂದ ಪ್ರವೇಶಿಸಿ ಸಿಂಧೂ ನದಿಯ ಬಯಲಲ್ಲಿ ನೆಲೆಸಿದರು, ಅಳಿಯದೆ ಉಳಿದಿದ್ದ ಚಿಕ್ಕಪುಟ್ಟ ಪುರಗಳನ್ನು ಇಲ್ಲವಾಗಿಸಿದರು, ಕ್ರಮೇಣ ಪೂರ್ವ ಮತ್ತು ದಕ್ಷಿಣದತ್ತ ಹೊರಟರು. "ಆರ್ಯರಿಗಾಗಿ ಹುಡುಕಾಟ" (ನವಕರ್ನಾಟಕ ಪ್ರಕಾಶನ) ಎಂಬ ಪ್ರಸಿದ್ಧ ಹೊತ್ತಿಗೆಯಲ್ಲಿ ಆರ್. ಎಸ್. ಶರ್ಮ ಅವರು ಇದನ್ನು ಸಾಹಿತ್ಯಕ, ಸಾಂಸ್ಕೃತಿಕ ಮತ್ತು ಉತ್ಖನನ ಶಾಸ್ತ್ರದ ದಾಖಲೆಗಳ ಆಧಾರದ ಮೇಲೆ ಸೊಗಸಾಗಿ ನಿರೂಪಿಸಿದ್ದಾರೆ. ಆಸಕ್ತರು ಅದನ್ನು ಪರಿಶೀಲಿಸಬಹುದು. ಅಂತಹ ಗ್ರಂಥಗಳ ಅಧ್ಯಯನವನ್ನೇ ಮಾಡದೆ ಪೂರ್ವಗ್ರಹ ತೀರ್ಮಾನಗಳನ್ನು ಪ್ರಕಟಿಸುವ ಅವಿದ್ವಾಂಸರಿಗೆ ಇಂದ್ರನೇ ಗತಿ !



ಇಷ್ಟೊಂದು ಮತದಾರರಿದ್ದರೂ ನಿಮಗೆ ಚುನಾವಣೆಯಲ್ಲಿ ಠೇವಣಿ ಉಳಿಸಿಕೊಳ್ಳೋದೇ ಕಷ್ಟವಾಗಿದೆಯಲ್ರೀ...

ಋಗ್ವೇದದಲ್ಲಿ 'ಅರ್ಮಕೇ' ಎಂಬ ಶಬ್ದವು ಒಂದೇ ಮಂತ್ರದಲ್ಲಿ (೧.೧೩೩.೩) ಎರಡು ಬಾರಿ ಬಂದಿದೆ. ಅವಹೇಳನಕರವಾದಂತಹ ಜಾಗಕ್ಕೆ ಆ ಹೆಸರಿದೆ. ಭಾಷಾಶಾಸ್ತ್ರಜ್ಞ ಟಿ. ಬರೋ 'ಅರ್ಮ' ಮತ್ತು 'ಅರ್ಮಕ' ಎಂಬ ಶಬ್ದಗಳ ಅರ್ಥವನ್ನು ಕುರಿತಂತೆ ಒಂದು ಲೇಖನ ಬರೆದಿದ್ದಾನೆ. ಭೂತಾರ್ಮ, ಸಂಜೀವಾರ್ಮ, ಮಾದ್ರಾರ್ಮ, ಇತ್ಯಾದಿ ಸ್ಥಳನಾಮಗಳನ್ನೂ ಅವನು ದಾಖಲಿಸಿದ್ದಾನೆ. ಪಾಳುಬಿದ್ದ ಊರು ಅಥವಾ ಪಾಳೆಯವನ್ನು 'ಅರ್ಮ' ಎಂಬ ಪದವು ಸೂಚಿಸುತ್ತದೆಂಬುದು ಅವನ ವಾದ. ಪಾಣಿನಿಯ ವ್ಯಾಖ್ಯಾನಕಾರರು ಆ ಪದಕ್ಕೆ "ವಿನಷ್ಟ ಗ್ರಾಮ" ಎಂಬರ್ಥವನ್ನು ಕೊಟ್ಟಿದ್ದಾರೆ, ಅಂದರೆ ಪಾಳುಬಿದ್ದ ಗ್ರಾಮವೇ. ಅಂತಹ ಗ್ರಾಮಗಳನ್ನು ಋಗ್ವೇದದ ಕವಿಗಳು ನೋಡಿದ್ದೆಲ್ಲಿ ? ಎಲ್ಲವನ್ನೂ ಇಂದ್ರನೇ ಹಾಳುಗೆಡವಿದ್ದನೆ ? ನೈತಂಧವ ಮತ್ತು ವ್ಯರ್ಣ ಎಂಬ ಪಾಳುಬಿದ್ದ ಪಾಳೆಯಗಳನ್ನು ಪಂಚವಿಂಶ ಬ್ರಾಹ್ಮಣ ಎಂಬ ಗ್ರಂಥದಲ್ಲಿ ಹೆಸರಿಸ ಲಾಗಿದೆ. ಅವು ಹರಪ್ಪ ಸಂಸ್ಕೃತಿಯ ಕಾಲದಲ್ಲಿ ವೈಭವದಿಂದಿದ್ದು ನಂತರ 'ವಿನಷ್ಟ ಗ್ರಾಮ'ಗಳಾದವು. ಗ್ರಾಮಗಳ ಕಲ್ಪನೆ ಇರದಿದ್ದ ಋಗ್ವೇದದ ದನಗಾಹಿಗಳಿಗೆ ಅವು ರುಚಿಸಿರಲಿಕ್ಕಿಲ್ಲ. ಆದ್ದರಿಂದ ಅವರ ಇಂದ್ರನಿಂದ ಅವನ್ನು ಪಾಳುಗೆಡವಿಸಿದರೋ ಏನೋ ! ಅಂತೂ ಇಂದ್ರನು 'ಪುರಂದರ'ನಾಗಿ ಪ್ರಖ್ಯಾತನಾದ. ಅಂತಹ ಇಂದ್ರನು ಅತಿ ಸೂಕ್ಷ್ಮರೂಪಿಯೂ ಆಗಬಲ್ಲ ಮತ್ತು ಸೋಮಪಾನ ಮಾಡಿ ನಿರರ್ಗಳವಾಗಿ ತನ್ನನ್ನು ತಾನು ಹೊಗಳಿಕೊಳ್ಳಬಲ್ಲ. ಒಂದು ಇಡೀ ಸೂಕ್ತವು (೧೦.೧೧೯) ಅಂತಹ ಪ್ರಲಾಪವನ್ನು ವಸ್ತುವನ್ನಾಗಿಸಿಕೊಂಡಿದೆ. "ನನ್ನ ಮನಸ್ಸು ಹಾಗೂ ಹೀಗೂ ಯೋಚಿಸುತ್ತಿದೆ, ನನ್ನ ಸ್ತೋತೃಗಳಿಗೆ ಗೋ ಮತ್ತು ಅಶ್ವ ಕೊಡಲೋ ಬೇಡವೋ ಎಂದು" (ಮಂತ್ರ ೧ : ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ). "ನಾನು ಕುಡಿದಿದ್ದೇನೆ, ಆದ್ದರಿಂದ ಗಾಳಿಯ ರಭಸದಿಂದಾಗಿ ವಾಲಾಡುವ ಗಿಡದಂತಾಗಿದ್ದೇನೆ" (೨ : ಪ್ರ ವಾತಾ ಇವ ದೋಧತ ಉನ್ಮಾ ಪೀತಾ ಅಯಂಸತ). ಕುಡಿದು ಅಡ್ಡಾದಿಡ್ಡಿಯಾಗಿ ನಡೆಯುವ ಇಂದ್ರನನ್ನು ಕಂಡರೆ 'ಪಂಚಜನಾಃ' ಎಂಬ ಬುಡಕಟ್ಟು ಜನಕ್ಕೆ ಅತೀವ ಭೀತಿ; ಆದ್ದರಿಂದ ಅವನ ಕಣ್ಣಿಗೆ ಬೀಳಲು ಅವರು ಇಷ್ಟಪಡುವುದಿಲ್ಲ (ಮಂತ್ರ ೬ : ನಹಿ ಮೇ ಅಕ್ಷಿಪತ್ ಚನ ಅಚ್ಛಾಂತ್ಸುಃ ಪಂಚ ಕೃಷ್ಟಯಃ). ಅವನ ತಲೆಯಲ್ಲಿ ಏನೇನೋ ವಿಭ್ರಮದ ಯೋಚನೆಗಳು : ಭೂಮಿಯನ್ನು ಇಲ್ಲಿಡಲೋ ಅಲ್ಲಿಡಲೋ ಎಂಬ ಯೋಚನೆಯೂ ಹಾದುಹೋಯಿತು (೯ : ಹಂತಾಹಂ ಪೃಥಿವೀಂ ಇಮಾಂ ನಿ ದಧಾನೀಹ ವೇಹ ವಾ). ಅಂತೆಯೇ, ಆದಿತ್ಯನನ್ನು ಅಂತರಿಕ್ಷದಲ್ಲಿಡಬೇಕೋ, ದ್ಯುಲೋಕದಲ್ಲಿಡಬೇಕೋ, ಎಂಬ ಭಾವನೆ ಸ್ಫುರಿಸಿತು (೧೦ : ಓಷಂ ಇತ್ ಪೃಥಿವೀಂ ಅಹಂ ಜಂಘನಾನೀಹ ವೇಹ ವಾ).

ಹೀಗೆ ತೊದಲುತ್ತಾ ನುಡಿಯುವ ಇಂದ್ರನು ನಿಜಕ್ಕೂ ಇದ್ದಾನೋ ಇಲ್ಲವೋ ಎಂಬ ಅನುಮಾನವು ಋಗ್ವೇದದ ಕವಿಯನ್ನು ಕಾಡುತ್ತದೆ : "ಈ ಶತ್ರುಗಳನ್ನು ಸದೆಬಡೆಯುವ ಇಂದ್ರನ ಬಗ್ಗೆ 'ಎಲ್ಲಿ ಅವನು' ಎಂದು ಕೇಳುತ್ತಾರೆ; ಕೇಳುವುದೇನು, ಅವನಿಲ್ಲವೇ ಇಲ್ಲವೆಂದು ಹೇಳುತ್ತಾರೆ. ಆದರೆ ಅವನಿರಲೇಬೇಕು, ಏಕೆಂದರೆ ಅವನು ಉದ್ವೇಗದಿಂದ ಶತ್ರುಗಳ ಸಂಪತ್ತನ್ನು ನಾಶಮಾಡುವುದಂತೂ ನಿಜ; ಆದ್ದರಿಂದ ಅವನಲ್ಲಿ ವಿಶ್ವಾಸವಿಡಿ." (೨.೧೨.೫ : ಯಂ ಸ್ಮಾ ಪೃಚ್ಛಂತಿ ಕುಹ ಸೇತಿ ಘೋರಂ ಉತೇಮಾಹುಃ ನೈಷೋ ಅಸ್ತೀತಿ ಏನಂ। ಸೋ ಅರ್ಯಃ ಪುಷ್ಟೀಃ ವಿಜ ಇವ ಆ ಮಿನಾತಿ ಶ್ರದಸ್ಮೈ ಧತ್ತ ಸ ಜನಾಸ ಇಂದ್ರಃ॥). ಭೂಮಿ, ಪರ್ವತ, ಅಂತರಿಕ್ಷ, ದ್ಯುಲೋಕ, ಎಲ್ಲವನ್ನೂ ಅವವುಗಳ ಸ್ಥಾನದಲ್ಲಿ ಇರಿಸುವವನು ಇಂದ್ರ (ಮಂತ್ರ ೨). ಹಾವೆಂಬ ಮೋಡವನ್ನು ಹನನ ಮಾಡಿ ನದಿಗಳನ್ನು ಹರಿಯಬಿಡುವವನು, ವಲನೆಂಬುವವನು ಗೋವುಗಳನ್ನು ಕೂಡಿಹಾಕಿದಾಗ ಅವನನ್ನು ಬಿಡಿಸುವವನು, ಮೋಡದಲ್ಲಿ ಬೆಂಕಿಯನ್ನು ಕಾಣಿಸುವವನು, ಎಲ್ಲವೂ ಇಂದ್ರನೇ (ಮಂತ್ರ ೩). ದಾಸ ವರ್ಣದವರನ್ನು ನಿಕೃಷ್ಟರನ್ನಾಗಿ ಇರಿಸುವವನೂ ಅವನೇ (೪ : ಯೋ ದಾಸಂ ವರ್ಣಮಧರಂ ಗುಹಾಕಃ). ಇವನೆಷ್ಟು ವ್ಯಾಪಕ ದೇವತೆಯೆಂದರೆ ಕುದುರೆ, ಗೋವು, ಗ್ರಾಮ, ಸೂರ್ಯ, ಉಷಸ್ಸು, ಎಲ್ಲವಕ್ಕೂ ಇವನೇ ಧಾರಕ (ಮಂತ್ರ ೭). ಅವನಿಲ್ಲದೆ ಜನಕ್ಕೆ ಜಯವಿಲ್ಲ, ಯಾವಾಗಲೂ ಅವನ ರಕ್ಷಣೆಯನ್ನು ಬೇಡಲಾಗುತ್ತದೆ; ಇಡೀ ವಿಶ್ವದ ಪ್ರತಿನಿಧಿ ಅವನು (ಮಂತ್ರ ೮). ದಸ್ಯುಗಳನ್ನು ನಿಗ್ರಹಿಸುವವನು ಅವನು (ಯೋ ದಸ್ಯೋರ್ಹಂತಾ – ಮಂತ್ರ ೧೦). ಅಂದರೆ, ದಸ್ಯುಗಳು ಪ್ರತಿರೋಧವನ್ನು ಒಡ್ಡದೆ ಶರಣಾಗಿರಲಿಲ್ಲವೆಂಬುದನ್ನು ಗಮನಿಸಬೇಕು. ಆರ್ಯರು ಮತ್ತು ದಸ್ಯುಗಳು, ಇಬ್ಬರೂ ಬೇರೆ ಬೇರೆ ವರ್ಣದವರು, ಅಂದರೆ ದೈಹಿಕವಾಗಿ ಅವರ ಬಣ್ಣಗಳಲ್ಲಿ ವ್ಯತ್ಯಾಸವಿತ್ತು. ಸಹಸ್ರಾರು ಕಪ್ಪುಬಣ್ಣದವರನ್ನು ಇಂದ್ರನು ಕೊಂದುಹಾಕಿದ (೪.೧೬.೧೩ : ಪಂಚಾಶತ್ ಕೃಷ್ಣಾ ನಿ ವಪಃ ಸಹಸ್ರಾ), ಕೊಂದು ಭೂಮಿಯ ಮೇಲೆ ಕೆಡವಿಹಾಕಿದ (೧.೧೦೪.೭ : ಕ್ಷಾಂ ದಾಸಾಯ ಉಪ ಬರ್ಹಣೀಂ ಕಃ). ಅದನ್ನವನು ಮಾಡುತ್ತಲೇ ಇರುತ್ತಾನೆ (೧.೫೧.೬ : ಸನಾದೇವ ದಸ್ಯುಹತ್ಯಾಯ ಜಜ್ಞಿಷೇ). ಕವಿಯು ಇಂದ್ರನಲ್ಲಿ ಕೇಳಿಕೊಳ್ಳುತ್ತಾನೆ : "ಆರ್ಯರು ಮತ್ತು ದಸ್ಯುಗಳು ಭಿನ್ನರು, ಅವರ ಆಚರಣೆಗಳೂ ಭಿನ್ನ. ಆರ್ಯರು ಯಜ್ಞ ಮಾಡುತ್ತಾರೆ, ದಸ್ಯುಗಳು ಮಾಡುವುದಿಲ್ಲ. ಅವರು 'ವ್ರತವಿಲ್ಲದವರು.' ಆದ್ದರಿಂದ ಇಂದ್ರನು ಅವರನ್ನು ನಿಗ್ರಹಿಸಬೇಕು" (೧.೫೧.೮ : ವಿ ಜಾನೀಹಿ ಆರ್ಯಾನ್ ಯೇ ಚ ದಸ್ಯವೋ ಬರ್ಹಿಷ್ಮತೇ ರಂಧಯಾ ಶಾಸದವ್ರತಾನ್। ಶಾಕೀ ಭವ ಯಜಮಾನಸ್ಯ ಚೋದಿತಾ ವಿಶ್ವೇತ್ತಾ ತೇ ಸಧಮಾದೇಷು ಚಾಕನ).

ನಾವೀಗಾಗಲೆ ನೋಡಿರುವಂತೆ ಋಗ್ವೇದದ ಕವಿಗಳು ಅಗತ್ಯಕ್ಕೆ ಅನುಗುಣವಾಗಿ ಆಯಾದೇವತೆಗಳನ್ನು ಹೇರಳವಾಗಿ ಸ್ತುತಿಸುತ್ತಾರೆ, ಆಯಾದೇವತೆಯು ಅಗ್ರಗಣ್ಯನೆಂಬಂತೆ ಶ್ಲಾಘಿಸುತ್ತಾರೆ. ಇಂದ್ರನ ಬಗ್ಗೆ ಹೇಳುವಾಗ ಅವನೇ ಪರದೇವತೆ, ವರುಣನ ಬಗ್ಗೆ ಹೇಳುವಾಗ ಅವನೂ ಪರದೇವತೆಯೇ. ಹೀಗಿರುವಾಗ ದೇವತೆಗಳ ನಡುವೆ ಪೈಪೋಟಿಯೇನಾದರೂ ಶಕ್ಯವೆ? ಇಂದ್ರ ಮತ್ತು ವರುಣರ ನಡುವೆ ಅಂತಹ ಸ್ಪರ್ಧೆ ಇದ್ದಿತೆಂದೂ, ಕಡೆಗೆ ಇಂದ್ರನೇ ವಿಜಯಿಯಾದನೆಂದೂ ಕೆಲವು ವಿದ್ವಾಂಸರು ವಾದಿಸಿದ್ದಾರೆ. ಖ್ಯಾತ ವಿದ್ವಾಂಸ ಆರ್. ಎನ್. ದಾಂಡೇಕರ್ ಸಹ ಅಂತಹ ತೀರ್ಮಾನಕ್ಕೆ ಬಂದಿದ್ದಾರೆ. ಅವರು, ರಾತ್, ಮುಂತಾದ ವಿದ್ವಾಂಸರು ನೀಡುವ ಒಂದು ಪುರಾವೆ ಸ್ವಾರಸ್ಯವಾಗಿದೆ: ಹತ್ತನೆಯ ಮಂಡಲವು ಋಗ್ವೇದದ ರಚನೆಯ ಕಡೆಯ ಹಂತಕ್ಕೆ ಸೇರಿದ್ದು. ಅದರಲ್ಲಿ ೧೯೧ ಸೂಕ್ತಗಳಿವೆ; ಆ ಪೈಕಿ ಒಂದಾದರೂ ವರುಣನನ್ನು ಕುರಿತಾದದ್ದಲ್ಲ, ಆದರೆ ಇಂದ್ರನನ್ನು ಕುರಿತಾದವು ಹಲವಾರಿವೆ. ಅಂದರೆ, ವರುಣ ಕ್ಷೀಣಿಸಿದ, ಇಂದ್ರ ಮೇಲೇರಿದ, ಎಂದರ್ಥ. ಅದಕ್ಕೆ ದಾಂಡೇಕರ್ ಚಾರಿತ್ರಿಕ ಸಂಗತಿಯೊಂದನ್ನು ಪೋಣಿಸಿದ್ದಾರೆ: ಆರ್ಯರು ಮತ್ತು ಅಸ್ಸೀರಿಯಾದ ಜನರ ನಡುವೆ ಪರಸ್ಪರ ಈರ್ಷ್ಯೆ ಇದ್ದಿತು; ಅದು 'ಅಸುರ' (ಅಂದರೆ, ವರುಣ) ಮತ್ತು ಅಸ್ಸೀರಿಯಾ ನಡುವಣ ಪೈಪೋಟಿಯೆಂದು ಬಿಂಬಿಸಲ್ಪಟ್ಟಿದೆ! ಅಂದರೆ, ಇಂದ್ರನು 'ಅಸ್ಸೀರಿಯಾ'ದ ಪ್ರತಿನಿಧಿ! ಋಗ್ವೇದದಲ್ಲಿ ಎಲ್ಲೂ ಅಸ್ಸೀರಿಯಾದ ಹೆಸರಾಗಲಿ, ಇಂದ್ರನು ಅದರ ಪ್ರತಿನಿಧಿಯೆಂದಾಗಲಿ, ಹೇಳಿಲ್ಲವೆಂಬುದು ಅವರ ಗಮನಕ್ಕೆ ಬಂದಂತೆ ತೋರುವುದಿಲ್ಲ. ಪೆರಿ ಎಂಬ ವಿದ್ವಾಂಸನು ಋಗ್ವೇದದ ಒಂದು ಸೂಕ್ತವನ್ನು (೪.೪೨) ಹೆಸರಿಸಿ ಅದರಲ್ಲಿ ವರುಣನನ್ನು ಕೆಳಗಿಳಿಸಿ ಇಂದ್ರನನ್ನು ಅಗ್ರಪಟ್ಟಕ್ಕೆ ಏರಿಸಲಾದ್ದನ್ನು ದಾಖಲಿಸಲಾಗಿದೆ ಎಂದು ಭಾವಿಸಿಬಿಟ್ಟಿದ್ದಾನೆ. ಅದರ ಹಿಂದಿನ ಸೂಕ್ತವು (೪.೪೧) ಜಂಟಿಯಾಗಿ ಇಂದ್ರಾ-ವರುಣರನ್ನು ಸ್ತುತಿಸುತ್ತದೆ. "ನಮ್ಮ ಮಕ್ಕಳು-ಮೊಮ್ಮಕ್ಕಳು ಚಿರಕಾಲ ಬಾಳಲು ಮತ್ತು ನನ್ನ ಪುಂಸತ್ವವು ಸಮರ್ಥವಾಗಿ ಪ್ರವೃತ್ತವಾಗಿರಲು ನೀವು ರಕ್ಷಣೆ ನೀಡಿ" ಎಂದು ಅದರಲ್ಲಿ ಬೇಡಲಾಗಿದೆ (೪.೪೧.೬: ತೋಕೇ ಹಿತೇ ತನಯ ಉರ್ವರಾಸು ಸೂರೋ ದೃಶೀಕೇ ವೃಷಣಶ್ಚ ಪೌಂಸ್ಯೇ। ಇಂದ್ರಾ ನೋ ಅತ್ರ ವರುಣಾ ಸ್ಯಾತಾಂ ಅವೋಭಿರ್ದಸ್ಮಾ ಪರಿತಕ್ಮ್ಯಾಯಾಂ॥). ಮುಂದಿನದು (೪.೪೨) ಪುರುಕುತ್ಸನ ಮಗ ತ್ರಸದಸ್ಯು ಎಂಬುವನ ರಚನೆಯೆಂದು ಹೇಳಲಾಗಿದೆ. ತನ್ನ ಆಧಿಪತ್ಯದ ವೃದ್ಧಿಯು ಅತಿಶಯವಾಗಿರಲೆಂದು ವರುಣನನ್ನು ಕೇಳಿಕೊಳ್ಳುವ ಭಾವವು ಇಲ್ಲಿ ಪ್ರಕಟವಾಗಿದೆ (೧: ಕ್ರತುಂ ಸಚಂತೇ ವರುಣಸ್ಯ ದೇವಾ ರಾಜಾಮಿ ಕೃಷ್ಟೇರುಪಮಸ್ಯ ವವ್ರೇಃ). ಮುಂದೆ "ನಾನು ವರುಣ, ನನಗಾಗಿ ದೇವತೆಗಳೆಲ್ಲಾ ಬಲವನ್ನು ನೀಡಿದ್ದಾರೆ" ಎನ್ನುತ್ತಾನೆ (೨: ಅಹಂ ರಾಜಾ ವರುಣೋ ಮಹ್ಯಂ ತಾನಿ ಅಸುರ್ಯಾಣಿ ಪ್ರಥಮಾ ಧಾರಯಂತ). ನಂತರ, "ನಾನು ಇಂದ್ರ, ನಾನು ವರುಣ; ಅವರಿಂದಾಗಿ ನಾನು ಅಧಿಪತಿಯಾಗಿದ್ದೇನೆ" ಎನ್ನುತ್ತಾನೆ (೩: ಅಹಮಿಂದ್ರೋ ವರುಣಃ ತೇ ಮಹಿತ್ವಾ ಉರ್ವೀ... ...ರೋದಸೀ ಧಾರಯಂ ಚ). ಐದನೆಯ ಮಂತ್ರ ಹೀಗಿದೆ: "ಕುದುರೆಗಳು, ಸೈನಿಕರು, ನನ್ನನ್ನು ಅನುಸರಿಸುತ್ತಾರೆ; ಸಂಗ್ರಾಮದಲ್ಲಿ ನನಗೆ ಅಗ್ರೇಸರನ ಸ್ಥಾನ ನೀಡುತ್ತಾರೆ. ನಾನು ಇಂದ್ರನಾಗಿ ಶತ್ರುಗಳನ್ನು ಜಯಿಸುತ್ತೇನೆ, ಇತರರನ್ನು ಪರಾಧೀನಗೊಳಿಸುತ್ತೇನೆ" (೫: ಮಾಂ ನರಃ ಸು ಅಶ್ವಾಃ ವಾಜಯಂತಃ ಮಾಂ ವೃತಾಃ ಸಮರಣೇ ಹವಂತೇ। ಕೃಣೋಮಿ ಆಜಿಂ ಮಘವಾ ಅಹಮಿಂದ್ರಃ ಇಯರ್ಮಿ ರೇಣುಂ ಅಭಿಭೂತ್ಯೋಜಾಃ॥).

ಇಂದ್ರನು ವರುಣನನ್ನು ಹಿಂದಿಕ್ಕಿ ತಾನು ಮೇಲೇರಿದನೆಂಬ ಭಾವವನ್ನು ಇಲ್ಲಿ ಕಾಣಬಹುದೆ? ಆದಿಕಾಲದ ಬುಡಕಟ್ಟು ರಚನೆಯ ಸ್ಥಾನದಲ್ಲಿ 'ನಾಗರಿಕ' ಸಮಾಜವೊಂದು ವ್ಯವಸ್ಥೆಗೊಳ್ಳಲಾಗಿದೆ, ಅದಕ್ಕೊಬ್ಬ ಅಧಿಪತಿ ಇದ್ದಾನೆ. "ಆ ಅಧಿಪತಿಯೇ ನಾನು" ಎಂದು ತ್ರಸದಸ್ಯು ಹೇಳುತ್ತಿದ್ದಾನೆ, ಅಷ್ಟೆ. ಹಾಗೆ ಅಧಿಪತಿಯಾಗಿರಲು ಅವನಿಗೆ ಇಂದ್ರ-ವರುಣಾದಿಗಳ ಬೆಂಬಲವಿದೆ; ಅವರಿಬ್ಬರ ವಿಶೇಷ ಗುಣಗಳನ್ನು ಸ್ಮರಿಸುವುದಾಗಿ ಕವಿಯು (ತ್ರಸದಸ್ಯು) ಹೇಳಿಕೊಂಡಿದ್ದಾನೆ (೭: ವಿದುಷ್ಟೇ ವಿಶ್ವಾ ಭುವನಾನಿ ತಸ್ಯ ತಾ ಪ್ರ ಬ್ರವೀಷಿ ವರುಣಾಯ ವೇಧಃ। ತ್ವಂ ವೃತ್ರಾಣಿ ಶೃಣ್ವಿಷೇ ಜಘನ್ವಾನ್ ತ್ವಂ ವೃತಾನ್ ಅರಿಣಾ ಇಂದ್ರ ಸಿಂಧೂನ್॥). 'ವೃತ್ರ' ಎಂಬ ಹೆಸರನ್ನು ಬಹುವಚನದಲ್ಲಿ ಪ್ರಯೋಗಿಸಲಾಗಿರುವುದು ಇಲ್ಲಿಯ ಒಂದು ವಿಶೇಷ. ಇಂದ್ರನು ಒಬ್ಬ ವೃತ್ರನನ್ನು ಸಂಹರಿಸುವುದಿಲ್ಲ; ಅವನು ಅನೇಕ ವೃತ್ರರನ್ನು ಸಂಹರಿಸಿ ನದಿಗಳನ್ನು ಹರಿಬಿಡುತ್ತಾನೆ. ಒಟ್ಟಿನಲ್ಲಿ ಹೇಳುವುದಾದರೆ, ಈ ಸೂಕ್ತದಲ್ಲಿ (೪.೪೨) ಬುಡಕಟ್ಟಿನ ವಿಕಾಸದ ಪ್ರಸ್ತಾಪವಿದೆಯೇ ವಿನಾ, ಇಂದ್ರ ಮತ್ತು ವರುಣರ ಪರಸ್ಪರ ಪೈಪೋಟಿಯೇನೂ ಇಲ್ಲ. ಇಬ್ಬರನ್ನೂ ಸೇರಿಸಿ ಕವಿಯು "ತಂದೆಯರು" ಎಂದಿದ್ದಾನೆ. "ನಮ್ಮೆಲ್ಲರ ಪಾಲಕರು ನೀವು. ಪುರುಕುತ್ಸ-ತ್ರಸದಸ್ಯುಗಳಾದ ನಾವು ನಿಮಗೆ ಋಣಿಗಳು. ಇಂದ್ರನಂತಹ ಪುತ್ರನನ್ನು ನೀವು ಕರುಣಿಸಿದ್ದೀರಿ" ಎಂದು ಮುಂದಿನ ಮಂತ್ರದಲ್ಲಿದೆ (೮: ಅಸ್ಮಾಕಮತ್ರ ಪಿತರಃ ತೇ ಆಸನ್...).

ಋಗ್ವೇದದ ಎರಡು ಮಂತ್ರಗಳನ್ನು ಪರಿಶೀಲಿಸಿ ಪ್ರಸ್ತುತ ಚರ್ಚೆಯನ್ನು ಮುಕ್ತಾಯಗೊಳಿಸೋಣ. ಅವುಗಳಲ್ಲಿ ಒಂದನ್ನು (೭.೮೩.೯) ದೃಷ್ಟಿಯಲ್ಲಿರಿಸಿ ಕೊಂಡು ಮಹೋಪಾಧ್ಯಾಯ ಎಂ. ಹಿರಿಯಣ್ಣನವರು ವರುಣ ಮತ್ತು ಇಂದ್ರರ ನಡುವಣ ವ್ಯತ್ಯಾಸವನ್ನು, ಅವರವರ ಪರಿಧಿಯನ್ನು, ಗುರುತಿಸಿ ಸ್ಪಷ್ಟನೆ ನೀಡಿದ್ದಾರೆ: "ಉದಾತ್ತ ನಿಯಮಗಳನ್ನು ಎತ್ತಿಹಿಡಿಯುವುದು ಮತ್ತು ಅವಕ್ಕೆ ಬದ್ಧತೆಯನ್ನು ಪ್ರಕಟಿಸುವುದು ಒಬ್ಬನ (ಅಂದರೆ, ವರುಣನ) ಕ್ಷೇತ್ರ; ಶತ್ರುಗಳನ್ನು ಜಯಿಸಿ ತನ್ನ ಸ್ತೋತೃಗಳಿಗೆ ರಕ್ಷಣೆ ನೀಡುವುದು ಇನ್ನೊಬ್ಬನ (ಅಂದರೆ, ಇಂದ್ರನ) ಕ್ಷೇತ್ರ" (ವೃತ್ರಾಣಿ ಅನ್ಯಃ ಸಮಿಥೇಷು ಜಿಘ್ನತೇ ವ್ರತಾನಿ ಅನ್ಯೋ ಅಭಿರಕ್ಷತೇ ಸದಾ). ಇಲ್ಲಿ ಆಯ್ಕೆಯ ಪ್ರಶ್ನೆ ಇಲ್ಲ, ಎರಡನ್ನೂ ಏಕಪ್ರಕಾರವಾಗಿ ಅಂಗೀಕರಿಸಿ ಅನುಷ್ಠಾನಕ್ಕೆ ತರುವುದು ಋಗ್ವೇದದ ಆಶಯ. ಅಂಥದೇ ಭಾವನೆಯು ಇನ್ನೊಂದು ಮಂತ್ರದಲ್ಲಿಯೂ ವ್ಯಕ್ತವಾಗಿದೆ: "ವಿವಿಧ ಪಂಗಡಗಳ ಜನರನ್ನು ವರುಣನು ಒಂದು ನೆಲೆಯಲ್ಲಿ ನಿಲ್ಲಿಸುತ್ತಾನೆ ಮತ್ತು ಇಂದ್ರನು ವಿರೋಧಿಗಳ ತಂಡಗಳನ್ನು ನಾಶಮಾಡುತ್ತಾನೆ (೭.೮೫.೩: ಕೃಷ್ಟೀರನ್ಯೋ ಧಾರಯತಿ ಪ್ರವಿಕ್ತಾ ವೃತ್ರಾಣ್ಯನ್ಯೋ ಅಪ್ರತೀನಿ ಹಂತಿ). ಈ ಮಂತ್ರವನ್ನು ವ್ಯಾಖ್ಯಾನಿಸುತ್ತಾ ವಿ. ಎ. ಗಾಡ್ಗೀಳ್ ಒಂದೆಡೆ ಹೇಳಿದ್ದುದು ಇದು: "ವಿಶ್ವದ ಸೃಷ್ಟಿಕರ್ತನಾಗಿ ವರುಣನು ಶಾಂತಿಸಾಧಕ, ಆದರೆ ಇಂದ್ರನ ಪಾತ್ರವು ರಣಾಂಗಣದಲ್ಲಿ ಸೆಣಸುವುದಾಗಿದೆ. ದೇಶದ ಪೂರ್ವ ಭಾಗಕ್ಕೆ ವಿಸ್ತರಿಸಿಕೊಳ್ಳಲು ಹೊರಟಾಗ ಆರ್ಯರು ಸಾಕಷ್ಟು ಮುಗ್ಗಟ್ಟುಗಳನ್ನೆದುರಿಸ ಬೇಕಾಗಿದ್ದಿರಬಹುದು, ಆಗ ಅವರಿಗೆ ಇಂದ್ರ ಬೇಕಾದ."

ಇಂದ್ರ ಮತ್ತು ವರುಣ ಬೇರೆ ಬೇರೆ ಹೌದು, ಅವರ ಕಾರ್ಯಕ್ಷೇತ್ರದ ಪರಿಧಿಯಲ್ಲಿ ಬರುವ ಅಂಶಗಳು ಭಿನ್ನವಾದವು. ಆದರೆ ಆ ಆಶಯಗಳೂ ವಿರೋಧದಿಂದ ಕೂಡಿಲ್ಲ. ಎರಡೂ ಏಕಕಾಲಕ್ಕೆ ಅವಶ್ಯಕವಾದಂಥವು, ಎರಡನ್ನೂ ಋಗ್ವೇದದ ಕವಿಗಳು ಒಂದೇ ದೃಷ್ಟಿಯಿಂದ ಕಾಣುತ್ತಾರೆ. ತೋಳ್ಬಲ ಮತ್ತು ನೈತಿಕ ಬಲ ಬೇರೆ ಬೇರೆ, ಆದರೆ ಎರಡೂ ಏಕಕಾಲಕ್ಕೆ ಅಗತ್ಯವಾದಂಥವು. ಆದ್ದರಿಂದ ಇಂದ್ರ ಮತ್ತು ವರುಣ ಪೈಪೋಟಿಯಲ್ಲಿ ನಿರತರಾದ ಸ್ಪರ್ಧಿಗಳಲ್ಲ, ಅವರಿಬ್ಬರೂ ಪರಸ್ಪರ ಪೂರಕ ಸ್ಥಾನಗಳಲ್ಲಿರುವವರು. ನಮ್ಮ ದೇಶದ ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ತೋಳ್ಬಲಕ್ಕೆ ಆದ್ಯತೆ ದೊರೆತು ನೈತಿಕ ಬಲವು ಹಿಂದಕ್ಕೆ ಸರಿಸಲ್ಪಟ್ಟಿದೆ. ಋಗ್ವೇದದ ಮಾರ್ಗದರ್ಶನ ಪಡೆಯುವುದೆಂದರೆ ಎರಡನ್ನೂ ಸಮಪ್ರಮಾಣದಲ್ಲಿ ಸ್ವೀಕರಿಸಿ ಮುನ್ನಡೆಯುವುದೇ ಆಗಿದೆ. ಇಂದ್ರನ ಶೌರ್ಯವೆಂದರೆ ಕೇವಲ ಸೋಮರಸ ಪಾನ ಮಾಡಿ ಸ್ವೇಚ್ಛಾಚಾರಿಯಂತೆ ಅಪಲಾಪದಲ್ಲಿ ಮೈಮರೆಯುವುದಲ್ಲ, ತನ್ನ ಲೈಂಗಿಕ ಸಾಮರ್ಥ್ಯದ ಬಗ್ಗೆ ಹೆಮ್ಮೆಯಿಂದ ಆತ್ಮಶ್ಲಾಘನೆ ಮಾಡಿಕೊಳ್ಳುವುದಲ್ಲ. ಸೆಣಸುವುದು ಮತ್ತು ಸ್ವಯಂ ನಿಯಂತ್ರಿಸಿಕೊಳ್ಳುವುದು ವಿರೋಧಿ ಧ್ರುವಗಳಲ್ಲವೆಂಬುದು ಋಗ್ವೇದದ ಕಾಣ್ಕೆ.




**ಜಿ. ರಾಮಕೃಷ್ಣ**
೨-ಎಫ್,
ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್
ಕಾವೇರಿನಗರ, ಬನಶಂಕರಿ ೩ನೇ ಹಂತ,
ಬೆಂಗಳೂರು - ೫೬೦ ೦೮೫



# ಹೊಸ ಉಲ್ಕಾವೃಷ್ಟಿ

**ಈ** ತಿಂಗಳಲ್ಲಿ ಸಂಜೆಯ ಆಕಾಶಕ್ಕೆ ಗುರುಗ್ರಹದ ಜೊತೆಗೆ ಇನ್ನೆರಡು ಸೇರ್ಪಡೆಯಾಗಲಿವೆ. ಗುರುಗ್ರಹ ಪಶ್ಚಿಮಕ್ಕೆ ಸರಿದಿದೆ. ಪೂರ್ವದಲ್ಲಿ ಮಂಗಳ ಮತ್ತು ಶನಿ ಕಾಣಲಿವೆ. ಸಾಕಷ್ಟು ಪ್ರಕಾಶಮಾನವಾಗಿರುವ ಮಂಗಳ ಕಿತ್ತಲೆಯ ಬಣ್ಣದಿಂದ ಕಂಗೊಳಿಸುವುದು. ಸೂರ್ಯಾಸ್ತವಾಗುತ್ತಿದ್ದಂತೆ ಪೂರ್ವದ ಅಂಚಿನಲ್ಲಿ ಕಾಣುವುದು. ರಾತ್ರಿ ಇಡೀ ನೋಡಲು ಸಿಗುವುದು. ವಿಯುತಿಯ ಕಾರಣ ಪ್ರಕಾಶ ಗರಿಷ್ಠ. ಸ್ವಲ್ಪ ಹೊತ್ತಿನಲ್ಲಿಯೇ ಶನಿಗ್ರಹವೂ ಉದಯಿಸುವುದು. ಶನಿಗ್ರಹದ ವಿಯುತಿ ೧೦ರಂದು. ಆದ್ದರಿಂದ ಅದೂ ರಾತ್ರಿಇಡೀ ನೋಡಲು ಸಿಗುವುದು.

ಹುಣ್ಣಿಮೆಯ ಚಂದ್ರ ೧೪ರಂದು ಶನಿಗ್ರಹವನ್ನು ಮರೆಮಾಡುವ ಆಚ್ಛಾದನೆ ನಡೆಯಲಿದೆ. ಆದರೆ ಸಂಜೆ ನಾವು ನೋಡುವಾಗ ಆಚ್ಛಾದನೆ ಮುಗಿದು ಹೋಗಿ ಚಂದ್ರನ ಮೇಲೆ ಶನಿ ಎಂಬ ಚುಕ್ಕೆ ಕಾಣುತ್ತದೆ. ಇದು ಛಾಯಾಗ್ರಹಣಕ್ಕೆ ಅತಿ ಸೂಕ್ತವಾದ ಅವಕಾಶ. ವಿಯುತಿ ಎಂದರೆ ಗ್ರಹ ಹಿನ್ನಡೆಯುತ್ತಿದೆ ಎಂದರ್ಥ. ೨೧ರಂದು ಮಂಗಳದ ಹಿನ್ನಡೆ ಮುಕ್ತಾಯವಾಗುತ್ತದೆ. ಅಂದರೆ ಚಿತ್ರಾ ನಕ್ಷತ್ರದಿಂದ ದೂರ ಸರಿದಿದ್ದ ಅದು ಈಗ ಪುನಃ ಅದೇ ನಕ್ಷತ್ರದ ದಿಕ್ಕಿಗೆ ಸರಿಯತೊಡಗುತ್ತದೆ.




ಸಂಜೆಯ ಆಕಾಶದಲ್ಲಿ ಬುಧ ಗ್ರಹವನ್ನು ನೋಡುವ ಅವಕಾಶವೂ ಈ ತಿಂಗಳಲ್ಲಿಯೇ ಇದೆ. ಸಂಜೆ ಗುರುಗ್ರಹವನ್ನು ಗುರುತಿಸುವುದು ಸುಲಭ; ಗುರುಗ್ರಹ ಮತ್ತು ದಿಗಂತದಂಚಿನ ನಡುವೆ ಬುಧಗ್ರಹ ನೋಡಸಿಗುವುದು ತಿಂಗಳ ಕೊನೆಯ ವಾರದಲ್ಲಿ. ಮಿನುಗದ ಕ್ಷೀಣ ಚುಕ್ಕೆ ಬುಧ. ನೀವು ಗುರುತಿಸಿದ್ದ ಈ ಚುಕ್ಕೆಯೇ ಬುಧ ಹೌದೇ ಅಲ್ಲವೇ ಎಂದು ತಿಳಿಯಲು ನೀವು ೩೦ರವರೆಗೂ ಕಾಯಬೇಕು. ಆ ದಿನ ರೇಖಾಚಂದ್ರ ಬುಧ ಗ್ರಹದಿಂದ ೪ ಡಿಗ್ರಿ ಅಂತರದಲ್ಲಿರುತ್ತದೆ.

ಹೀಗೆ ಸಂಜೆಯೇ ನಾಲ್ಕೂ ಗ್ರಹಗಳನ್ನು ನೋಡುವ ಅವಕಾಶ ಇದೆ; ಉಳಿದ ಇನ್ನೊಂದು ಗ್ರಹ ಶುಕ್ರ ಮುಂಜಾವಿನಲ್ಲಿ ಕಾಣುತ್ತದೆ.

ನಕ್ಷೆ ಸಂಜೆ ೭ ಗಂಟೆಗೆ ಅನ್ವಯವಾಗುತ್ತದೆ. ನೆತ್ತಿಯ ಮೇಲೆ ಸಿಂಹ ರಾಶಿ; ಅದರ ಪಶ್ಚಿಮಕ್ಕೆ ಕ್ರಮವಾಗಿ ಕಟಕ, ಮಿಥುನ, ವೃಷಭಗಳು ಕಾಣುತ್ತವೆ. ಮಿಥುನದಲ್ಲಿಯೇ ಗುರುಗ್ರಹ ಕಾಣುವುದು. ರೋಹಿಣಿ ತಿಂಗಳ ಕೊನೆಗೆ ಕಾಣುವುದಿಲ್ಲ. ಸಿಂಹದಿಂದ ಪೂರ್ವಕ್ಕೆ ಕನ್ಯಾ (ಇದರಲ್ಲಿ ಮಂಗಳವಿದೆ) ಮತ್ತು ದಿಗಂತದ ಅಂಚಿನಲ್ಲಿ ತುಲಾ (ಇದರಲ್ಲಿ ಶನಿಗ್ರಹವಿದೆ) ಕಾಣುತ್ತವೆ. ಈಶಾನ್ಯದಲ್ಲಿ ಸಹದೇವ (ಬೂಟೆಸ್) ಪುಂಜದಲ್ಲಿ ಕೆಂಪು ನಕ್ಷತ್ರ ಸ್ವಾತಿ ಕಾಣುವುದು. ಸಿಂಹದ ಉತ್ತರಕ್ಕೆ ಸಪ್ತರ್ಷಿ ಮಂಡಲ. ದಕ್ಷಿಣದ ಅಂಚಿನಲ್ಲಿ ತ್ರಿಶಂಕು, (ಸದರ್ನ್ ಕ್ರಾಸ್) ಮತ್ತು ಕಿನ್ನರದ (ಸೆಂಟಾರಸ್) ಎರಡು ಪ್ರಕಾಶಮಾನ ನಕ್ಷತ್ರಗಳು ಕಾಣುತ್ತವೆ. ನೈರುತ್ಯದಲ್ಲಿ ಲುಬ್ಧಕ (ಸಿರಿಯಸ್), ದಿಗಂತದ ಅಂಚಿನಲ್ಲಿ ಅಗಸ್ತ್ಯ (ಕೆನೋಪಸ್) ಕಾಣುವುವು.

ಈ ತಿಂಗಳ ೫ರಂದು ಉಲ್ಕಾವೃಷ್ಟಿ ಇದೆ. ಹ್ಯಾಲೀ ಧೂಮಕೇತುವಿನ ತುಣುಕುಗಳು ಉಲ್ಕೆಗಳಾಗಿ ಬೀಳುವುದು ಸಾಮಾನ್ಯ. ಆದರೆ ಮೇ ೨೪ರಂದು ವಿಶೇಷವೊಂದು ಘಟಿಸಲಿದೆ. ಲೀನಿಯರ್ (೨೦೯ ಪಿ) ಎಂಬ ಧೂಮಕೇತುವೊಂದನ್ನು ೨೦೦೪ರಲ್ಲಿ ಲಿಂಕನ್ ನಿಯರ್ ಅರ್ತ್ ಆಸ್ಟೆರಾಯ್ಡ್ ಎಂಬ ಯೋಜನೆಯ ದೂರದರ್ಶಕಗಳು ಪತ್ತೆ ಮಾಡಿದವು. ೫ ವರ್ಷಗಳಿಗೊಮ್ಮೆ ನಿಯತಕಾಲಿಕವಾಗಿ ಬಂದು ಹೋಗುವ ಈ ಧೂಮಕೇತು ಮೇ ೬ರಂದು ಸೂರ್ಯನನ್ನು ಸಮೀಪಿಸಿ ಹಿಂದಿರುಗಲಿದೆ. ಲೆಕ್ಕಾಚಾರದ ಪ್ರಕಾರ ಭೂಮಿ ಇದರ ಬಾಲದ ಧೂಳಿಗೆ ಸಮೀಪವಾಗಿ ೨೪ರಂದು ಹಾದು ಹೋಗಲಿದೆ. ಧೂಮಕೇತು ಅಷ್ಟೇನೂ ಪ್ರಕಾಶ ಪಡೆಯುವುದಿಲ್ಲ; ಸುದ್ದಿಯನ್ನೂ ಮಾಡುವುದಿಲ್ಲ. ಆದರೆ ಅದರ ಧೂಳು ಹೀಗೆ ಒಟ್ಟಾಗಿ ಭೂಮಿಯ ಮೇಲೆ ಅಪ್ಪಳಿಸಿ ಉರಿದು ಹೋಗುವಾಗ ಉಲ್ಕಾವೃಷ್ಟಿ ಸುದ್ದಿ ಮಾಡುವುದು.

ಮೋಡಗಳು ಅಡಚಣೆ ಉಂಟುಮಾಡಬಹುದಾದರೂ ಕೆಲವು ಪ್ರಕಾಶಮಾನವಾದ ಉಲ್ಕೆಗಳಂತೂ ಕಾಣುತ್ತವೆ. ಇವೆಲ್ಲವೂ ಉತ್ತರ ದಿಕ್ಕಿನಿಂದ (ಕೆಮೆಲೋಪರ್ಡಲಿಸ್ – ಅಂದರೆ ದೀರ್ಘಕಂಠ, ಜಿರಾಫ್ – ಎಂಬ ನಕ್ಷತ್ರಪುಂಜದಿಂದ) ಹೊರಟಂತೆ ಕಾಣುತ್ತವೆ. ಕೆಲವು ಲೆಕ್ಕಗಳಂತೂ ಗಂಟೆಗೆ ೧೦೦೦ಕ್ಕಿಂತ ಹೆಚ್ಚು ಉಲ್ಕೆಗಳು ಕಾಣಬಹುದೆಂದು ಹೇಳುತ್ತವೆ. ೧೮೦೩ರಿಂದ ೧೯೨೪ರವರೆಗೆ ಈ ಧೂಮಕೇತು ಉಳಿಸಿಹೋದ ಧೂಳಿನ ತುಣುಕುಗಳೆಲ್ಲಾ ಒತ್ತಟ್ಟಿಗೆ ಸೇರಿವೆ. ಭೂಮಿ ಅದನ್ನು ಸಮೀಪಿಸುತ್ತಿರುವುದರಿಂದ ಗಂಟೆಗೆ ೨೦೦ ಉಲ್ಕೆಗಳಾದರೂ ಕಾಣುತ್ತವೆ ಎಂಬ ನಿರೀಕ್ಷೆ ಇದೆ. ಇದು ಒಂದೇ ರಾತ್ರಿಗೆ ಖಾಲಿಯಾಗುವ ಸರಕಲ್ಲ. ಆದ್ದರಿಂದ ೨೩, ೨೪, ೨೫ – ಈ ಎಲ್ಲ ತಾರೀಖುಗಳಲ್ಲೂ ಮಧ್ಯರಾತ್ರಿ ಎದ್ದು ಆಕಾಶ ನೋಡಿದರೆ ಉಲ್ಕೆಗಳು ಕಾಣುವ ಸಂಭವ ಇದೆ.

**ಖಗೋಳ ದಿನಚರಿ**

ಮೇ ೧ ಸಂಜೆ ರೋಹಿಣಿ – ಚಂದ್ರ ನಡುವೆ ೨ ಡಿಗ್ರಿ ಅಂತರ

೪ ಸಂಜೆ ಗುರು– ಚಂದ್ರ ನಡುವೆ ೪ ಡಿಗ್ರಿ ಅಂತರ

| | |
|---|---|
| ೫ | ಮುಂಜಾವು ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿ |
| ೬ | ಭೂಮಿ– ಚಂದ್ರ ನಡುವೆ ಗರಿಷ್ಠ ದೂರ |
| ೭ | ಚಾಂದ್ರಮಾಸದ ಮೊದಲ ಪಾದ |
| ೮ | ಸಂಜೆ ಮಘ – ಚಂದ್ರ ನಡುವೆ ೪ ಡಿಗ್ರಿ ಅಂತರ |
| ೧೦ | ಶನಿಗ್ರಹದ ವಿಯುತಿ |
| ೧೧ | ಸಂಜೆ ಮಂಗಳ – ಚಂದ್ರ ನಡುವೆ ೨ ಡಿಗ್ರಿ ಅಂತರ |
| ೧೨ | ಸಂಜೆ ಚಂದ್ರನಿಂದ ಅರ್ಧ ಡಿಗ್ರಿ ಅಂತರದಲ್ಲಿ ಚಿತ್ರಾ |
| ೧೪ | ಸಂಜೆ ಚಂದ್ರನಿಂದ ಅರ್ಧ ಡಿಗ್ರಿ ಅಂತರದಲ್ಲಿ ಶನಿ |
| ೧೫ | ಹುಣ್ಣಿಮೆ ೦೦:೪೬ಕ್ಕೆ |
| ೧೮ | ಚಂದ್ರ – ಭೂಮಿ ನಡುವೆ ಕನಿಷ್ಠ ದೂರ |
| ೨೧ | ಚಾಂದ್ರಮಾಸದ ಕೊನೆಯ ಪಾದ; ಮಂಗಳದ ಹಿನ್ನಡೆ ಮುಕ್ತಾಯ |
| ೨೪ | ಮುಂಜಾವು ಹೊಸ ಉಲ್ಕಾವೃಷ್ಟಿ |
| ೨೫ | ಸಂಜೆ ಬುಧಗ್ರಹದ ಗರಿಷ್ಠ ಕೋನೋನ್ನತಿ |
| ೨೯ | ಅಮಾವಾಸ್ಯೆ ೦೦:೧೦ಕ್ಕೆ |
| ೩೦ | ಸಂಜೆ ಬುಧ – ಚಂದ್ರ ನಡುವೆ ೬ ಡಿಗ್ರಿ ಅಂತರ |

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

> “ಏಯ್ ದುಖೀಯಾ ಮಲಗಿದಿಯಾ ? ಕಟ್ಟಿಗೆ ಹೆಂಗಿತ್ತೊ ಹಂಗೇ ಬಿದ್ಕೊಂಡಿದೆ. ಇಷ್ಟೊತ್ತೇನು ಕಡೀತಾ ಇದ್ದೆ ? ಹಿಡಿ ಭೂಸಾ ತುಂಬೋದಕ್ಕೆ ಸಂಜೆ ಮಾಡಿಬಿಟ್ಟೆ . ಈಗ ನೋಡಿದರೆ ಮಲಗಿದಿಯಾ. ಕೊಡಲಿ ಎತ್ಕೋ. ಕಟ್ಟಿಗೆ ಈಗಿಂದೀಗಲೇ ಸೀಳ ಹಾಕು. ಇಷ್ಟು ಸಣ್ಣ ಕಟ್ಟಿಗೆ ತುಂಡು ಕೂಡ ಸೀಳೋಕಾಗಲ್ವೇನೋ ? ನೋಡೋ, ನಿನ್ನ ಮಗಳ ಶುಭಕಾರ್ಯಕ್ಕೆ ಮುಹೂರ್ತ ಹುಡುಕೋ ವಿಷಯದಲ್ಲಿ ನಾನೂ ನಿನ್ನ ಹಾಗೇ ನಡಕೊಂಡರೆ ಏನಾಗುತ್ತೆ ಅಂತ ಯೋಚನೆ ಮಾಡಿದಿಯಾ ? ಆಮೇಲೆ ನನ್ನನ್ನ ದೂರಬೇಡ. ಜನ ಹೇಳೋದು ಸರಿಯಾಗೇ ಇದೆ. ಈ ಕೆಳಜಾತಿಯೋರ ಹೊಟ್ಟೆಗೆ ಹಿಟ್ಟು ಸೇರಿಬಿಡ್ತೊ, ಮುಗೀತು ನೀಯತ್ತೇ ಬದಲಾಯಿಸಿಕೊಂಡುಬಿಡ್ತಾರೆ” ದುಖೀ ಮತ್ತೆ ಕೊಡಲಿ ಎತ್ತಿಕೊಂಡ.

# ಸದ್ಗತಿ

ಕಥಾಲೋಕ

ಚಮ್ಮಾರ ದುಖೀ ಮನೆಗೆ ಸುಣ್ಣ ಬಳಿಯುತ್ತಿದ್ದ, ಅವನ ಹೆಂಡತಿ ಝುರಿಯಾ ಸೆಗಣಿಯಿಂದ ನೆಲ ಸಾರಿಸುತ್ತಿದ್ದಳು. ಕೆಲಸದ ನಡುವೆ ಒಂದಷ್ಟು ಬಿಡುವು ಸಿಕ್ಕಿತು. ಚಮ್ಮಾರನ ಹೆಂಡತಿ “ನೀ ಹೋಗಿ ಭಟ್ಟರಿಗೆ ಒಂದು ಮಾತು ಹೇಳಿ ಬಾ, ಎಲ್ಲಾದರೂ ಹೊರಟು ಹೋದಾರು” ಎಂದು ನೆನಪಿಸಿದಳು.

ದುಖೀ : ಹೋಗ್ತೀನಿ. ಭಟ್ಟರು ಮನೆಗೆ ಬಂದರೆ ಕೂರೋದು ಎಲ್ಲಿ ಅಂತ ಯೋಚ್ನೆ ಮಾಡಿದಿಯಾ ?

ಝುರಿಯಾ : ಎಲ್ಲಿಂದಾರೂ ಪಲ್ಲಂಗ ತಂದರಾಯ್ತು. ಪುರದ ಪ್ರಭುಗಳ ಮನೆಯಿಂದ ಕೇಳಿ ತಗೊಂಡು ಬರುವಿಯಂತೆ ಬಿಡು.

ದುಖೀ : ನೀ ಒಮ್ಮೊಮ್ಮೆ ಇಂಥಾ ಮಾತಾಡ್ತಿಯಲ್ಲ, ಮೈ ಉರದ್ಹೋಗತ್ತೆ. ಆ ಪುರಪ್ರಭುಗಳು ಅಂಗಲಾಚಿ ಬೇಡಕೊಂಡ್ರೂ ಒಲೆ ಹೊತ್ತಿಸೋದಕ್ಕೆ ಬೆಂಕೀನೂ ಕೊಡಲ್ಲ. ಇನ್ನು ಪಲ್ಲಂಗ ಕೊಡ್ತಾರಾ ?! ನೀರ್ ಕೇಳಿದ್ರೆ ಹನಿ ನೀರು ಕೊಡಲ್ಲ, ಪಲ್ಲಂಗ ಕೊಡ್ತಾರಂತೆ ಪಲ್ಲಂಗ... ಸರಿ ಬಾ ಬಾ ಕುಳ್ಳು, ಒಂದಷ್ಟು ಭೂಸಾ ಇದೆ ಎತ್ಕೋ. ಇಲ್ನೋಡು ಈ ಹಳೇ ಕಟ್ಟಿಗೆ ಪಲ್ಲಂಗ ಇದೆಯಲ್ಲ ತೊಳೆದಿಟ್ಬಿಡು, ಭಟ್ಟರು ಬರೋವಷ್ಟೊತ್ತಿಗೆ ಒಣಗಬಹ್ದು.

ಝುರಿಯಾ : ಅವ್ರು ನಮ್ಮ ಪಲ್ಲಂಗದ ಮೇಲೆ ಕೂರ್ತಾರಾ ? ನಿಂಗೇ ಗೊತ್ತಲ್ಲ ಎಷ್ಟೊಂದು ಧರ್ಮ–ನೇಮಾ ಪಾಲಿಸ್ತಾರೆ ಅವ್ರು ಅಂತ.

ದುಖೀ : ನೀನ್ ಹೇಳೋದು ದಿಟವೇ. ಪತ್ರೊಳೆ ಎಲೆಯಿಂದ ಒಂದಷ್ಟು ತಟ್ಟೆ ಹೆಣೆದಿಡೋದು ವಾಸಿ. ಎಲೆ ಪವಿತ್ರ. ಅದರಲ್ಲಿ ಎಂತೆಂಥ ಮಹಾಮಹಿಮರೇ ಉಣ್ತಾರೆ. ಆ ಕೋಲು ತಾ. ಒಂದಷ್ಟು ಎಲೆ ಹರಿದಿಟ್ಕೋತೀನಿ.

ಝುರಿಯಾ : ಎಲೆ ತಟ್ಟೆ ನಾನೇ ಮಾಡ್ತೀನಿ. ನೀ ಭಟ್ಟರ ಮನೆಗೆ ಹೋಗಿ ಬಾ. ಭಟ್ಟರಿಗೆ ಏನಾರೂ ಕಾಣಿಕೆ ಅಂತ ನೀಡಬೇಕಲ್ವಾ, ಅದನ್ನ ನಮ್ಮ ತಟ್ಟೆಯಲ್ಲಿಟ್ಟು ಕೊಟ್ಟರಾಯ್ತು ಬಿಡು.

ದುಖೀ : ತಲೆ ಕೆಟ್ಟಂಗಿದೆ ನಿಂದು. ಅಂಥ ಎಡವಟ್ಟೇನಾರೂ ಮಾಡಿಯಾ ! ಭಟ್ಟರು ತಟ್ಟೆ ಎತ್ತಿ ಬಿಸಾಕ್ತಾರೆ. ಕಾಣಿಕೆಯೂ ಹೋಯ್ತು ನಿನ್ನ ತಟ್ಟೆನೂ ಹೋಯ್ತು ಅಷ್ಟೇ. ಅವ್ರಿಗೆ ಮೂಗಿನ ಮೇಲೇ ಸಿಟ್ಟು. ಒಮ್ಮೆ ಅವ್ರ ಹುಡುಗನಿಗೇ ಹಿಗ್ಗಾ ಮುಗ್ಗಾ ಬಾರಿಸಿದ್ದನ್ನ ಕಣ್ಣಾರೆ ಕಂಡಿದಿನಿ, ಆ ಹುಡುಗನ ಕೈ ಮುರಿದ್ಹೋಯ್ತು. ಈಗಲೂ ನೆಟ್ಟಗಾಗಿಲ್ಲ ಗೊತ್ತಾ ? ತಮ್ಮ ಹೆಂಡ್ತಿ ಭಟ್ರಮ್ಮನವ್ರಿಗೂ ಬಿಡಲ್ಲ ಅಂತೀನಿ ! ಪತ್ರೊಳೆ ಎಲೆ ತಟ್ಟೆಯಲ್ಲೇ ಕಾಣಿಕೆ ಕೊಡು. ಆದರೆ, ನೀನು ಮಾತ್ರ ಕೈಯಿಂದ ಮುಟ್ಟಬಾರ್ದು, ಅಷ್ಟೆ.

ಝುರಿಯಾ : ಗೊಂಡನ ಮಗಳನ್ನು ಕರಕೊಂಡು ಹೋಗಿ ಅಂಗಡಿಯಿಂದ ಎಲ್ಲಾ ಸಾಮಾನು ತಂದಿಡು. ಕಾಣಿಕೆ ಜಬರ್‌ದಸ್ತಾಗಿರಬೇಕು. ಒಂದು ಸೇರು ಹಿಟ್ಟು, ಅರ್ಧ ಸೇರು ಅಕ್ಕಿ, ಪಾವು ಬ್ಯಾಳಿ, ಅರೆ ಪಾವು ತುಪ್ಪ, ನವಣೆ, ಅರಿಷಿಣ ಮತ್ತು ತಟ್ಟೆಗಿಡೋಕೆ ಒಂದಷ್ಟು ಕಾಸು ಎಲ್ಲಾ ಬೇಕು. ಗೊಂಡನ ಮಗಳು ಸಿಕ್ಕದಿದ್ರೆ ಭುರ್ಜಿನ ಕೈ ಕಾಲು ಸ್ವಚ್ಛಾಗಿ ತೊಳಿಸಿ ಜತೆಗೆ ಕರಕೊಂಡು ಹೋಗು.

“ಏಯ್ ಭುರ್ಜೀ ನೀನೇನೂ ಮುಟ್ಬೇಡ. ಎಡವಟ್ಟಾದೀತು !” ಎಂದು ಮಗನನ್ನು ಗದರಿಸಿದಳು.

**ಮೂಲ : ಮುನ್ಶೀ ಪ್ರೇಮಚಂದ್**

ದುಖೀ ಕೋಲು ಎತ್ತಿಕೊಂಡು ದೊಡ್ಡದೊಂದು ಮೇವಿನ ಹೊರೆ ಹೊತ್ತು ಭಟ್ಟರನ್ನು ಕಾಣಲು ಹೊರಟು ನಿಂತ. ಭಟ್ಟರಿಗೆ ಕಾಣಿಕೆ ಅರ್ಪಿಸಲು ಮೇವಿನ ಹುಲ್ಲಿನ ಹೊರತಾಗಿ ಪಾಪ ಅವನ ಬಳಿ ಇನ್ನೇನಿದ್ದೀತು ? ಬರಿಗೈಯಿಂದ ಹೋದರೆ ಭಟ್ಟರು ದೂರದಿಂದಲೇ ಉಗಿದು ವಾಪಸ್ ಕಳಿಸ್ತಾರೆ ಅನ್ನೋದು ದುಖೀಗೆ ಚೆನ್ನಾಗಿ ತಿಳಿದಿತ್ತು.

✶ ✶ ✶

ಶ್ರೀಪಾದ ಭಟ್ಟ, ಕೃಷ್ಣನ ಪರಮ ಭಕ್ತ. ನಿದ್ರೆಯಿಂದ ಕಣ್ಬಿಡುತ್ತಿದ್ದಂತೆ ಕೃಷ್ಣ ಕೃಷ್ಣ ಎಂದು ಕೃಷ್ಣೋಪಾಸನೆ ಶುರುವಿಟ್ಟುಕೊಳ್ಳುವಂಥವ. ಬೆಳಿಗ್ಗೆದ್ದು ಮುಖ, ಮೂತಿ ತೊಳೆದುಕೊಳ್ಳುವಷ್ಟೊತ್ತಿಗೆ ಗಂಟೆ ಎಂಟಾಗುತ್ತಿತ್ತು. ಅಸಲಿ ಪೂಜೆ, ಪುನಸ್ಕಾರ ಶುರುವಾಗುತ್ತಿದ್ದುದೇ ಆಗ. ಗಂಧ ಮತ್ತಿತರ ಲೇಪನಗಳ ಸಿದ್ಧತೆ ಮಾಡಿಕೊಳ್ಳುತ್ತಿದ್ದ. ಕನ್ನಡಿ ಎದುರು ನಿಂತು ಹಣೆಯ ಮೇಲೆ ಎರಡು ಉದ್ದನೆಯ ಗಂಧದ ಗೆರೆಗಳನ್ನೆಳೆದುಕೊಂಡು ಮಧ್ಯದಲ್ಲೊಂದು ಬೊಟ್ಟು ಇಟ್ಟುಕೊಳ್ಳುತ್ತಿದ್ದ. ಹೊಟ್ಟೆ ಮತ್ತು ಭುಜದ ಭಾಗಗಳಲ್ಲಿ ಗಂಧದಿಂದ ಮುದ್ರಿಕೆಗಳನ್ನು ಬರೆದುಕೊಳ್ಳುತ್ತಿದ್ದ. ಪುರಪ್ರಭು ಮಾಡಿಸಿಕೊಟ್ಟ ವಿಗ್ರಹವನ್ನು ಹೊರಕ್ಕೆ ತೆಗೆದು ಅದಕ್ಕೆ ಸ್ನಾನ ಮಾಡಿಸುತ್ತಿದ್ದ. ಪುಷ್ಪಾರ್ಚನೆ ಮಾಡಿ, ಆರತಿ ಎತ್ತಿ ಗಂಟೆ ಬಾರಿಸುತ್ತಿದ್ದ. ಪೂಜಾ ಕೈಂಕರ್ಯವೆಲ್ಲ ಮುಗಿಯುವಷ್ಟೊತ್ತಿಗೆ ಸಮಯ ಹತ್ತು ಗಂಟೆಯಾಗುತ್ತಿತ್ತು. ಅಷ್ಟರಲ್ಲಿ ನಾಲ್ಕಾರು ಮಂದಿ ಪ್ರಸಾದಕ್ಕಾಗಿ ಕಾದು ನಿಂತಿರುತ್ತಿದ್ದರು. ಹತ್ತಿರದಲ್ಲೇ ಭಟ್ಟನ ಜಮೀನಿತ್ತು. ಪೂಜಾಗೃಹದಿಂದ ಭಟ್ಟ ಹೊರ ಬರುತ್ತಿದ್ದಂತೆ ಮೇವಿನ ಹೊರೆ ಸಮೇತ ಕುಳಿತಿದ್ದ ದುಖೀಯನ್ನು ಗಮನಿಸಿದ. ಭಟ್ಟನನ್ನು ಕಂಡ ತಕ್ಷಣ ದುಖೀ ಎದ್ದು ನಿಂತ. ಬಾಗಿ ನಮಸ್ಕರಿಸಿ ಕೈಕಟ್ಟಿ ನಿಂತುಕೊಂಡ ವಿಧೇಯನಾಗಿ. ತೇಜೋಮಯ ಪೂಜಾ ವಿಗ್ರಹ ನೋಡುತ್ತಿದ್ದಂತೆ ಅವನ ಹೃದಯ ಶ್ರದ್ಧೆ, ಭಕ್ತಿಯಿಂದ ತುಂಬಿಹೋಗಿತ್ತು. ಅದೆಂಥ ದಿವ್ಯ ಮೂರ್ತಿ ! ದುಂಡನೆ ಮಾರಿ, ಹೊಳೆವ ಶಿರ, ಕಮಲದ ಹೂವಿನಂಥ ಕೋಮಲ ಮುಖ, ಬ್ರಹ್ಮತೇಜದಿಂದ ಹೊಳೆವ ಕಂಗಳು..., ಗಂಧದ ಲೇಪನದಿಂದ ವಿಗ್ರಹಕ್ಕೆ ಮತ್ತಷ್ಟು ಕಳೆ ಬಂದಿತ್ತು.

ದುಖೀಯನ್ನು ಕಂಡ ಭಟ್ಟ "ಏನೋ ಈ ಕಡೆ ಬಂದೆ" ? ಎಂದು ಕೇಳಿದ.

ತಲೆಯಾಡಿಸುತ್ತಲೇ, "ಮಗಳ ನಿಶ್ಚಿತಾರ್ಥ ಇಟ್ಟುಕೊಂಡಿದಿನಿ ಬುದ್ದೀ, ಶುಭ ಕಾರ್ಯವಾದ್ದರಿಂದ ತಾವೇ ಮುಹೂರ್ತ ಹುಡುಕಿ ಕೊಡ್ಬೇಕು. ಯಾವತ್ತು ದಯಮಾಡಿಸ್ತಿರಿ ?" ಎಂದ ದುಖೀ ವಿನಯದಿಂದ.

ಭಟ್ಟ : ನನಗೆ ಸದ್ಯಕ್ಕೆ ಪುರುಸೊತ್ತಿಲ್ಲ. ಹ್ಞಾಂ ! ಸಂಜೆಯಷ್ಟೊತ್ತಿಗೆ ಆಗಬಹುದು.

ದುಖೀ : ಇಲ್ಲ ಬುದ್ದೀ, ಎಲ್ಲಾ ಸಾಮಾನು ವ್ಯವಸ್ಥೆ ಮಾಡಿಟ್ಟು ಬಂದಿದಿನಿ ಬೇಗ ದಯಮಾಡಿಸಿ. ಈ ಮೇವು ಎಲ್ಲಿಡಲಿ ?

ಭಟ್ಟ : ಹಸುಗಳ ಮುಂದೆ ಹಾಕಿಬಿಡೋ. ಕೇಳಿಲ್ಲಿ, ಆ ಕಸಬರಿಗೆ ಎತ್ಕೊಂಡು ಅಂಗಳ ಗುಡಿಸಿ ಬಿಡು. ಈ ಕೂರುವ ಜಗುಲಿ ಜಾಗ ಸಾರಿಸದೆ ಎಷ್ಟು ಸಮಯ ವಾಯ್ತು. ಅದನ್ನಷ್ಟು ಸೆಗಣಿಯಿಂದ ಸಾರಿಸಿಬಿಡು. ಅಷ್ಟೊತ್ತಿಗೆ ನಾನು ಭೋಜನ ಸವಿದು, ಒಂದಷ್ಟು ಹೊತ್ತು ಆರಾಮ ಒರಗಿ ಬಂದುಬಿಡ್ತೀನಿ. ಹಂಗೇ ಆ ಕಟ್ಟಿಗೆಯನ್ನೂ ಒಡೆದುಹಾಕು, ಉಗ್ರಾಣದಿಂದ ನಾಲ್ಕು ಮೂಟೆ ಭೂಸಾ ಎತ್ತಿಡು.

ದುಖೀ ತಕ್ಷಣಕ್ಕೆ ಸೇವಾ ಸನ್ನದ್ಧನಾದ. ಅಂಗಳ ಗುಡಿಸಿದ. ಕೂರುವ ಜಗುಲಿ ಜಾಗವನ್ನು ಸೆಗಣಿಯಿಂದ ಸಾರಿಸಿದ. ಅಷ್ಟೊತ್ತಿಗೆ ಮಧ್ಯಾಹ್ನ ೧೨ ಗಂಟೆಯಾಗಿತ್ತು. ಭಟ್ಟ ಭೋಜನಕ್ಕೆ ಹೊರಟುಹೋದ. ದುಖೀ ಬೆಳಿಗ್ಗೆಯಿಂದ ಒಂದಗುಳನ್ನೂ ತಿಂದಿರಲಿಲ್ಲ. ತುಂಬ ಹಸಿದಿದ್ದ. ತಕ್ಷಣಕ್ಕೆ ಅಲ್ಲಿ ತಿನ್ನಲು ಏನೂ ಇರಲಿಲ್ಲ. ಅವನ ಮನೆ ಬೇರೆ ಅಲ್ಲಿಂದ ಮೈಲಿಯಷ್ಟು ದೂರದಲ್ಲಿತ್ತು. ಊಟಕ್ಕೆ ಹೊರಟುಹೋದರೆ ಭಟ್ಟರು ಕೋಪ ಮಾಡಿಕೊಂಡಾರು ಎಂದುಕೊಂಡ ಪುಣ್ಯಾತ್ಮ, ಹಸಿವನ್ನೇ ಹತ್ತಿಕ್ಕಲು ನೋಡಿದ. ಕಟ್ಟಿಗೆ ಒಡೆಯಲು ಮುಂದಾದ. ಕಟ್ಟಿಗೆಗೆ ದೊಡ್ಡ ಗಂಟು ಬೇರೆ. ಸೀಳಿಕೊಳ್ಳುತ್ತಲೇ ಇಲ್ಲ. ಈ ಹಿಂದೆ ಇದೇ ಕಟ್ಟಿಗೆ ಒಡೆಯಲು ಅದೆಷ್ಟು ಭಕ್ತರು ಯತ್ನಿಸಿ ವಿಫಲರಾಗಿದ್ದರು. ದುಖೀಗೆ ಮೇವು ಬಿಡಿಸಿಕೊಂಡು ಪೇಟೆಗೆ ಹೋಗಿ ಮಾರುವುದು ಗೊತ್ತಿತ್ತು. ಅವನ ಕುರ್ಪಿ, ಕುಡುಗೋಲಿನ ಚಮತ್ಕಾರಕ್ಕೆ ಹುಲ್ಲು ತಾನಾಗೇ ಶಿರವೊಡ್ಡಿಬಿಡುತ್ತಿತ್ತು. ಆದರೆ, ಕಟ್ಟಿಗೆ ಒಡೆಯುವ ಕೆಲಸ ಅವನಿಗೆ ಗೊತ್ತಿರಲಿಲ್ಲ. ತನ್ನೆಲ್ಲ ಶಕ್ತಿ ಬಳಸಿದನಾದರೂ ಅವನ ಕೊಡಲಿ ಏಟಿಗೆ ಕಟ್ಟಿಗೆಯ ಗಂಟು ಸೀಳಿಕೊಳ್ಳುತ್ತಲೇ ಇಲ್ಲ. ಏಟು ಕಟ್ಟಿಗೆಯ ಗಂಟಿನ ಮೇಲೆ ಬೀಳದೆ ಗುರಿ ತಪ್ಪುತ್ತಲಿತ್ತು. ಒಮ್ಮೊಮ್ಮೆ ಏಟು ಬಿದ್ದರೂ ಕೊಡಲಿ ಪುಟಿದುಬರುತ್ತಿತ್ತು. ಬೆವೆತು ಹಣ್ಣುಗಾಯಿ ನೀರುಗಾಯಿಯಂತಾಗತೊಡಗಿದ. ಸುಸ್ತಿಗೆ ಮೈನಡುಗಿದಂತಾಗಿ ಒಮ್ಮೊಮ್ಮೆ ನೆಲಕ್ಕೊರಗುತ್ತಿದ್ದ. ಸಾವರಿಸಿಕೊಂಡು ಕೊಡಲಿ ಹಿಡಿಯಲು ಯತ್ನಿಸುತ್ತಿದ್ದನಾದರೂ ಕೈ ಎತ್ತುವುದಕ್ಕೂ ಆಗುತ್ತಿರಲಿಲ್ಲ. ನಿತ್ರಾಣಗೊಂಡಿದ್ದ. ಬೆನ್ನು ಭಾರ ಎನಿಸತೊಡಗಿತ್ತು. ಕಣ್ಣಿಗೆ ಕತ್ತಲು ಕವಿದಂತಾಗಿ, ತಲೆಸುತ್ತಿ ನೆಲಕ್ಕೆ ಕುಸಿಯುತ್ತಿದ್ದ. ಆದರೂ ಸಾವರಿಸಿಕೊಂಡು ಕೆಲಸ ಮುಂದುವರಿಸಲು ನೋಡುತ್ತಿದ್ದ. ಒಂದೆರಡು ದಮ್ಮು ತಂಬಾಕಿನ ಚಿಲುಮೆ ಎಳೆದಿದ್ದರೆ ! ಒಂದಷ್ಟು ತ್ರಾಣವಾದರೂ ಬರುತ್ತಿತ್ತು ಅಂದುಕೊಂಡ.

'ಇಲ್ಲಿ ಚಿಲುಮೆ, ತಂಬಾಕು ಸಿಕ್ಕೋದಾದರೂ ಹೇಗೆ ? ಹೇಳಿ ಕೇಳಿ ಇದು ಬ್ರಾಹ್ಮಣರ ಊರು. ಬ್ರಾಹ್ಮಣರೇನು ಕೆಳಜಾತಿಯವರಂತೆ ತಂಬಾಕು ಸೇದ್ತಾರೇನು ?' ಎಂದುಕೊಂಡ. ಗೊಂಡ ನೆನಪಾದ. 'ಓಹ್ ! ಗೊಂಡ ಇದೇ ಊರಲ್ಲಿ ಇರೋದಲ್ವೇ ? ಅವನ ಹತ್ರ ತಂಬಾಕು, ಚಿಲುಮೆ ಸಿಕ್ಕೇ ಸಿಕ್ಕುತ್ತೆ' ಅಂದುಕೊಂಡವನೇ ಗೊಂಡನ ಮನೆಯತ್ತ ಹೊರಟ. ಅವನಂದುಕೊಂಡಂತೇ ಆಯ್ತು. ಗೊಂಡ ತಂಬಾಕು ಮತ್ತು ಚಿಲುಮೆ ವ್ಯವಸ್ಥೆ ಮಾಡಿಕೊಟ್ಟ. ದಮ್ಮು ಎಳೆಯುವದಕ್ಕೆ ಬೆಂಕಿ ಬೇಕಲ್ಲ ! ಆದರೆ, ಅಲ್ಲಿ ಬೆಂಕಿ ಲಭ್ಯವಿಲ್ಲ.

"ಅಯ್ಯೋ ಬೆಂಕಿ ಚಿಂತೆ ಯಾಕೋ ಗೊಂಡ, ಭಟ್ರ ಹತ್ರ ಬೆಂಕಿ ಇಸ್ಕೋತೀನಿ ಬಿಡು, ಅವರ ಮನೆ ಒಲೆ ಉರಿಯೋದನ್ನ ಈಗಷ್ಟೇ ನೋಡಿದಿನಿ" ಎಂದವನೇ ಭಟ್ಟನ ಮನೆ ತಲುಪಿದ ದುಖೀ, ಮನೆ ಗ್ವಾಡ್ಲಿ (ದನದ ಹಟ್ಟಿ) ಬಳಿ ನಿಂತು "ಬುದ್ದೀ ಸ್ವಲ್ಪ ಬೆಂಕಿ ಬೇಕಿತ್ತು. ಕೊಟ್ರೆ ಒಂದಮ್ಮು ಚಿಲುಮೆ ಎಳೆದುಬಿಡ್ತೀನಿ" ಅಂದ.

ಭಟ್ಟ ಭೋಜನದಲ್ಲಿ ಮಗ್ನನಾಗಿದ್ದ. ಜೋರು ಬಾಯಿ ಭಟ್ರಮ್ಮ 'ಯಾರದು ? ಬೆಂಕಿ ಕೇಳ್ತಿರೋದು' ಕೂಗಿದಳು.

ಭಟ್ಟ : ಅದೇ ನಮ್ಮ ಚಮ್ಮಾರ ದುಖೀಯಾ. ಒಂದು ಕೊಳ್ಳಿ ಎತ್ಕೋ, ಬೆಂಕಿ ತಾನೇ – ಕೊಟ್ಟುಬಿಡು.

ಭಟ್ರಮ್ಮ : ನಿಮಗೆ ಪಂಚಾಂಗ, ಪತ್ರದ ಗುಂಗಿನಲ್ಲಿ ಧರ್ಮ–ಕರ್ಮಗಳ ವಿಚಾರದ ಖಬರೇಇರಲ್ಲ. ಚಮ್ಮಾರನೋ, ಅಗಸನೋ ಯಾವ್ಯಾವ ಕೆಳಜಾತಿಯೋರೋ, ಬಾಯಿ ತೆರಕೊಂಡು ಬಂದುಬಿಡ್ತಾರೆ ಇಲ್ಲಿಗೆ. ಇದೇನು ಹಿಂದೂ ಮನೆಯೋ ಇಲ್ಲಾ ಧರ್ಮಛತ್ರಾನೋ ! ಇಲ್ಲಿಂದ ತೊಲಗು ಅಂತ ಹೇಳಿ ಅವನಿಗೆ. ಇಲ್ಲಾ ಅಂದ್ರೆ ಈ ಬೆಂಕಿ ಕೊಳ್ಳೀನಾ ಅವನ ಮುಸುಡಿಗಿಟ್ಟು ಬಿಡ್ತೀನಿ. ಬೆಂಕಿ ಕೇಳ್ತಾರೆ. ಎಷ್ಟು ಧೈರ್ಯ ಇವ್ರಿಗೆ ?

ಭಟ್ಟ ಅವಳನ್ನು ಸಮಾಧಾನಪಡಿಸಲು ನೋಡುತ್ತಾನೆ.

'ನೀನು ಒಳಕ್ಕೆ ನಡೀ ಮಾರಾಯ್ತಿ. ಎಂಥದು ಆಯ್ತೀಗ. ಅವನೇನು ನಿನ್ನ ವಸ್ತುವನ್ನೇನಾದರೂ ಮುಟ್ಟಿದನಾ ? ಕೊಂಚ ಬೆಂಕಿ ಕೊಡು. ಯಾಕೆ ಕೊಡಲ್ಲಾ ಅಂತೀಯಾ ? ಅವನು ಮಾಡ್ತಿರೋದು ನಮ್ಮ ಕೆಲಸಾನೇ. ಇದೇ ಕೆಲಸ ಬೇರೆ ಯಾವನಿಗಾದ್ರೂ ವಹಿಸಿದ್ರೆ ಎಷ್ಟೊಂದು ಕಾಸು ಕೊಡಬೇಕಾಗ್ತಿತ್ತು !

"ಅವ ಮನೆಯೊಳಕ್ಕೆ ಹೇಗೆ ಬಂದಾ ?" ಭಟ್ರಮ್ಮ ಮತ್ತೆ ಗುಡುಗಿದಳು.

ಕಸಿವಿಸಿಗೊಂಡ ಭಟ್ಟ, "ಹೋಗಲಿ ಬಿಡು ಅವನದಿವತ್ತು ಕೆಟ್ಟ ಘಳಿಗೆ" ಅಂದ.

ಭಟ್ರಮ್ಮ : ಆಯ್ತು. ಇವತ್ತು ಅವನಿಗೆ ಬೆಂಕಿ ಕೊಡ್ತೀನಿ. ಮತ್ತಿನ್ನೆಂದಾದರೂ ಹೀಗೆ ಮನೆಯೊಳಕ್ಕೆ ಬಂದರೆ ನಾನವನ ಮೂತಿ ಸುಟ್ಟುಹಾಕಿಬಿಡ್ತೀನಿ ಹ್ಞಾಂ.

ದುಖೀಯ ಕಿವಿಗೆ ಈ ಮಾತು ಜೋರಾಗಿ ಅಪ್ಪಳಿಸಿತು. ಒಳಗೊಳಗೇ ಪಶ್ಚಾತ್ತಾಪ. 'ನಂಗೇನು ಹಕ್ಕಿತ್ತು ಇಲ್ಲಿಗೆ ಬರೋಕೆ. ಭಟ್ರಮ್ಮ ಹೇಳ್ತಿರೋದು ದಿಟವೇ. ಭಟ್ಟರ ಮನೆಯೊಳಕ್ಕೆ ಚಮ್ಮಾರ ಕಾಲಿಡೋದಾ ? ಭಟ್ಟರು ಪವಿತ್ರ ಜನ. ಎಲ್ರೂ ಅವರನ್ನು ಪೂಜೆ ಮಾಡ್ತಾರೆ. ಅದಕ್ಕೇ ಭಟ್ಟರಿಗೆ ದೊಡ್ಡ ಮಾನ, ಸಮ್ಮಾನ. ಅವರೇನು ಚಮ್ಮಾರರೇ ? ನಾನೂ ಇಷ್ಟು ವರ್ಷ ಈ ಊರಲ್ಲಿ ಬದುಕಿದೆ. ಮುದಿ ವಯಸ್ಸಾಯ್ತು. ಇಂಥ ಕನಿಷ್ಠ ಜ್ಞಾನ ಮಾತ್ರ ಬೆಳೀಲಿಲ್ಲ !' ದುಖೀ ತನ್ನನ್ನೇ ತಾನು ಹಳಿದುಕೊಂಡ.

ಭಟ್ರಮ್ಮ ಬೆಂಕಿ ತರುತ್ತಿರುವುದನ್ನು ಕಂಡ ದುಖೀಗೆ ಸ್ವರ್ಗವೇ ತನ್ನ ಬಳಿ ಬಂದಂತೆನಿಸಿತು. ಧನ್ಯನಂತಾದ. ಕೈಗಳನ್ನು ಜೋಡಿಸಿ ಬಾಗಿದ. ನೆಲಕ್ಕೆ ಹಣೆ ಹಚ್ಚುತ್ತಾ, "ನನ್ನಿಂದ ದೊಡ್ಡ ಅಪರಾಧವಾಯಿತು ತಾಯಿ. ತಿಳೀದೆ ಮನೆಯೊಳಕ್ಕೆ ಬಂದ್ಬಿಟ್ಟೆ. ಈ ಚಮ್ಮಾರರ ಬುದ್ಧೀನೇ ಇಷ್ಟು. ಇಂಥ ಮೂರ್ಖತನಕ್ಕೇ ಅಲ್ವಾ ನಾವು ಒದೆ ತಿನ್ನೋದು ?" ಅಂದ.

ಭಟ್ರಮ್ಮ ಇಕ್ಕಳದಲ್ಲಿ ಹಿಡಿದುತಂದಿದ್ದ ಬೆಂಕಿಯನ್ನು ಐದು ಮಾರು ದೂರದಿಂದಲೇ ದುಖೀಯತ್ತ ಬಿಸಾಡಿದಳು. ಬೆಂಕಿಯ ದೊಡ್ಡ ಕಿಡಿಯೊಂದು ದುಖೀಯ ತಲೆಗೆ ಸಿಡಿಯಿತು. ದುಖೀ ಥಟ್ಟನೆ ಹಿಂದಕ್ಕೆ ಸರಿದು ತಲೆ ಝಾಡಿಸಿಕೊಂಡ. 'ಪವಿತ್ರ ಬ್ರಾಹ್ಮಣರ ಮನೆಯನ್ನು ಅಪವಿತ್ರಗೊಳಿಸಿದ್ದಕ್ಕೆ ತಕ್ಕ ಶಿಕ್ಷೆ. ನನಗೀ ದುರ್ಗತಿ ಆಗಬೇಕಾದ್ದೇ' ಎಂದು ಮನದೊಳಗೇ ಅಂದುಕೊಂಡ. 'ದೇವರು ಅದೆಷ್ಟು ಬೇಗ ಪ್ರತಿಫಲ ಕೊಟ್ಬಿಟ್ಟ ! ಅದಕ್ಕೇ ಬ್ರಾಹ್ಮಣರಿಗೆ ಎಲ್ರೂ ಹೆದರೋದು. ಎಲ್ಲರ ಹಣ, ಒಡವೆ ಕಳುವಾಗುತ್ತೆ. ಬ್ರಾಹ್ಮಣರ ಒಡವೆ, ಹಣಕ್ಕೆ ಕೈ ಹಚ್ಚಲಿ ನೋಡೋಣ ! ಅಂಥವರ ಕೈಕಾಲೇ ಬಿದ್ಹೋಗ್ತವೆ. ಮನೆಯೇ ಸರ್ವನಾಶ !' ಮನದೊಳಗೆ ತನ್ನನ್ನೇ ದೂಷಿಸಿಕೊಳ್ಳುತ್ತಾ ಹೊರಕ್ಕೆ ಬಂದ.

ಚಿಲುಮೆಗೆ ಬೆಂಕಿ ಹೊತ್ತಿಸಿದ. ಒಂದೆರಡು ದಮ್ಮು ಎಳೆದ. ಮತ್ತೆ ಕೊಡಲಿ ಎತ್ತಿಕೊಂಡ. ಕಟ್ಟಿಗೆ ಮೇಲೆ ಬೀಳುವ ಏಟಿನ ಸದ್ದು ಇಡೀ ವಾತಾವರಣವನ್ನು ವ್ಯಾಪಿಸಿಕೊಳ್ಳತೊಡಗಿತು. ದುಖೀ ತಲೆಗೆ ಬೆಂಕಿ ಕಿಡಿ ಹಾರಿದ್ದನ್ನು ಕಂಡಿದ್ದ ಭಟ್ರಮ್ಮನ ಹೆಣ್ಣು ಮನಸಲ್ಲಿ ಕಾರುಣ್ಯದ ಸಣ್ಣ ಹನಿಯೊಂದು ಜಿನುಗಿತು. ಭಟ್ಟ ಭೋಜನ ಸವಿದೆದ್ದ. "ಈ ಚಮ್ಮಾರನಿಗೂ ತಿನ್ನಲು




ಏನಾದರೂ ಒಂದಷ್ಟು ಕೊಡಬಹುದಲ್ಲ. ಪಾಪ ಎಷ್ಟೊತ್ತಿನಿಂದ ಕೆಲಸ ಮಾಡ್ತಿದ್ದಾನೆ. ಹಸಿದಿರಬಹುದು" ಎಂದುಸುರಿದಳು ಭಟ್ರಮ್ಮ.

ಈ ಪ್ರಸ್ತಾವ ವ್ಯಾವಹಾರಿಕ ದೃಷ್ಟಿಯಿಂದ ನಿಷ್ಪ್ರಯೋಜಕವೇನಲ್ಲ ಎಂದುಕೊಂಡ ಭಟ್ಟ,

ಭಟ್ಟ : ರೊಟ್ಟಿ ಇದೆ ಏನು ?

ಭಟ್ರಮ್ಮ : ಒಂದೆರಡು ಉಳಿದಿರಬೇಕು.

ಭಟ್ಟ : ಒಂದೆರಡು ರೊಟ್ಟಿಯಿಂದ ಏನಾದೀತು ? ಅವನು ಚಮ್ಮಾರ, ಕಮ್ಮಿ ಅಂದರೂ ಒಂದು ತಟ್ಟೆ ರೊಟ್ಟೀನೇ ಬೇಕು !

ಭಟ್ರಮ್ಮ ಅವಾಕ್ಕಾಗಿ ಕಿವಿ ಮುಚ್ಚಿಕೊಂಡು ರಾಮಾ ರಾಮಾ ಒಂದು ತಟ್ಟೆ ರೊಟ್ಟಿ ! ಹಾಗಾದ್ರೆ ಬಿಟ್ಹಾಕಿ.

ಭಟ್ಟನಿಗೆ ಆವೇಶ ಉಕ್ಕಿ ಬಂತು. 'ಒಂದಷ್ಟು ತೌಡು ಉಳಿದಿದ್ದರೆ ಹಿಟ್ಟಲ್ಲಿ ಕಲಿಸಿ, ದಪ್ಪಗಿನ ಎರಡು ರೊಟ್ಟಿ ಬಡಿದು ಬಿಸಾಕು, ಮಗಂದು ಹೊಟ್ಟೆ ತುಂಬುತ್ತೆ. ತೆಳ್ಳಗಿನ ರೊಟ್ಟಿಗೆ ಈ ಕೀಳು ಕುಲದವರ ಹೊಟ್ಟೆ ತುಂಬುತ್ತಾ ? ಇವರಿಗೆ ತೌಡು ರೊಟ್ಟೀನೇ ಬೇಕು.'

ಭಟ್ರಮ್ಮ : ಹೋಗ್ಲಿ ಬಿಟ್ಹಾಕಿ. ಸುಮ್ನೇ ಯಾರು ಸಾಯೋರು ?

*    *    *

ಚಿಲುಮೆಯ ಎರಡೇ ಎರಡು ದಮ್ಮಿಗೆ ದುಖೀ ಚುರುಕಾದಂತಾದ. ಕಟ್ಟಿಗೆ ಒಡೆಯುವ ಕೆಲಸದಲ್ಲಿ ಮುಂದುವರಿದಿದ್ದ. ಕೊಡಲಿ ಏಟುಗಳು ಸರಿಯಾಗೇ ಬೀಳುತ್ತಿದ್ದವು. ಒಂದರ್ಧ ಗಂಟೆ ಬಿಟ್ಟೂ ಬಿಡದೇ ಕೊಡಲಿಯಿಂದ ಗುದ್ದಾಟ ನಡೆಸುತ್ತಲೇ ಇದ್ದ. ಒಮ್ಮೆ ಉಸಿರು ನಿಂತೇ ಹೋದಂತೆನಿಸಿ ಕೊಡಲಿ ಹಿಡಿದುಕೊಂಡೇ ಉಸ್ಸಪ್ಪಾ ಎಂದು ನೆಲಕ್ಕೆ ಕುಳಿತ. ಇದೇ ಸಮಯಕ್ಕೆ ಗೊಂಡ ಬಂದ.

ಗೊಂಡ : ಯಾಕೋ ಸುಮ್ ಸುಮ್ನೇ ಹಿಂಗೆ ನಿನ್ನ ನೀನೇ ಕೊಂದ್ಕೋತಿಯಾ ? ಈ ಗಂಟು ಸೀಳಲ್ವೋ ಮುದಿಯಾ, ನಿನ್ನ ಶ್ರಮ ಹಾಳು ಮಾಡ್ಕೋತಿದಿಯಾ.

"ಇನ್ನೂ ಗಾಡಿ ತುಂಬ ಭೂಸಾ ಎತ್ತೋಕಿದೆಯಪ್ಪಾ !" ಹಣೆ ಮೇಲಿನ ಬೆವರು ಒರೆಸಿಕೊಳ್ಳುತ್ತ ದುಖೀ ಹೇಳಿದ,

ಗೊಂಡ : ಏನಾದರೂ ಹೊಟ್ಟೆಗೆ ಕೊಟ್ರೋ, ಹೆಂಗೆ ? ಇವ್ರಿಗೆಲ್ಲಾ ಕೆಲಸ ಮಾಡಿಸ್ಕೊಳ್ಳೋದಷ್ಟೇ ಗೊತ್ತೂಂತ ಕಾಣತ್ತೆ. ನೀನ್ಯಾಕೆ ಕೇಳಿ ಇಸ್ಕೋಬಾರ್ದು ?

ದುಖೀ : ಏನ್ ಮಾತು ಅಂತ ಆಡ್ತಿಯಾ, ಬ್ರಾಹ್ಮಣರ ಮನೆಯ ರೊಟ್ಟಿ ನಮ್ಗೆ ಅರಗತ್ತೇನೋ ?

ಗೊಂಡ : ಅರಗದೇ ಏನು ? ಮೊದ್ಲು ತಿನ್ನೋಕೆ ಸಿಕ್ಕರೆ ತಾನೆ ಅರಗೋ ಮಾತು? ನಿನಗೆ ಕಟ್ಟಿಗೆ ಒಡೆಯೊ ಕೆಲ್ಸಾ ಹಚ್ಚಿದ ಭಟ್ರು ತಾವು ಮಾತ್ರ ಎಗ್ಗಳಾಗೇ ಕತ್ತರಿಸಿ, ಗೊರಕೆ ಹೊಡೀತಾ ಆರಾಮಾಗಿ ಮಲಕ್ಕೊಂಡುಬಿಟ್ರು. ಅಲ್ಲಪ್ಪಾ, ಆ ಸೌಕಾರ್ರು ಕನಿಷ್ಠ ತಿನ್ನೋಕಾರೂ ಕೊಡ್ತಾರೆ. ಸಂಬಳ ಕೊಡದೇ ಕೆಲ್ಸಾ ಮಾಡಿಸ್ಕೊಳ್ಳೊ ಸಾಹೇಬ್ರು ಕೂಡ ತಿನ್ನಾಕೆ ಅಂತ ಚೂರು ಪಾರಾದ್ರೂ ಕೊಡ್ತಾರೆ. ಇವ್ರು ಅವ್ರಗಿಂತಾ ಕಡೆ. ಇದರ ಮೇಲೆ ಪವಿತ್ರರು, ಧರ್ಮವಂತರು ಅನ್ನೋ ಕೋಡುಗಳು ಬೇರೆ !

ದುಖೀ : ಸ್ವಲ್ಪ ಮೆತ್ತಗೆ ಮಾತಾಡೋ, ಕೇಳಿಸಿಕೊಂಡ್ರೆ ದೊಡ್ಡ ಅನಾಹುತ ಆಗುತ್ತೆ.

ಮತ್ತೆ ಮೆಲ್ಲಗೆ ಎದ್ದವನೇ ಕೊಡಲಿ ಎತ್ತಿಕೊಂಡ. ಕಟ್ಟಿಗೆ ಗಂಟಿನ ಮೇಲೆ ಹೊಡೆತ ಆರಂಭಿಸಿದ. ಗೊಂಡನಿಗೆ ಇದು ಅಸಹನೀಯವಾಗತೊಡಗಿತು. ದುಖೀ ಕೈಯಲ್ಲಿನ ಕೊಡಲಿ ಕಿತ್ತುಕೊಂಡು ತಾನೇ ಕಟ್ಟಿಗೆ ಗಂಟು ಸೀಳಲು ಮುಂದಾದ. ಒಂದರ್ಧ ಗಂಟೆ ಕೊಡಲಿಯಿಂದ ಎಗರಾಡಿದ. ಗಂಟು ಒಂಚೂರೂ ಸೀಳಿಕೊಳ್ಳಲಿಲ್ಲ. ಕೊಡಲಿ ಬೀಸಾಕಿ "ನೀನ್ ಸಾಯ್ತೀಯಾ, ಈ ಗಂಟು ಸೀಳಲ್ಲ" ಎಂದವನೇ ಕಾಲ್ಕಿತ್ತ.

ದುಖೀ ಚಿಂತಿತನಾದ. "ಅಯ್ಯೋ ಬುದ್ಧೀ ! ಈ ಗಂಟಿನ ಕಟ್ಟಿಗೆಯನ್ನ ಈಸ್ ದಿನಾ ಎಲ್ಲಿ ಬಿಸಾಕಿದ್ರಿ? ಎಷ್ಟು ಜೋರು ಏಟು ಹಾಕಿದ್ರೂ ಒಂದೇ ಒಂಚೂರು ಸೀಳ್ಕೋತಿಲ್ಲಾ. ಎಲ್ಲೀತನಕ ಇದನ್ನೇ ಸೀಳಿಕೊಂಡಿರ್ಲಿ ? ಮನೇಲಿ ನೂರಾರು ಕೆಲಸ ಬಿದ್ಕೊಂಡಿದೆ. ಮಗಳ ಶುಭಕಾರ್ಯ ಇಟ್ಕೊಂಡ ಮನೆ. ಏಸೊಂದು ಕೆಲ್ಸಾ ಇರತ್ತೆ. ಇವರಿಗೇನು ? ತಮ್ಮ ಕೆಲ್ಸಾ ಆಗ್ಬೇಕು. ಅದಷ್ಟೇ ಇವ್ರ ಚಿಂತೆ. ನಾನ್ ಹೋಗಿ ಭೂಸಾ ಹೊತ್ಕೊಂಡು ಬರ್ತೀನಿ. ಈ ಗಂಟು ಮಾತ್ರ ನನ್ನಿಂದ ಸೀಳೋ ಕಾಗಲ್ಲ. ನಾಳೆ ಬೇಕಾರೆ ಸೀಳಿಕೊಡ್ತೀನಿ ಬುದ್ಧೀ ಅಂತ ಹೇಳಿಬಿಡ್ತೀನಿ." ಎಂದು ತನ್ನೊಳಗೇ ನಿರ್ಧಾರ ಮಾಡಿಕೊಂಡ. ಗೋಣಿಚೀಲ ಎತ್ತಿಕೊಂಡವನೇ ಭೂಸಾ ತರಲು ಹೊರಟು ನಿಂತ. ಭೂಸಾ ಇಟ್ಟ ಜಮೀನು ಎರಡು ಫರ್ಲಾಂಗ್ ದೂರದಲ್ಲಿದೆ. ಅಲ್ಲಿಂದ ಭರ್ತಿ ಗೋಣಿಚೀಲ ಹೊತ್ತು ತರೋದು ಪ್ರಯಾಸದ ಕೆಲಸ. ಇಷ್ಟಿಷ್ಟೇ ಭೂಸಾ ತುಂಬಿಕೊಂಡು ಬಂದರೆ ಕೆಲಸ ಹಗುರಾದೀತು. ಬೇಗನೇ ಕೆಲಸ ಮುಗಿಸಿಬಿಡಬಹುದು ಅಂದುಕೊಂಡ. ಅದರಂತೆಯೇ ಮಾಡಿದ. ಭೂಸಾ ತುಂಬಿಡುವ ಕೆಲಸ ಮುಗಿಯುವ ಅಷ್ಟೊತ್ತಿಗೆ ಸಂಜೆ ನಾಲ್ಕು ಗಂಟೆ ಆಗಿತ್ತು.

ಇದೇ ಹೊತ್ತಿಗೆ ಸರಿಯಾಗಿ ಭಟ್ಟ ಗೊರಕೆಯಿಂದ ಎದ್ದ. ಮುಖ, ಮೂತಿ ತೊಳೆದುಕೊಂಡು ಬೀಡಾ ಬಾಯಿಗೆ ಹಾಕಿಕೊಂಡು ಹೊರಬಂದ. ದುಖೀ ಗೋಣಿ ಚೀಲ ಹೊತ್ತ ಸ್ಥಿತಿಯಲ್ಲೇ ಒರಗಿಕೊಂಡಿದ್ದ. ಅವನ ಮುಖದ ಮೇಲೆಲ್ಲ ಭೂಸಾ ಹರಡಿಕೊಂಡಿತ್ತು. "ಏಯ್ ದುಖೀಯಾ ಮಲಗಿದಿಯಾ ? ಕಟ್ಟಿಗೆ ಹೆಂಗಿತ್ತೊ

ಹಂಗೇ ಬಿದ್ಕೊಂಡಿದೆ. ಇಷ್ಟೊತ್ತೇನು ಕಡೀತಾ ಇದ್ದೆ ? ಹಿಡಿ ಭೂಸಾ ತುಂಬೋದಕ್ಕೆ ಸಂಜೆ ಮಾಡಿಬಿಟ್ಟೆ. ಈಗ ನೋಡಿದರೆ ಮಲಗಿದಿಯಾ. ಕೊಡಲಿ ಎತ್ಕೋ. ಕಟ್ಟಿಗೆ ಈಗಿಂದೀಗಲೇ ಸೀಳಿ ಹಾಕು. ಇಷ್ಟು ಸಣ್ಣ ಕಟ್ಟಿಗೆ ತುಂಡು ಸೀಳೋಕಾಗಲ್ವೇನೋ? ನೋಡೋ, ನಿನ್ನ ಮಗಳ ಶುಭಕಾರ್ಯಕ್ಕೆ ಮುಹೂರ್ತ ಹುಡುಕೋ ವಿಷಯದಲ್ಲಿ ನಾನೂ ನಿನ್ನ ಹಾಗೇ ನಡಕೊಂಡರೆ ಏನಾಗುತ್ತೆ ಅಂತ ಯೋಚನೆ ಮಾಡಿದಿಯಾ ? ಆಮೇಲೆ ನನ್ನನ್ನ ದೂರಬೇಡ. ಜನ ಹೇಳೋದು ಸರಿಯಾಗೇ ಇದೆ. ಈ ಕೆಳಜಾತಿಯೋರ ಹೊಟ್ಟೆಗೆ ಹಿಟ್ಟು ಸೇರಿಬಿಡ್ತೊ, ಮುಗೀತು ನೀಯತ್ತೇ ಬದಲಾಯಿಸಿಕೊಂಡುಬಿಡ್ತಾರೆ" ದುಖೀ ಮತ್ತೆ ಕೊಡಲಿ ಎತ್ತಿಕೊಂಡ. ಈಗಷ್ಟೇ ಕೆಲ ಹೊತ್ತಿನ ಹಿಂದೆ ಅಂದು ಕೊಂಡಿದ್ದೆಲ್ಲವನ್ನೂ ಮರೆತುಹೋದ. ಹೊಟ್ಟೆ ಬೆನ್ನು ಬೇರೆ ಸೇರಿಕೊಂಡಿತ್ತು. ಬೆಳಿಗ್ಗೆ ಬಹಿರ್ದೆಸೆಗೂ ಹೋಗಿರಲಿಲ್ಲ. ಅದಕ್ಕೆ ಅವಕಾಶವೇ ಇರಲಿಲ್ಲ. ಏಳುವುದಕ್ಕೇ ಸಾಕು ಸಾಕಾಗಿತ್ತು. ಈಗಾದ ಸುಸ್ತಿಗೆ ಜೀವ ಹೋದ ಹಾಗಾಗುತ್ತಿತ್ತು. ಆದರೂ ಸಾವರಿಸಿಕೊಂಡು ಎದ್ದು ನಿಂತ. ಎದುರಿಗೆ ಭಟ್ಟರು ! 'ಮಗಳ ಶುಭಕಾರ್ಯಕ್ಕೆ ಶುಭಮುಹೂರ್ತ ಹುಡುಕುವ ಯೋಚನೆಯನ್ನೇ ಭಟ್ಟರು ಬಿಟ್ಟುಬಿಟ್ಟರೆ ಎಲ್ಲ ಸರ್ವನಾಶ. ಸಂಸಾರದಲ್ಲಿ ಇಷ್ಟು ವರ್ಷ ಕಷ್ಟಪಟ್ಟು ಉಳಿಸಿಕೊಂಡ ಮರ್ಯಾದೆ ಎಲ್ಲ ಮೂರಾಬಟ್ಟೆ. ಈಗ ಇದೆಲ್ಲವೂ ಈ ಭಟ್ಟರು ಹುಡುಕುವ ಶುಭಮುಹೂರ್ತದ ಮೇಲೇ ನಿಂತುಕೊಂಡಿದೆ. ಇದು ಯಾರನ್ನು ಬೇಕಾದರೂ ಕೆಡಿಸೀತು !' ಎಂದೆಲ್ಲ ಕಲ್ಪಿಸಿಕೊಂಡು ಗಾಬರಿಗೊಂಡ.

ಭಟ್ಟ ಈಗ ಇನ್ನಷ್ಟು ಹತ್ತಿರಕ್ಕೇ ಬಂದು ನಿಂತ. "ಹ್ಞೂ ಎತ್ತು, ಹಾಕೋ, ಏಟು ಹಾಕೋ, ಹೊಡಿಯೋ, ನರಸತ್ತವನೇ, ನಿನ್ನ ಕೈಯಲ್ಲಿ ದಮ್ಮೇ ಇಲ್ವಲ್ಲೋ, ಜೋರಾಗಿ ಏಟು ಹಾಕೋ, ಇನ್ನೂ ಜೋರು, ಹ್ಞಾಂ ಹಾಗೆ, ಹಾಗೆ... ಹಾಕೋ ಏಟು ಹಾಕೋ." ಎಂದು ದುಖೀಗೆ ಹುಮ್ಮಸ್ಸು ತುಂಬತೊಡಗಿದ. ಕೊಡಲಿ ಏಟು ಹಾಕಿ ಹಾಕಿ ಸುಸ್ತಾದ ದುಖೀ ಚಣ ಹಾಗೇ ನಿಂತುಬಿಡಲು ನೋಡಿದ. "ನಿಂತೇನು ಯೋಚನೆ ಮಾಡ್ತಿಯೋ. ಏಟು ಹಾಕೋ, ಕಟ್ಟಿಗೆ ಗಂಟು ಸೀಳಬೇಕು ಅಷ್ಟೇ. ಹಾಕೋ, ಇನ್ನೇನು ಗಂಟು ಬಿಚ್ಚಿಕೊಳ್ತಾ ಇದೆ. ಹ್ಞೂ ಹಾಕೋ, ಅಲ್ಲಿ ಹ್ಞಾಂ ಅಲ್ಲಿ ಕೊಡು, ಕೊಡು, ಹ್ಞಾ ಹಂಗೇ ಒಂದು ಕೊಡು, ಹ್ಞಾ ಹಂಗೆ, ಹ್ಞಾಂ ಹಾಕೋ ಜೋರಾಗಿ ಹಾಕೋ" ಎಂದು ಹುರುಪು ಹುಚ್ಚೆದ್ದು ಕುಣಿಯುವಂತೆ ಪ್ರೇರೇಪಿಸತೊಡಗಿದ. ದುಖೀ ಮೈಮೇಲೆ ಖಬರೇ ಇಲ್ಲದವನಂತಾಗಿದ್ದ. ಅದೆಲ್ಲಿಂದ ಜೋಶ್ ಬಂತೋ ಕೊಡಲಿಯಿಂದ ಕಟ್ಟಿಗೆ ಗಂಟಿನ ಮೇಲೆ ಪ್ರಹಾರ ನಡೆಸುತ್ತಲೇ ಇದ್ದ. ಹಸಿವು, ಬಾಯಾರಿಕೆ, ಆಯಾಸ, ನಿತ್ರಾಣ ಎಲ್ಲವೂ ಅವನಿಂದ ಕಾಲು ಕಿತ್ಕೊಂಡು ಓಡಿ ಹೋದಂತಿತ್ತು. ಅವನ ತೋಳ್ಬಲಕ್ಕೆ ಅವನೇ ಬೆಕ್ಕಸ ಬೆರಗಾಗತೊಡಗಿದ್ದ. ಒಂದೊಂದು ಏಟು ವಜ್ರಾಯುಧದಂತೆ ಬೀಳತೊಡಗಿದ್ದವು. ಕಡೆಗೂ ಕಟ್ಟಿಗೆಯ ಗಂಟು ಸೀಳಿಕೊಂಡಿತು. ಜತೆಗೇ ದುಖೀ ಕೈಯಿಂದ ಕೊಡಲಿ ಬೇರ್ಪಟ್ಟಿತು. ದುಖೀ ನೆಲಕ್ಕೆ ಕುಸಿದು ಬಿದ್ದ. ಹಸಿವು, ಬಾಯಾರಿಕೆ ಮತ್ತು ಬಳಲಿಕೆಯಿಂದ ದಣಿದ ದೇಹ ತಕ್ಕ ಜವಾಬನ್ನೇ ಕೊಟ್ಟಿತ್ತು.

"ಏಳೋ, ಹಾಕೋ, ಇನ್ನೊಂದಿಷ್ಟೇ ಜೋರು ಏಟು ಹಾಕೋ. ಸೀಳಿ ಸಣ್ಣ ಸಣ್ಣ ಸೆಕ್ಕೆ ಮಾಡಿ ಹಾಕೋ" ಭಟ್ಟ ಕೂಗುತ್ತಲೇ ಇದ್ದ. ದುಖೀಯಾ ಏಳಲೇಇಲ್ಲ. ಇನ್ನು ಇವನಿಗೆ ಬಲವಂತ ಮಾಡುವುದು ಬೇಡೆಂದುಕೊಂಡ ಭಟ್ಟ ಒಳ ನಡೆದ. ಒಂದೆರಡು ಭಾಂಗ್ ದಮ್ಮು ಎಳೆದ. ಶೌಚಕ್ಕೂ ಹೋಗಿ ಬಂದ. ಸ್ನಾನ ಮಾಡಿದ. ಪುರೋಹಿತರ ಪೋಷಾಕು ತೊಟ್ಟು ಹೊರಕ್ಕೆ ಬಂದ. ದುಖೀ ಇನ್ನೂ ಅದೇ ಕುಸಿದ ಸ್ಥಿತಿಯಲ್ಲಿದ್ದ.

ಭಟ್ಟ : ಏಯ್ ದುಖೀಯಾ, ಇನ್ನೂ ಇಲ್ಲೇ ಬಿದ್ದುಕೊಂಡಿರ್ತಿಯೋ ಹೇಗೆ ? ಏಳೋ ಮನೆಗೆ ಬರ್ತೀನಿ ನಡಿಯೋ. ಎಲ್ಲಾ ವ್ಯವಸ್ಥೆ ಆಗಿದೆ ತಾನೆ ?

ದುಖೀ ಏಳುತ್ತಲೇ ಇಲ್ಲ.

ಭಟ್ಟನಿಗೆ ಶಂಕೆ ಮೂಡತೊಡಗಿತು. ಹತ್ತಿರಕ್ಕೆ ಹೋಗಿ ನೋಡಿದ. ದುಖೀ ದೇಹ ಸೆಟೆದುಕೊಂಡಿತ್ತು. ಗಾಬರಿಗೊಂಡು ಓಡಿದ.

"ದುಖೀಯಾ ಸತ್ತ ಅಂತ ಕಾಣುತ್ತೆ" ಎಂದು ಭಟ್ರಮ್ಮನ ಕಿವಿಯಲ್ಲಿ ಉಸುರಿದ.

ಹಕ್ಕಾ ಬಕ್ಕಾ ಆದಂತಾದ ಭಟ್ರಮ್ಮ, 'ಈಗಷ್ಟೇ ಅವ ಕಟ್ಟಿಗೆ ಸೀಳುತ್ತಿದ್ದನಲ್ಲ !'

ಭಟ್ಟ : ಕಟ್ಟಿಗೆ ಸೀಳ್ತಾ ಸೀಳ್ತಾ ಸತ್ತೇ ಹೋದ. ಈಗೇನು ಮಾಡೋಣ ?

"ಅದಕ್ಕೇನಂತೀಗ. ಚಮ್ಮಾರರಿಗೇಳಿ ಕರೆಸಿದರಾಯ್ತು. ಅವರೇ ಹೆಣಾ ಎತ್ಕೊಂಡು ಹೋಗ್ತಾರೆ" ಎಂದು ಭಟ್ರಮ್ಮ ಶಾಂತಚಿತ್ತದಲ್ಲಿ ಅತ್ಯಂತ ಪ್ರಶಾಂತವಾಗೇ ಹೇಳಿದರು.

ಕ್ಷಣಾರ್ಧದಲ್ಲೇ ಸುದ್ದಿ ಊರ ತುಂಬ ಹರಡಿಕೊಂಡಿತು. ಈ ಊರು ಬ್ರಾಹ್ಮಣರಿಗೆ ಸೇರಿದ್ದು. ಗೊಂಡ ಕುಟುಂಬ ಬಿಟ್ಟರೆ ಮಿಕ್ಕ ನಿವಾಸಿಗಳೆಲ್ಲ ಬ್ರಾಹ್ಮಣರೇ. ಆಗಲೇ ಈ ದಾರಿಯಲ್ಲಿ ಜನ ಸಾಗಿಹೋಗುವುದು ನಿಂತುಹೋಯ್ತು. ನೀರಿನ ಬಾವಿ ಇರೋದು ಇದೇ ಮಾರ್ಗದಲ್ಲಿ. ಜನ ನೀರು ತುಂಬಿಕೊಳ್ಳುವುದಾದರೂ ಹೇಗೆ ? ಚಮ್ಮಾರನ ಹೆಣ ದಾಟಿಕೊಂಡು ಬಾವಿಯತ್ತ ಹೋಗುವವರು ಯಾರು ?

"ಈ ಹೆಣಾ ಎಲ್ಲಾದರೂ ಬಿಸಾಕ್ತಿರೋ ಹೇಗೆ ? ಊರಲ್ಲಿ ನಾವ್ಯಾರೂ ನೀರು ಕುಡಿಯಬಾರದು ಅಂದ್ಕೊಂಡಿದೀರೋ ಹೇಗೆ" ಎಂದು ಕಚ್ಚೆ ಸೀರೆಯ ಮುದುಕಿ ಯೊಬ್ಬಳು ಭಟ್ಟನನ್ನು ಜಬರಿಸತೊಡಗಿದಳು. ಇತ್ತ ಗೊಂಡ ಚಮ್ಮಾರರ ಬೀದಿ ಹೊಕ್ಕ. ಹೆಣ ಎತ್ತೋಕೆ ಯಾರೂ ಹೋಗಬಾರ್ದು. ಪಂಚನಾಮಾ ನಡೆಸೋಕೆ ಪೊಲೀಸರು ಬರ್ತಾರೆ. ಯಾರದೋ ಹುಚ್ಚಾಟಕ್ಕೆ ಬಡವನೊಬ್ಬನ ಹೆಣ ಬೀಳುತ್ತೆ ಅಂದ್ರೆ ಏನು ? ಭಟ್ಟರು ಇದ್ರೆ ಅವ್ರ ಮನೇಲಿ. ಪೌರೋಹಿತ್ಯದ ಪ್ರತಾಪವೇನಿದ್ದರೂ ಅವರ ಮನೆಗಳಲ್ಲಿ. ಯಾರಾದ್ರೂ ಹೆಣ ಎತ್ತಿದ್ರೆ ಸಿಕ್ಹಾಕ್ಕೊಳ್ತೀರಿ ಹುಷಾರ್ ! ಎಂದು ಎಲ್ಲರನ್ನೂ ಎಚ್ಚರಿಸಿದ.

ಇಷ್ಟೆಲ್ಲ ಬೆಳವಣಿಗೆಯ ನಂತರವಷ್ಟೇ ಭಟ್ಟ ಚಮ್ಮಾರರ ಬೀದಿಗೆ ಬರುತ್ತಾನೆ. ಆದರೆ ಹೆಣ ಎತ್ತಲು ಯಾವ ಚಮ್ಮಾರನೂ ಸಿದ್ಧನಿಲ್ಲ. ದುಖೀಯ ಹೆಂಡತಿ ಮತ್ತು ಮಗಳು ಅಳುತ್ತ ಭಟ್ಟನ ಬಳಿಗೆ ಬರುತ್ತಾರೆ. ನೆಲಕ್ಕೆ ಹಣೆ ಜಜ್ಜಿಕೊಂಡು ರೋದಿಸ ತೊಡಗುತ್ತಾರೆ. ಅವರ ಜತೆ ಹತ್ತಾರು ಚಮ್ಮಾರ ಹೆಂಗಸರು ಸೇರಿಕೊಳ್ಳುತ್ತಾರೆ. ಅವರಲ್ಲಿನ ಕೆಲವರು ದುಖೀಯ ಹೆಂಡತಿಯನ್ನು ಸಂತೈಸಲೆತ್ನಿಸುತ್ತಾರೆ. ಆದರೆ ಯಾವೊಬ್ಬ ಚಮ್ಮಾರ ಗಂಡಸೂ ಅಲ್ಲಿಲ್ಲ. ಭಟ್ಟ ಒಂದೇ ಸಮ ಗುಡುಗುತ್ತಾನೆ. ಬೆದರಿಕೆ ಹಾಕಲು ನೋಡುತ್ತಾನೆ. ಕಡೆಗೆ ಸಮಾಧಾನದಿಂದ ವಿನಂತಿ ಮಾಡಿಕೊಳ್ಳ ಲೆತ್ನಿಸುತ್ತಾನೆ. ಆದರೆ ಮೊದಲೇ ಪೊಲೀಸರ ಹೆದರಿಕೆ ಇತ್ತಾದ್ದರಿಂದ ಯಾವ ಚಮ್ಮಾರನೂ ಮುಂದೆ ಬರಲಿಲ್ಲ. ನಿರಾಶೆಗೊಂಡ ಭಟ್ಟ ಅಲ್ಲಿಂದ ಕಾಲ್ಕೀಳುತ್ತಾನೆ.

* * *

ನಡುರಾತ್ರಿ ಸರಿಯುತ್ತ ಬಂತು. ಅಳೋದು, ಕರೆಯೋದು ನಿಲ್ಲುತ್ತಿಲ್ಲ. ಮುಕ್ಕೋಟಿ ದೇವತೆಗಳಿಗೂ ಮಲಗುವುದಕ್ಕೆ ಕಷ್ಟವೆನಿಸತೊಡಗಿದಂತಿತ್ತು ! ಹೆಣ ಎತ್ತುವುದಕ್ಕೆ ಯಾವೊಬ್ಬ ಚಮ್ಮಾರನೂ ಅತ್ತ ಸುಳಿಯುತ್ತಿಲ್ಲ. ಅಲ್ಲಿ ಇರುವವರೆಲ್ಲ ಬ್ರಾಹ್ಮಣರು. ಚಮ್ಮಾರನ ಹೆಣ ಬ್ರಾಹ್ಮಣರು ಹೊರುತ್ತಾರಾ !? ಶಾಸ್ತ್ರ ಪುರಾಣಗಳಲ್ಲಿ ಹೊರಬಾರದು ಅಂತ ಏನಾದರೂ ಪ್ರಸ್ತಾಪ ಇದೆಯೇನು ? ಯಾರಾದರೂ ತೋರಿಸಲಿ ನೋಡೋಣ ?

"ಈ ಮುಂಡೆ ದೆವ್ವಗಳು ನಮ್ಮ ತಲೆನೇ ನೆಕ್ಕುತ್ತಿವೆ. ಇವರ ನಾಲಗೆ ಸೇದ್ಹೋಗ' ಎಂದು ಭಟ್ರಮ್ಮ ಅಲವತ್ತುಕೊಂಡಳು. "ಅಳಲಿ ಬಿಡೇ. ಮಾಟಗಾರ್ತಿಯರು. ಎಷ್ಟೂಂತ ಅಳ್ತಾರೆ. ಅವ ಬದುಕಿದ್ದಾಗ ಕೇಳೋರೇ ಇರಲಿಲ್ಲ. ಈಗ ಸತ್ಹೋದ. ಕೋಲಾಹಲ ಎಬ್ಬಿಸೋದಕ್ಕೆ ಎಲ್ರೂ ಸೇರಿಕೊಂಡುಬಿಟ್ರು" ಎಂದು ಭಟ್ಟ ಗರಂ ಆದ.

ಭಟ್ರಮ್ಮ : ಚಮ್ಮಾರ್ರು ಅಳೋದು ಅಪಶಕುನ.

ಭಟ್ಟ : ಹ್ಞೂಂ. ದೊಡ್ಡ ಅಪಶಕುನ.

ಭಟ್ರಮ್ಮ : ಆಗಲೇ ದುರ್ನಾತ.

ಭಟ್ಟ : ಎಂಥ ಚಮ್ಮಾರರಿವರು ? ಶುದ್ಧ, ಅಶುದ್ಧದ ಕಲ್ಪನೆಯೇನಾದರೂ ಇದೆಯಾ ಇವ್ರಿಗೆ ?

ಭಟ್ರಮ್ಮ : ಪಶ್ಚಾತ್ತಾಪ ಅನ್ನೋದೇನಾದರೂ ಗೊತ್ತಿದೆಯಾ ಇವ್ರಿಗೆ.

ಭಟ್ಟ : ಎಲ್ಲ ಭ್ರಷ್ಟರು.

ರಾತ್ರಿ ಹೇಗೋ ಕಳೆದುಹೋಗಿ ಬೆಳಗಾಗತೊಡಗಿತು. ಯಾವ ಚಮ್ಮಾರನೂ ಅತ್ತ ಸುಳಿಯಲಿಲ್ಲ. ಚಮ್ಮಾರರ ಹೆಂಗಸರು ಅತ್ತು ಅತ್ತು ಸುಸ್ತಾಗಿ ಮರಳಿದ್ದರು. ಹೆಣದ ದುರ್ನಾತ ಹರಡಿಕೊಳ್ಳಲಾರಂಭಿಸಿತ್ತು.

ಭಟ್ಟ ಒಂದು ಹಗ್ಗ ತೆಗೆದುಕೊಂಡ. ಅದನ್ನು ಕುಣಿಕೆಯಂತೆ ಮಾಡಿ ಹೆಣದ ಕಾಲಿನತ್ತ ಎಸೆದ. ಕುಣಿಕೆ ಕಾಲಿಗೆ ಸರಿಯಾಗಿ ಸಿಕ್ಕಿಕೊಂಡಿತು. ಕುಣಿಕೆಯನ್ನು ಜಗ್ಗಿ ಬಿಗಿಗೊಳಿಸಿದ. ಇನ್ನೂ ಕತ್ತಲಿತ್ತು. ಹಗ್ಗದ ಮತ್ತೊಂದು ತುದಿ ಹಿಡಿದುಕೊಂಡ ಭಟ್ಟ, ಹೆಣ ಎಳೆಯಲಾರಂಭಿಸಿದ. ದರದರನೆ ಎಳೆದು ಊರಾಚೆ ಸಾಗಿಸಿದ. ಮನೆಗೆ ವಾಪಸ್ಸಾಗಿ ಸ್ನಾನ ಮಾಡಿದ. ದುರ್ಗಾಸ್ತೋತ್ರ ಪಠಣ ಮಾಡಿದ. ಗಂಗಾಜಲವನ್ನು ಮನೆ ತುಂಬ ಸಿಂಪಡಿಸಿದ.

ಅತ್ತ ಹೆಣಕ್ಕೆ ಹದ್ದು, ಕಾಗೆಗಳು ಮತ್ತು ನಾಯಿಗಳು ಮುಗಿಬಿದ್ದವು. ದುಖೀ ಜೀವನಪೂರ್ತಿ ನಡೆದುಕೊಂಡು ಬಂದ ಶ್ರದ್ಧೆ, ನಂಬಿಕೆ, ಭಕ್ತಿ ಮತ್ತು ಸೇವೆಗೆ ದೊಡ್ಡ ಪುರಸ್ಕಾರ ಸಂದಾಯವಾಗತೊಡಗಿತು.

ಮೂಲ : **ಮುನ್ಷೀ ಪ್ರೇಮಚಂದ್** ಅನುವಾದ : **ಸಾಹಿರ್ ಡಿ. ಆರ್.**
ನಂ. ೧೪, ಜಿ. ಡಿ. ಪಾರ್ಕ್ ಬಡಾವಣೆ, ಬೆಂಗಳೂರು – ೫೬೦ ೦೦೩

**ನಮ್ಮ** ಪರಿಸರ ನಮ್ಮ ಪ್ರಜ್ಞೆಯನ್ನು ಹೇಗೆ ರೂಪಿಸುವುದೊ ಹಾಗೆಯೇ ಸಮಾಜದಲ್ಲಿ ಪ್ರಸ್ತುತವಿರುವ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಟ್ಟುಗಳು ಶ್ರಮಿಕರ ಬದುಕಿನ ಹಕ್ಕು ಮತ್ತು ಸಮಾಜದಲ್ಲಿ ಅವರ ಸ್ಥಾನಮಾನಗಳನ್ನು ನಿರ್ಧರಿಸುತ್ತವೆ. ಸಮಾಜವಾದಿ ವ್ಯವಸ್ಥೆ ದುಡಿಯುವ ವರ್ಗ ಮತ್ತು ಈ ವರ್ಗವನ್ನು ಪ್ರತಿನಿಧಿಸುವ ಸಂಘಟನೆಗಳನ್ನು ಪ್ರಗತಿಶೀಲ ಹಾಗೂ ವಿಕಾಸಶೀಲ ಶಕ್ತಿಗಳನ್ನಾಗಿ ಬೆಳೆಸುವ ಪರಿಕಲ್ಪನೆ ಹೊಂದಿದ್ದರೆ, ಸರ್ವಾಧಿಕಾರಿ ವ್ಯವಸ್ಥೆ ಈ ವರ್ಗವನ್ನು ಮತ್ತು ಅದರ ಸಂಘಟನೆಗಳನ್ನು ದಮನಗೊಳಿಸುವ ಪ್ರವೃತ್ತಿ ಹೊಂದಿರುತ್ತದೆ ಎಂಬುದನ್ನು ನಾವು ಚರಿತ್ರೆಯಿಂದ ಅರಿಯಬಹುದಾದ ಸಂಗತಿ. ಜರ್ಮನಿಯ ಅಡಾಲ್ಫ್ ಹಿಟ್ಲರ್, ಇಟಲಿಯ ಮುಸೋಲಿನಿ, ಸ್ಪೇನ್‌ನ ಫ್ರಾಂಕೋ, ಚಿಲಿಯ ಪಿನೋಶೆ ಹೀಗೆ ಹಲವಾರು ಸರ್ವಾಧಿಕಾರಿಗಳು ಕಾರ್ಮಿಕ ಸಂಘಟನೆಗಳ ಮೇಲೆ ನಿರಂತರ ದಾಳಿ ನಡೆಸಿದ್ದುದನ್ನು ನಾವು ಸ್ಮರಿಸಿಕೊಳ್ಳಬಹುದು. ಆದ ಕಾರಣವೇ ದುಡಿಯುವ ವರ್ಗದ ಎಲ್ಲ ಸಂಘರ್ಷಗಳು ಸಮಾಜವಾದಿ ವ್ಯವಸ್ಥೆಯ ನಿರ್ಮಾಣದ ಗುರಿಯನ್ನು ಮೈಗೂಡಿಸಿಕೊಳ್ಳಬೇಕಾದ್ದು ಅನಿವಾರ್ಯ. ಶ್ರಮಿಕವರ್ಗ ಸಮಾಜ ಪರಿವರ್ತನೆಯ ಹರಿಕಾರನಾಗಬೇಕಾದರೆ ಈ ವರ್ಗಕ್ಕೆ ತನ್ನಲ್ಲಿರುವ ಅಗಾಧಶಕ್ತಿಯ ಪರಿಚಯ ಮತ್ತು ಅದರ ಬಗ್ಗೆ ನಂಬಿಕೆ ಅತ್ಯಗತ್ಯ. ಭಾರತದ ದುಡಿಯುವ ವರ್ಗದ ಚರಿತ್ರೆ ಅನೇಕಾನೇಕ ಅಪ್ರತಿಮ ಸಂಘರ್ಷಗಳನ್ನು ದಾಖಲಿಸಿಕೊಂಡಿದೆ. ಅಸಾಧಾರಣ ರಾಜಕೀಯ ಪ್ರಜ್ಞೆಯನ್ನು ಅಭಿವ್ಯಕ್ತಿಗೊಳಿಸಿದೆ. ಹೋರಾಟಗಳ ಪ್ರತಿಫಲವಾಗಿ ಅನೇಕ ಹಕ್ಕುಗಳನ್ನು ಪಡೆದುಕೊಂಡಿದೆ.



# ಮೇ ದಿನದ ಚಿಂತನೆ

## ಅಸ್ಥಿರ ನೌಕರಿ–ಅನಿಶ್ಚಿತ ಬದುಕು–ಅನನ್ಯ ಹೋರಾಟ

**ವರ್ಗ ಹೋರಾಟಗಳ ಪ್ರಭಾವ**

ದುಡಿಯುವ ವರ್ಗ ಬದುಕಿನ ಹಕ್ಕಿಗಾಗಿ ಈ ಹಿಂದೆ ನಡೆಸಿದ ಹೋರಾಟಗಳು ನ್ಯಾಯಾಲಯಗಳ ಮೇಲೂ ಗಂಭೀರವಾದ ಪ್ರಭಾವ ಬೀರಿದ್ದು ತತ್ಪರಿಣಾಮವಾಗಿ ಸಾಮಾಜಿಕ ಮತ್ತು ಆರ್ಥಿಕ ನ್ಯಾಯದ ತಳಹದಿಯಾಧರಿತ ಅನೇಕ ಪ್ರಗತಿಶೀಲ ತೀರ್ಪುಗಳು ಹೊರಹೊಮ್ಮಿವೆ. ಭಾರತ ಸಂವಿಧಾನದ ಅನುಚ್ಛೇದ ೨೧ರಲ್ಲಿ ಉದ್ಯೋಗ ಭದ್ರತೆ ಅಂತರ್ಗತವಾಗಿರುವ ಅಂಶವೆಂದೂ ಹಾಗೂ ಜೀವ ಸಂರಕ್ಷಣೆಯ ಅವಿಭಾಜ್ಯ ಹಕ್ಕೆಂದೂ ಸರ್ವೋಚ್ಚ ನ್ಯಾಯಾಲಯ ತನ್ನ ತೀರ್ಪೊಂದರಲ್ಲಿ ಉದ್ಗರಿಸಿದೆ. ಜೀವಸಂರಕ್ಷಣೆಯ ಹಕ್ಕೆಂದರೆ ಅರ್ಥಪೂರ್ಣ ಮತ್ತು ಗೌರವಯುತ ಬದುಕಿನ ಹಕ್ಕೆಂದು ೧೯೭೮ರ ಮನೇಕ ಗಾಂಧಿ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಸಂವಿಧಾನ ಅನುಚ್ಛೇದ ೨೧ರ ವ್ಯಾಪ್ತಿಯನ್ನು ಅರ್ಥೈಸಿದ್ದನ್ನು ಸ್ಮರಿಸಬಹುದು. ಸಾಮಾಜಿಕ ನ್ಯಾಯ ಮೂಲಭೂತ ಹಕ್ಕುಗಳಲ್ಲೊಂದು ಎಂಬುದನ್ನು ಸರ್ವೋಚ್ಚ ನ್ಯಾಯಾಲಯ ಸಾರಿದೆ. ವಿಶಾಲ ಅರ್ಥದಲ್ಲಿ ನೋಡುವುದಾದರೆ ಸಮಾನತೆ ಮತ್ತು ಶೋಷಿತರ ಸಬಲೀಕರಣವೇ ಸಾಮಾಜಿಕ ಮತ್ತು ಆರ್ಥಿಕ ನ್ಯಾಯದ ಪ್ರಮುಖ ಉದ್ದೇಶಗಳು. ಸಂವಿಧಾನದ ಭಾಗ - IIIರ ಮೂಲಭೂತ ಹಕ್ಕುಗಳು ಮತ್ತು ಭಾಗ - IVರ ರಾಜ್ಯ ನೀತಿಯ ನಿರ್ದೇಶನ ತತ್ವಗಳು ಸಾಮಾಜಿಕ ನ್ಯಾಯ ರಥದ ಎರಡು ಚಕ್ರಗಳೆಂದು ವ್ಯಾಖ್ಯಾನಿಸಲಾಗಿದೆ. ಮೂಲಭೂತ ಹಕ್ಕುಗಳು, ನಿರ್ದೇಶನ ತತ್ವಗಳು ಮತ್ತು ಸಂವಿಧಾನದ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿರುವ ಸಮಾಜವಾದಿ ಗಣರಾಜ್ಯ ಸಾಮಾಜಿಕ ನ್ಯಾಯವಿತರಣೆಯ ಪ್ರಕ್ರಿಯೆಯಲ್ಲಿ ಸರ್ವೋಚ್ಚ ನ್ಯಾಯಾಲಯ ಅಳವಡಿಸಿಕೊಂಡ ಸಾಧನಗಳೆಂಬುದನ್ನು ಗಮನಿಸಬಹುದು. ಪ್ರಜ್ಞಾವಂತ ಕಾರ್ಮಿಕ ವರ್ಗ ಮತ್ತು ಅದು ತನ್ನ ಹಕ್ಕುಗಳಿಗಾಗಿ ನಡೆಸಿದ ಸಂಘರ್ಷಗಳು ಹಾಗೆಯೇ ಸ್ವಾತಂತ್ರ್ಯಾನಂತರ ಸುಮಾರು ಮೂರು ದಶಕಗಳಲ್ಲಿ ಭಾರತ ಸರ್ಕಾರ ಅನುಸರಿಸಿದ ಆರ್ಥಿಕ ನೀತಿಗಳು ನ್ಯಾಯಾಂಗದ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದನ್ನು ಕಾಣಬಹುದು.

**ಆಳುವ ವರ್ಗದ ಬದಲಾದ ದೃಷ್ಟಿಕೋನ**

೧೯೭೭ರಲ್ಲಿ ತುರ್ತು ಪರಿಸ್ಥಿತಿ ಗತಿಸಿದ ನಂತರ ಇಂದಿರಾ ಗಾಂಧಿಯವರ ಕಾಂಗ್ರೆಸ್ ಪಕ್ಷ ಲೋಕಸಭಾ ಚುನಾವಣೆಯಲ್ಲಿ ಸೋತು, ನಂತರ ಅಧಿಕಾರಕ್ಕೇರಿದ ಜನತಾ ಪಕ್ಷ ಅಲ್ಪಕಾಲದಲ್ಲೇ ಕುಸಿದ ನಂತರ ೧೯೮೦ರಲ್ಲಿ ಮತ್ತೆ ಅಧಿಕಾರದ ಗದ್ದುಗೆ ಏರಿದ ಕಾಂಗ್ರೆಸ್ ಪಕ್ಷ ಅಂದಿನವರೆಗೆ ಅನುಸರಿಸಿಕೊಂಡು ಬಂದಿದ್ದ ಆರ್ಥಿಕ ನೀತಿಗಳನ್ನು ಏರುಪೇರು ಮಾಡಿ ಖಾಸಗಿ ಮತ್ತು ವಿದೇಶಿ ಬಂಡವಾಳಕ್ಕೆ ನಂತರದ ವರ್ಷಗಳಲ್ಲಿ ಹೆಚ್ಚು ಹೆಚ್ಚು ಉತ್ತೇಜನ ಮತ್ತು ಪ್ರೋತ್ಸಾಹ ಕೊಟ್ಟದ್ದಕ್ಕೆ ಸಾಕ್ಷಿಗಳಿವೆ. ಜೊತೆಗೆ ಕಾರ್ಮಿಕ ವರ್ಗದ ಮೇಲೆ ನಡೆಸಿದ ದಾಳಿಗಳಿಗೂ ಸಾಕ್ಷಿಗಳಿವೆ. ಬೆಂಗಳೂರಿನ ಕೇಂದ್ರ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳ ಸುಮಾರು ೧,೨೫,೦೦೦ ಕಾರ್ಮಿಕರು ದೀರ್ಘಾವಧಿ ಮುಷ್ಕರದಲ್ಲಿ ತೊಡಗಿದ್ದ ಸಂದರ್ಭದಲ್ಲಿ ಬೆಂಗಳೂರಿಗೆ ಆಗಮಿಸಿದ್ದ ಪ್ರಧಾನಮಂತ್ರಿ ಇಂದಿರಾ ಗಾಂಧಿ ಕಾರ್ಮಿಕ ನಾಯಕರೊಂದಿಗೆ ಮಾತುಕತೆ ನಡೆಸುವ ಸೌಜನ್ಯವನ್ನೂ ತೋರದಿದ್ದುದು ಮತ್ತು ಅದೇ ಸಮಯದಲ್ಲಿ ಮುಂಬಯಿಯ ೬೩ ಗಿರಣಿಗಳ ಸುಮಾರು ೨.೫ ಲಕ್ಷ ಕಾರ್ಮಿಕರ ದೀರ್ಘಾವಧಿ ಮುಷ್ಕರದ ಬಗ್ಗೆ ಸರಕಾರಗಳು ತಾಳಿದ ಅನಾದರಣೆ ಕೇಂದ್ರ ಸರ್ಕಾರದ ಬದಲಾದ ನೀತಿ ಮತ್ತು ಧೋರಣೆಗಳಿಗೆ ನಿದರ್ಶನವಾಗಿತ್ತು. ಕೇಂದ್ರ ಸರ್ಕಾರದ ಕಾರ್ಮಿಕ ವಿರೋಧಿ ನಿಲುವು ೧೯೮೦ರ ನಂತರ ಸ್ಪಷ್ಟವಾಗಿ ಗೋಚರಗೊಂಡಿತ್ತು.

**ಜಾಗತೀಕರಣ – ಉದ್ಯೋಗ ನಾಶ**

ಇಂದಿರಾ ಗಾಂಧಿ ಹತ್ಯೆಯ ನಂತರ ಅಧಿಕಾರಕ್ಕೆ ಬಂದ ರಾಜೀವ್ ಗಾಂಧಿ ಮತ್ತು ನರಸಿಂಹರಾವ್ ಸರ್ಕಾರಗಳೂ ಕೂಡ ಬಂಡವಳಿಗರ ಪರ ಮತ್ತು

**ಮುರಳೀಧರ್ ಚಿಕ್ಕಮಗಳೂರು**

ಕಾರ್ಮಿಕ – ವಿರೋಧಿ ನೀತಿಗಳನ್ನು ಮುಂದುವರಿಸಿದ್ದು ಮಾತ್ರವಲ್ಲ, ಅವುಗಳನ್ನು ತೀವ್ರಗೊಳಿಸಿದ್ದನ್ನು ಕಾಣಬಹುದು. ೧೯೯೨ರ ಬಂಡವಾಳಶಾಹಿ ಜಾಗತೀಕರಣದ ಪ್ರಕ್ರಿಯೆಗಳು ಕಾರ್ಮಿಕರ ಬದುಕನ್ನು ಅನಿಶ್ಚಿತಗೊಳಿಸಿತ್ತು. ಮುಕ್ತ ಮಾರುಕಟ್ಟೆ ಮುಕ್ತ ಸುಲಿಗೆಗೆ ಅನುವು ಮಾಡಿಕೊಟ್ಟಿತ್ತು. ವಿದೇಶಿ ಕಂಪನಿಗಳು ಭಾರತದಲ್ಲಿ ಯಥೇಚ್ಛ ಬಂಡವಾಳ ಹೂಡಿದರೂ ಅದಕ್ಕನುಗುಣವಾಗಿ ಉದ್ಯೋಗಗಳು ಸೃಷ್ಟಿಯಾಗಲಿಲ್ಲ. ಕಾರಣ ವಿದೇಶಿ ಕಂಪನಿಗಳು ತಮ್ಮೊಡನೆ ಹೊತ್ತು ತಂದಿದ್ದ ಆಧುನಿಕ ತಂತ್ರಜ್ಞಾನ. ಅಂತರರಾಷ್ಟ್ರೀಯ ಕಂಪನಿಗಳೊಡನೆ ಪೈಪೋಟಿ ನಡೆಸಬೇಕಾದ ಪರಿಸ್ಥಿತಿಯಲ್ಲಿ ದೇಶೀಯ ಕಂಪನಿಗಳೂ ಕೂಡ ಲಾಭದ ದೃಷ್ಟಿಯಿಂದ ಆಧುನಿಕ ತಂತ್ರಜ್ಞಾನದ ಮೊರೆ ಹೋಗಬೇಕಾಗಿ ಲಕ್ಷಾಂತರ ಕಾರ್ಮಿಕರು ಉದ್ಯೋಗಹೀನರಾದದ್ದು ಜಾಗತೀಕರಣದ ದುಷ್ಪರಿಣಾಮಗಳ ಸೂಚಕವಾಗಿತ್ತು. ಕೋಟಿ ಉದ್ಯೋಗಗಳು ನಾಶವಾದ ಸಂದರ್ಭದಲ್ಲಿ ಕೋಟಿ ಉದ್ಯೋಗಗಳನ್ನು ಸೃಷ್ಟಿಸುತ್ತೇವೆಂದು ಭಾರತೀಯ ಜನತಾ ಪಕ್ಷದ ನೇತಾರ ಮತ್ತು ಅಂದಿನ ಪ್ರಧಾನಮಂತ್ರಿ ಅಟಲ್‌ಬಿಹಾರಿ ವಾಜಪೇಯಿ ನೀಡಿದ ಹೇಳಿಕೆ ಹಾಸ್ಯಾಸ್ಪದವಾಗಿತ್ತು.

**ಕಾರ್ಮಿಕ ಹಕ್ಕುಗಳ ಮೇಲೆ ದಾಳಿ**

ಭಾರತ ದೇಶದ ಕಾರ್ಮಿಕ ಕಾಯ್ದೆಗಳು ಕೈಗಾರಿಕೆಗಳ ಅಭಿವೃದ್ಧಿಗೆ ಮತ್ತು ವಿದೇಶಿ ಬಂಡವಾಳ ಹೂಡಿಕೆಗೆ ಪ್ರತಿಕೂಲವಾಗಿವೆಯೆಂದು ವಿದೇಶಿ ಮತ್ತು ದೇಶೀಯ ಬಂಡವಳಿಗರ ಒಕ್ಕೊರಲಿನ ಗದರಿಕೆಗೆ ಬೆದರಿದ ಅಟಲ್‌ಬಿಹಾರಿ ವಾಜಪೇಯಿ ಸರ್ಕಾರ ಕಾರ್ಮಿಕ ಕಾನೂನುಗಳನ್ನು ಸುಧಾರಣೆಯ ಸೋಗಿನಲ್ಲಿ ನಿಷ್ಕ್ರಿಯಗೊಳಿಸಲು ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ ರಚಿಸಿತು. ಈ ಆಯೋಗದ ರಚನೆಯೇ ವಾದಗ್ರಸ್ತವಾಗಿತ್ತು. ಆದರೂ ಕೂಡ ಈ ಆಯೋಗ ಮಾಲೀಕರ ಬಹುಪಾಲು ಬೇಡಿಕೆಗಳನ್ನು ಒಪ್ಪಿ ತನ್ನ ವರದಿ ನೀಡಿತ್ತು. ಬಂಡವಳಿಗರ ಪ್ರಮುಖ ಬೇಡಿಕೆಗಳಾದ ಬೇಕಾದಾಗ ಕೆಲಸಕ್ಕೆ ತೆಗೆದುಕೊಳ್ಳುವ ಮತ್ತು ಬೇಡದಿದ್ದಾಗ ಕೆಲಸದಿಂದ ತೆಗೆಯುವ ಹಕ್ಕು, ಮುಷ್ಕರ ಪೂರ್ವ ರಹಸ್ಯ ಮತದಾನದ ಅಗತ್ಯ, ಕಾರ್ಮಿಕರ ಸೇವಾ ನಿಯಮಗಳನ್ನು ಯಾವುದೇ ಪೂರ್ವ ಸೂಚನೆ ನೀಡದೆ ಬದಲಾಯಿಸುವ ಅಧಿಕಾರ, ಕಾರ್ಖಾನೆಗಳನ್ನು ಮುಚ್ಚುವ ಅನಿರ್ಬಂಧಿತ ಅಧಿಕಾರ ಇತ್ಯಾದಿಗಳನ್ನು ಕಾರ್ಮಿಕ ಆಯೋಗ ಒಪ್ಪಿಕೊಂಡಿತ್ತು. ವಾಜಪೇಯಿ ಸರ್ಕಾರ ಈ ಮಧ್ಯೆ ಕೆಲವು ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತರುವ ಪ್ರಯತ್ನವನ್ನೂ ನಡೆಸಿತ್ತು. ಒಟ್ಟಾರೆ ಅಂತರರಾಷ್ಟ್ರೀಯ ಮತ್ತು ದೇಶೀಯ ಬಂಡವಳಿಗರಿಗೆ ಕಾರ್ಮಿಕ ಶೋಷಣೆಯ ಎಲ್ಲ ಹಾದಿಗಳನ್ನು ಸುಗಮಗೊಳಿಸುವ ಎಲ್ಲ ಪ್ರಯತ್ನಗಳನ್ನು ವಾಜಪೇಯಿ ಸರ್ಕಾರ ಕೈಗೊಂಡಿತ್ತು. ಆದರೆ ರಾಷ್ಟ್ರೀಯ ಕಾರ್ಮಿಕ ಸಂಘಟನೆಗಳ ತೀವ್ರ ವಿರೋಧದಿಂದಾಗಿ ಎನ್.ಡಿ.ಎ. ಸರ್ಕಾರಕ್ಕೆ ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗಲಿಲ್ಲ. ಆಕ್ರೋಶಗೊಂಡಿದ್ದ ಕಾರ್ಮಿಕರು ೨೦೦೪ರ ಫೆಬ್ರವರಿ ತಿಂಗಳಲ್ಲಿ ನಡೆಸಿದ ಸಾರ್ವತ್ರಿಕ ಮುಷ್ಕರ ಎನ್.ಡಿ.ಎ. ಸರ್ಕಾರದ ಅಂತ್ಯದ ಘೋಷಣೆಯಾಗಿತ್ತು. ಬಹಳ ವರ್ಷಗಳ ನಂತರ ಕಾರ್ಮಿಕ ವರ್ಗ ತನ್ನ ಶಕ್ತಿಯನ್ನು ಪ್ರದರ್ಶಿಸಿತ್ತು.

**ಐ.ಟಿ–ಬಿ.ಟಿ ಸುಲಿಗೆಯ ಬೀಡು**

೧೯೯೦ರ ದಶಕದಲ್ಲಿ ಬೃಹತ್ತಾಗಿ ಬೆಳೆದ ಮಾಹಿತಿ ತಂತ್ರಜ್ಞಾನ ಉದ್ದಿಮೆ ಉದ್ಯೋಗದ ಸ್ವರೂಪವನ್ನೇ ಬದಲಾಯಿಸಿತು. ವಿದೇಶಿ ವಿನಿಮಯಕ್ಕೆ ಈ ಉದ್ದಿಮೆಯ ಕೊಡುಗೆಯಿಂದಾಗಿ ಸರ್ಕಾರಗಳು ಈ ಉದ್ದಿಮೆಯ ಧಣಿಗಳ ತಾಳಕ್ಕೆ ಕುಣಿಯಲು ಪ್ರಾರಂಭಿಸಿದವು. ಇವರು ಸರ್ಕಾರಗಳಿಂದ ಕೇಳಿದಷ್ಟು ಭೂಮಿ, ಸುಂಕ ರಿಯಾಯಿತಿ, ತೆರಿಗೆ ಕಡಿತ ಹೀಗೆ ಹಲವಾರು ಸೌಲಭ್ಯಗಳನ್ನು ಪಡೆದು ಸಹಸ್ರಾರು ಕೋಟಿ ಲಾಭ ಗಳಿಸಿದರು. ಅಷ್ಟೇ ಅಲ್ಲದೆ ಅನೇಕ ಕಾರ್ಮಿಕ ಕಾನೂನುಗಳ ಅನ್ವಯದಿಂದ ವಿನಾಯಿತಿ ಪಡೆದರು. ಹಾಗಾಗಿ ಮಾಹಿತಿ ತಂತ್ರಜ್ಞಾನ ಉದ್ದಿಮೆಗಳಲ್ಲಿ ಉದ್ಯೋಗಿಗಳನ್ನು ಯಾವ ಕಾರಣವನ್ನೂ ಕೊಡದೆ ಯಾರ ಮುಲಾಜೂ ಇಲ್ಲದೆ ಕೆಲಸದಿಂದ ತೆಗೆಯುವ ಅಧಿಕಾರವನ್ನು ಸ್ವಯಂ ಸೃಷ್ಟಿಸಿಕೊಂಡು ನೂತನ ನಿರಂಕುಶ ಮಹಾರಾಜರಾಗಿ ಮೆರೆಯುತ್ತಿದ್ದಾರೆ. ಇನ್ಫೋಸಿಸ್ ಕಂಪನಿಯಲ್ಲಿದ್ದ ನಂದನ್ ನಿಲೇಕಣಿಯ ಒಟ್ಟು ಆಸ್ತಿ ೭,೭೦೦ ಕೋಟಿ ರೂಪಾಯಿಗಳೆಂದು ಬಹಿರಂಗಗೊಂಡಾಗ ಮಾಹಿತಿ ತಂತ್ರಜ್ಞಾನದ ಉದ್ದಿಮೆದಾರರು ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆಗಳಿಂದ ದೋಚಿಕೊಂಡ ಲಾಭದ ಪರಿಚಯವಾಗುತ್ತದೆ. ಮಾಹಿತಿ ತಂತ್ರಜ್ಞಾನದ ಉದ್ದಿಮೆಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳಿಗೆ ಕೆಲಸದ ಭದ್ರತೆಯಿಲ್ಲ, ನಿರ್ದಿಷ್ಟ ಕೆಲಸದ ಅವಧಿಯಿಲ್ಲ, ಕಾರ್ಮಿಕ ಅಧಿಕಾರಿಗಳಿಗೆ ದೂರು ನೀಡುವಂತಿಲ್ಲ, ಮಹಿಳಾ ನೌಕರರ ಮೇಲೆ ನಡೆಯುವ ಲೈಂಗಿಕ ಕಿರುಕುಳ ಬಯಲಾಗುವುದಿಲ್ಲ. ಒಟ್ಟಾರೆ ಮಾಹಿತಿ ತಂತ್ರಜ್ಞಾನ ಉದ್ದಿಮೆ ಸರ್ಕಾರಗಳ ಸಹಕಾರದಿಂದ ಭಾರತದಲ್ಲಿನ ವಿಶೇಷ ಸುಲಿಗೆಯ ವಲಯವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಮಿಕ್ಕೆಲ್ಲ ಉದ್ಯಮದ ಮಾಲೀಕರಿಗೆ ಈಗ ಇದು ಮಾದರಿ ಹಿರಿಯಕ್ಕ. ಈ ಉದ್ದಿಮೆಯ ಅನಿಷ್ಟ ಚಾಳಿ ಎಲ್ಲೆಡೆಯೂ ಹಬ್ಬಿ ದೇಶದಲ್ಲಿನ ಕೈಗಾರಿಕಾ ಬಾಂಧವ್ಯ ಸಮತೋಲನ ಕಳೆದುಕೊಂಡಿದೆ.

**ಅಸ್ಥಿರ ಉದ್ಯೋಗ**

ಕಾರ್ಮಿಕ ಕಾನೂನುಗಳು ತಮಗೆ ಅನುಕೂಲಕರವಾಗಿ ತಿದ್ದುಪಡಿಯಾಗಬೇಕೆಂಬುದು ವಿದೇಶಿ ಮತ್ತು ಸ್ವದೇಶಿ ಮಾಲೀಕ ವರ್ಗದ ಒಕ್ಕೊರಲಿನ ಬೇಡಿಕೆ. ಆದರೆ ತಿದ್ದುಪಡಿಯಾಗದಿದ್ದರೇನು ? ಈ ದೇಶದ ಬಂಡವಳಿಗರಿಗೆ ಕಾನೂನುಗಳನ್ನು ಪರಿಪಾಲಿಸುವುದಕ್ಕಿಂತ ಹೆಚ್ಚಾಗಿ ಅವುಗಳನ್ನು ಉಲ್ಲಂಘಿಸುವುದೇ ದೊಡ್ಡ ಹವ್ಯಾಸ. ಅಡ್ಡದಾರಿಯೇ ಇವರಿಗೆ ರಾಜಮಾರ್ಗ. ಲಾಭ ದಾಹ ಕಾಮದಾಹದ ಪರಿಯೆ. ಲಜ್ಜೆಗೆ ಜಾಗವಿಲ್ಲ. ಇರುವ ಖಾಯಂ ಕಾರ್ಮಿಕರನ್ನು ಸ್ವಯಂ ನಿವೃತ್ತಿ ಯೋಜನೆಯ ಹೆಸರಿನಲ್ಲಿ ಹೊರಹಾಕುವುದು, ಈ ರೀತಿ ಹೊರಹೋಗದೆ ಉಳಿದ ಅಲ್ಪಸ್ವಲ್ಪ ಕಾರ್ಮಿಕರನ್ನು ಸಂಪ್ರೀತಗೊಳಿಸಿ, ಅವರನ್ನು ತಮ್ಮ ನೀತಿಗಳಲ್ಲಿ ಅಂತರ್ಗತಗೊಳಿಸುವುದು, ನಂತರ ಖಾಯಂ ಕೆಲಸಗಳಿಗೆ ಗುತ್ತಿಗೆ ಕಾರ್ಮಿಕರನ್ನು ನೇಮಿಸಿಕೊಳ್ಳುವುದು ಅಥವಾ ಖಾಯಂ ಕೆಲಸವನ್ನೇ ಹೊರ ಗುತ್ತಿಗೆ ಕೊಡುವುದು ಕಾರ್ಮಿಕ ಶೋಷಣೆಯ ಹೊಸ ಅವತಾರ.






# ಹುಲಿಯ ನೆತ್ತಿಯ ಮೇಲೆ ನವಿಲು



ಸಾಕು ಮಾರಾಯಾ ಸಾಕು
ನಿನ್ನ ಜನ ನಿನ್ನಂತೆ, ನಿನಗಿಂತ
ಒಂದಂಗುಲ ಮುಂದೆ ನಡೆವುದ ಕಂಡು
ಹಲ್ಲು ಮಸೆವುದು ಸಾಕು !
ಜಡಬಂಡೆಯ ಬದಿಯಲ್ಲೆ
ಹರಿದ ತಿಳಿಜಲ ಕುಡಿದು ತಣಿವರ ಕಂಡು
ಕುದಿಯುವುದು ಸಾಕು !
ಚೋರ ಚಂದ್ರನ ದೋಸ್ತಿಯ ಬಲದಿಂದ
ಸೂರ್ಯಪ್ರಭೆಯನು ಕೆಣಕಿ
ಕಡುಬಿಸಿಲಿನ ತಾಪದಲಿ
ಮೈಮನ ಸುಡುವ ಸಂತಾಪದಲಿ
ನಮಗಾಗದವರೆದೆಗೆ
ಕೊಳ್ಳಿಯಿಡುವುದು ಸಾಕೇ ಸಾಕು !

* * *

ಕಾಡಡವಿಯೊಳಗಿನ್ನು ತನಗೆ ಆಸರೆಯಿರದೆ
ನಾಗರಿಕ ನೆಲೆಯನ್ನರಸುತ ಬರುವ
ಹುಲಿಯ ನೆತ್ತಿಯ ಮೇಲೆ
ನವಿಲು ಕುಣಿಯುವ ಕಾಲ
ಬಂದೇ ಬರಬಹುದೆಂದು ಬುವಿಯು ಕಾತರಿಸಿರಲು
ಹಾವುಗಳ ವಿಷದಿಂದ ಸತ್ತವರ ಬದುಕಿಸುವ
ಬದುಕಿದವರೆದೆಯಿಂದ ದ್ವೇಷದ ವಿಷ ಕರಗಿಸುವ
ನಾಳೆಯೆಂಬುವ ನೆಲವು ಹಸಿರೊಡೆದು ನಿಲ್ಲುವೊಲು
ಪ್ರೀತಿಯೆಂಬುವ ಪ್ರಾಣವಾಯುವನೆ ಪಸರಿಸುವ
ಸಂಕಲ್ಪ ಸಾಧಿಸುವ ಗುರಿ ನಮ್ಮದಾಗಿರಲಿ
ಸಾಕಿನ್ನು ಸಾಕಪ್ಪ
ಬಾರಿಸುವುದೇ ಸಾಕು ಒಡಕು ಮುರಲಿ !

**ಬಿ. ಎ. ಸನದಿ**
'ಮಿಲನ', ಸಾಮಿಲ್ ಎದುರಿಗೆ, ಹೆರವಟ್ಟಾ, ಕುಮಟಾ (ಉ.ಕ.)

### ಅನಿಶ್ಚಿತ ಬದುಕು

ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು ಮತ್ತು ವಾಣಿಜ್ಯೋದ್ಯಮಿಗಳು ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆಗಳಿಂದಾಗಿ ಲಕ್ಷಾಂತರ ಉದ್ಯೋಗಗಳು ಸೃಷ್ಟಿಯಾಗಿವೆಯೆಂದು ಡಂಗುರ ಹೊಡೆಯುತ್ತಿದ್ದಾರೆ. ಆದರೆ ಇಂದು ಉದ್ದಿಮೆಗಳಲ್ಲಿ ಸೃಷ್ಟಿಯಾಗುತ್ತಿರುವುದು ಅಸ್ಥಿರ ಗುತ್ತಿಗೆ ಕೆಲಸಗಳು. ಖಾಸಗೀ ಕ್ಷೇತ್ರದ ಉದ್ದಿಮೆಗಳಲ್ಲಿ ೪೫% ಕಾರ್ಮಿಕರು ಗುತ್ತಿಗೆ ಕಾರ್ಮಿಕರು. ಸಾರ್ವಜನಿಕ ಕ್ಷೇತ್ರ ಮತ್ತು ಸರ್ಕಾರಿ ಕ್ಷೇತ್ರದ ಉದ್ದಿಮೆಗಳಲ್ಲಿ ಸುಮಾರು ೩೨% ಕಾರ್ಮಿಕರು ಗುತ್ತಿಗೆ ಆಧಾರದ ಕೆಲಸಗಾರರು. ಅಂದರೆ ಗುತ್ತಿಗೆ ಕಾರ್ಮಿಕ ಪದ್ಧತಿ ಅಂಟು ಜಾಡ್ಯದಂತೆ ಎಲ್ಲೆಡೆಯೂ ಹಬ್ಬುತ್ತಿದೆ. ಮಾಹಿತಿ ತಂತ್ರಜ್ಞಾನ ಉದ್ದಿಮೆಯಲ್ಲಿ ಈ ಪದ್ಧತಿ ಬೇರೂರಿಬಿಟ್ಟಿದೆ. ಉದ್ಯೋಗ ಭದ್ರತೆ ಇಲ್ಲದ ಗುತ್ತಿಗೆ ಕಾರ್ಮಿಕರು ಆರ್ಥಿಕ ಶೋಷಣೆಯನ್ನೂ ಅನುಭವಿಸುತ್ತಿದ್ದಾರೆ. ಒಂದು ವರದಿಯ ಪ್ರಕಾರ ದೇಶದಲ್ಲಿರುವ ಗುತ್ತಿಗೆ ಕಾರ್ಮಿಕರ ಪೈಕಿ ೩೦% ಕಾರ್ಮಿಕರಿಗೆ ಸರ್ಕಾರ ನಿಗದಿಪಡಿಸಿದ ಕನಿಷ್ಠ ವೇತನವೂ ದೊರಕುತ್ತಿಲ್ಲ. ಇವರಿಗೆ ಯಾವುದೇ ಸಾಮಾಜಿಕ ಭದ್ರತೆಯಿಲ್ಲ. ಖಾಯಂ ಕೆಲಸಗಳನ್ನು ಖಾಯಂ ಕಾರ್ಮಿಕರೊಡಗೂಡಿ ದಶಕಗಳ ಕಾಲ ನಿರಂತರ ದುಡಿದರೂ ಇವರು ಖಾಯಂ ಗುತ್ತಿಗೆ ಕಾರ್ಮಿಕರೇ ಹೊರತು ಕಂಪನಿಯ ಖಾಯಂ ಕೆಲಸಗಾರರಾಗುವುದೇ ಇಲ್ಲ. ಗುತ್ತಿಗೆ ಕಾರ್ಮಿಕ ಪದ್ಧತಿ ವ್ಯಾಪಕವಾಗಿ ಹರಡುತ್ತಿದ್ದಂತೆಯೆ ಅನೇಕ ಮಾನವ ಸಂಪನ್ಮೂಲ ಕಂಪನಿಗಳು ಅಣಬೆಗಳಂತೆ ಬೆಳೆದುನಿಂತಿವೆ. ಇವು ಚೆನ್ನಾಗಿ ಸಿಂಗರಿಸಿಕೊಂಡು ಆಕರ್ಷಕವಾಗಿ ಕಾಣುವ ಗುತ್ತಿಗೆದಾರರು. ಈ ಕಂಪನಿಗಳ ಕೆಲಸವೆಂದರೆ ಉದ್ದಿಮೆಗಳಿಗೆ ಗುತ್ತಿಗೆ ಆಧಾರದ ಮೇಲೆ ಮಾನವ ಸಂಪನ್ಮೂಲ ಒದಗಿಸುವುದು. ಉದ್ದಿಮೆಗಳು ಕೆಲಸಗಾರರು ಬೇಡ ಎಂದಾಗ ಅವರನ್ನು ವಾಪಸ್ಸು ಕರೆಸಿ ಕೆಲಸದಿಂದ ವಿಮುಕ್ತಿಗೊಳಿಸುವುದು ಈ ಮಾನವ ಸಂಪನ್ಮೂಲ ಕಂಪನಿಗಳ ದಿನನಿತ್ಯದ ಕಾಯಕ. ಇಂತಹ ಕಂಪನಿಗಳ ವಾರ್ಷಿಕ ವಹಿವಾಟು ೨೨,೮೦೦ ಕೋಟಿ ರೂಪಾಯಿಗಳೆಂದೂ ಮತ್ತು ಈ ಕಂಪನಿಗಳ ವಾರ್ಷಿಕ ಬೆಳವಣಿಗೆಯ ಪ್ರಮಾಣ ೨೧% ಎಂದೂ ವರದಿಯಾಗಿದೆ. ಈ ಎಲ್ಲ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಹೊರಬೀಳುವ ಭಯಾನಕ ವಸ್ತುಸತ್ಯವೆಂದರೆ ಅಳಿದುಳಿದಿರುವ ಖಾಯಂ ಕೆಲಸಗಾರರು ಇನ್ನು ಕೆಲವೇ ದಿನಗಳಲ್ಲಿ ಹೊರಬಂದು ಇಡೀ ಉದ್ಯೋಗ ವ್ಯವಸ್ಥೆ ಕೇವಲ ಗುತ್ತಿಗೆಮಯವಾಗುವುದು, ಸ್ಥಿರ ಕಾರ್ಮಿಕರನ್ನು ಅಸ್ಥಿರ ಗುತ್ತಿಗೆ ಕಾರ್ಮಿಕರಿಂದ ಪಲ್ಲಟಗೊಳಿಸುವುದು. ಈ ವ್ಯವಸ್ಥೆಯನ್ನು ಸರ್ಕಾರಗಳ ಸಹಕಾರದಿಂದ ಬಂಡವಾಳಶಾಹಿ ವರ್ಗ ಯಶಸ್ವಿಯಾಗಿ ಅನಾವರಣಗೊಳಿಸಿದೆ.

### ಅಶಕ್ತ ಕಾಯ್ದೆ

ಗುತ್ತಿಗೆ ಕಾರ್ಮಿಕ ಪದ್ಧತಿ ನಮ್ಮ ದೇಶದಲ್ಲಿ ಬಹಳ ಹಿಂದಿನಿಂದಲೇ ಪ್ರಚಲಿತವಾಗಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಅದು ಉದ್ಯೋಗ ವ್ಯವಸ್ಥೆಯ ಪ್ರಮುಖ ಭಾಗವಾಗಿ ಬೆಳೆದಿರುವುದು ಕಾರ್ಮಿಕ ವರ್ಗಕ್ಕೆ ಆತಂಕ ತರುವಂತಹದ್ದು. ಭಾರತದ

ಸರ್ವೋಚ್ಚ ನ್ಯಾಯಾಲಯ ಗುತ್ತಿಗೆ ಕಾರ್ಮಿಕ ಪದ್ಧತಿ ಒಂದು ಅನಿಷ್ಟ ಪದ್ಧತಿಯೆಂದು ಜರೆದು ಇದನ್ನು ರದ್ದುಗೊಳಿಸುವುದು ಸರ್ಕಾರದ ಆದ್ಯ ಜವಾಬ್ದಾರಿಯೆಂದು ತೀರ್ಪು ನೀಡಿತ್ತು. ಮೊದಲನೆ ರಾಷ್ಟ್ರೀಯ ಕಾರ್ಮಿಕ ಆಯೋಗದ ಅಧ್ಯಕ್ಷರಾಗಿದ್ದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶ ನ್ಯಾಯಮೂರ್ತಿ ಶ್ರೀ ಗಜೇಂದ್ರಗಡ್ಕರ್ ಅವರು ಗುತ್ತಿಗೆ ಕಾರ್ಮಿಕ ಪದ್ಧತಿಯ ರದ್ದತಿ ಮತ್ತು ನಿಯಂತ್ರಣಕ್ಕೆ ಸೂಕ್ತ ಕಾಯ್ದೆ ರೂಪಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು. ಈ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ೧೯೭೦ರಲ್ಲಿ ಗುತ್ತಿಗೆ ಕಾರ್ಮಿಕ ಪದ್ಧತಿ (ನಿಯಂತ್ರಣ ಮತ್ತು ರದ್ದತಿ) ಕಾಯ್ದೆಯನ್ನು ಜಾರಿಗೊಳಿಸಿತು. ಇದೊಂದು ಸ್ವಾಗತಾರ್ಹ ಕಾಯ್ದೆ ಯಾದರೂ ಸರ್ಕಾರಗಳ ಮಾಲೀಕರ ಪರವಾದ ನೀತಿಗಳಿಂದಾಗಿ ಈ ಕಾಯ್ದೆ ಅದರ ಉದ್ದೇಶ ಸಾಧನೆಯಲ್ಲಿ ಯಶಸ್ವಿಯಾಗಿಲ್ಲ. ಜಾಗತೀಕರಣದ ನೀತಿಗಳಿಂದ ಪ್ರಭಾವಿತರಾದ ಬಹಳಷ್ಟು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಗುತ್ತಿಗೆ ಕಾರ್ಮಿಕರ ವಿರುದ್ಧ ನೀಡಿದ ಹಲವಾರು ತೀರ್ಪುಗಳು ಕಾಯ್ದೆಯ ಪ್ರಮುಖ ಉದ್ದೇಶಗಳನ್ನು ನಿರರ್ಥಕ ಗೊಳಿಸಿವೆ. ವಿದೇಶಿ ಹಾಗೂ ಸ್ವದೇಶಿ ಬಂಡವಳಿಗರು, ಸರ್ಕಾರಗಳು ಮತ್ತು ನ್ಯಾಯಾಲಯಗಳು ಗುತ್ತಿಗೆ ಕಾರ್ಮಿಕ ಪದ್ಧತಿಯ ಪರ ನಿಂತದ್ದರಿಂದಾಗಿ ಸಹಜವಾಗಿಯೆ ಈ ಅನಿಷ್ಟ ಪದ್ಧತಿ ಇಡೀ ಉದ್ಯೋಗ ವ್ಯವಸ್ಥೆಯನ್ನೇ ಆಕ್ರಮಿಸಿ ಕೊಂಡಿದೆ. ಇದೊಂದು ಆತಂಕಕಾರಿ ಬೆಳವಣಿಗೆ.

**ಸಂಪ್ರೀತ, ಸ್ವಾರ್ಥನಿಷ್ಠ – ಖಾಯಂ ಕಾರ್ಮಿಕರು**

ಕೈಗಾರಿಕೋದ್ಯಮಿ ಮತ್ತು ವಾಣಿಜ್ಯೋದ್ಯಮಿಗಳು ಗುತ್ತಿಗೆ ಕಾರ್ಮಿಕರ ಪದ್ಧತಿಯನ್ನು ಬಯಸಲು ಅನೇಕ ಕಾರಣಗಳನ್ನು ನೀಡುತ್ತಾರೆ. ಮೊದಲನೆಯದಾಗಿ ಈ ಪದ್ಧತಿಯಲ್ಲಿ ಮಾಲೀಕರಿಗೆ ಕೆಲಸಗಾರರ ಸಂಖ್ಯೆಯನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ಏರಿಳಿತಗೊಳಿಸಬಹುದು. ಎರಡನೆಯದಾಗಿ ಕಾರ್ಮಿಕರನ್ನು ನೇಮಿಸಿಕೊಳ್ಳುವ ಮತ್ತು ಅವರನ್ನು ಕೆಲಸದಿಂದ ತೆಗೆಯುವಾಗ ಉಂಟಾಗಬಹುದಾದ ತೊಡಕುಗಳಿಂದ ಹೊರತಾಗಿರ ಬಹುದು. ಮೂರನೆಯದಾಗಿ ವೇತನ ವೆಚ್ಚ ಮಿತ ಗೊಳಿಸಿ ಉತ್ಪಾದನಾ ವೆಚ್ಚವನ್ನು ನಿಯಂತ್ರಿಸುವುದು. ಎಲ್ಲಕ್ಕಿಂತ ಮಿಗಿಲಾಗಿ ಗುತ್ತಿಗೆ ಕಾರ್ಮಿಕರು ಸಂಘಟಿತ ರಾಗುವುದು ಕಷ್ಟ ಸಾಧ್ಯವೆಂಬುದು. ಹಾಗಾಗಿ ಗುತ್ತಿಗೆ ಕಾರ್ಮಿಕ ಪದ್ಧತಿ ಮಾಲೀಕ ವರ್ಗಕ್ಕೆ ವರದಾನವಾಗಿ ದಿನೇ ದಿನೇ ಈ ಪಿಡುಗು ಎಲ್ಲ ಕ್ಷೇತ್ರದ ಉದ್ದಿಮೆ ಗಳಿಗೂ ವ್ಯಾಪಿಸಿಕೊಂಡಿದೆ. ಈ ದಿಸೆಯಲ್ಲಿ ಖಾಯಂ ನೌಕರರು ಮತ್ತು ಅವರ ಸಂಘಟನೆಯ ಪಾತ್ರವೇನೂ ಗೌಣವಲ್ಲ. ಕಾರ್ಮಿಕ ವರ್ಗದಲ್ಲಿ ಖಾಯಂ ನೌಕರರು ಮತ್ತು ಅವರ ಸಂಘಟನೆಗಳು ಗುತ್ತಿಗೆ ಕಾರ್ಮಿಕ ಪದ್ಧತಿಯನ್ನು ಅನಿವಾರ್ಯವೆಂಬಂತೆ ಒಪ್ಪಿಕೊಂಡಿವೆ. ಬಹಳಷ್ಟು ಖಾಯಂ ನೌಕರರ ಸಂಘಟನೆಗಳು ತಮ್ಮ ಬೇಡಿಕೆಗಳು ಈಡೇರಿತೆಂದರೆ ಗುತ್ತಿಗೆ ಕಾರ್ಮಿಕರ ಹಿತರಕ್ಷಣೆಯ ಬಗ್ಗೆ ಯಾವ ಕಾಳಜಿಯನ್ನೂ ತೋರುವುದಿಲ್ಲ. ಇದರಿಂದಾಗಿ




ಕಾರ್ಮಿಕ ಸಂಘಗಳು ಮಾಲೀಕ ವರ್ಗಕ್ಕೆ ಪರೋಕ್ಷ ಬೆಂಬಲ ನೀಡಿದಂತಾಗುತ್ತದೆ. ಖಾಯಂ ನೌಕರರನ್ನು ಸಂಪ್ರೀತಗೊಳಿಸಿದಲ್ಲಿ ತಮ್ಮ ದಾರಿ ಸುಗಮಗೊಳ್ಳುವು ದೆಂಬುದನ್ನು ಮಾಲೀಕರು ತಮ್ಮ ಅನುಭವದಿಂದ ಕಂಡುಕೊಂಡಿದ್ದಾರೆ.

**ಏಕಮೇವ ಶಕ್ತಿ ಕೇಂದ್ರ**

ಗುತ್ತಿಗೆ ಕಾರ್ಮಿಕ ಪದ್ಧತಿ ಕಾರ್ಮಿಕವರ್ಗದ ಐಕ್ಯತೆಗೆ ಧಕ್ಕೆ ತರುತ್ತಿರುವುದರ ಬಗ್ಗೆ ಖಾಯಂ ಕಾರ್ಮಿಕರ ಸಂಘಟನೆಗಳು ತೀವ್ರವಾಗಿ ಆಲೋಚಿಸ ಬೇಕಾದ ಸನ್ನಿವೇಶ ಬಂದಿದೆ. ಖಾಯಂ ಕಾರ್ಮಿಕರ ಸಂಘಟನೆಗಳು ತಮ್ಮ ಬೇಡಿಕೆಗಳಿಗಾಗಿ ಮುಷ್ಕರದ ಹಕ್ಕು ಚಲಾಯಿಸಲೂ ಸಾಧ್ಯವಾಗದ ಪರಿಸ್ಥಿತಿ ಈಗಾಗಲೇ ಉದ್ಭವವಾಗಿದೆ. ಸರ್ಕಾರ ಮತ್ತು ಮಾಲೀಕರು ಕಾರ್ಮಿಕ ಸಂಘಟನೆಗಳನ್ನೇ ತೊಡೆದು ಹಾಕುವ ಸಂಚು ನಡೆಸಿವೆ. ಸರ್ಕಾರದ ಕಾರ್ಮಿಕ ಇಲಾಖೆ ಬಂಡವಳಿಗರ ಇಲಾಖೆಯಾಗಿ ಮಾರ್ಪಟ್ಟಿದೆ. ನ್ಯಾಯಾಲಯಗಳು ವ್ಯವಸ್ಥೆಯ ಈ ನೀತಿಗಳನ್ನೇ ಅನುಮೋದಿಸುತ್ತಿವೆ. ಕೈಗಾರಿಕೆಗಳಲ್ಲಿ ಆಡಳಿತವರ್ಗ ಏಕಮೇವ ಶಕ್ತಿ ಕೇಂದ್ರವಾಗುತ್ತಿದೆ. ದಬ್ಬಾಳಿಕೆಯ ವ್ಯವಸ್ಥೆ ರೂಪುಗೊಳ್ಳುತ್ತಿದೆ.

**ಸ್ಫೋಟಿಸಲಿರುವ ಟೈಂ ಬಾಂಬ್**

ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ತಯಾರಿಸುವ ಕಂಪನಿಗಳು ಸುಮಾರು ೪೩ ಬಿಲಿಯನ್ ಡಾಲರ್‌ಗಳ ವಹಿವಾಟಿನ ಬೃಹತ್ ಉದ್ದಿಮೆಯಾಗಿ ಬೆಳೆದಿದೆ. ಮನೇಸಾರ್‌ನ ಮಾರುತಿ ಕಾರ್ಖಾನೆಯಲ್ಲಿ ಖಾಯಂ ಕಾರ್ಮಿಕನ ಮಾಸಿಕ ವೇತನ ೧೮,೦೦೦ ರೂಪಾಯಿಗಳಾದರೆ ಅದೇ ಕೆಲಸ ಮಾಡುವ ಗುತ್ತಿಗೆ ಕಾರ್ಮಿಕನ ಮಾಸಿಕ ವೇತನ ೪೨೦೦ ರೂಪಾಯಿ. ಹರಿಯಾಣದಲ್ಲಿರುವ ಇನ್ನೊಂದು ಕಂಪನಿ ಒಮ್ಯಾಕ್ಸ್ ಆಟೋ ಪ್ಲಾಂಟ್‌ನಲ್ಲಿ ಖಾಯಂ ಕಾರ್ಮಿಕನ ಮಾಸಿಕ ವೇತನ ೧೨,೦೦೦ ರೂಪಾಯಿಗಳಾದರೆ, ಸುಮಾರು ೧೯ ವರ್ಷ ಕೆಲಸ ಮಾಡಿದ ಗುತ್ತಿಗೆ ಕಾರ್ಮಿಕನ ಮಾಸಿಕ ವೇತನ ಕೇವಲ ೫,೯೦೦ ರೂಪಾಯಿಗಳು. ಇದು ಎಲ್ಲ ಉದ್ದಿಮೆಗಳಲ್ಲಿರುವ ವೇತನ ತಾರತಮ್ಯ. ಈ ವೇತನ ಅಸಮಾನತೆಯೇ ಪರಿಸ್ಥಿತಿ ಸ್ಫೋಟಗೊಳ್ಳುವ ಸೂಚನೆಗಳನ್ನು ನೀಡುತ್ತಿದೆ. ೨೦೧೨ರ ಜನವರಿ ೨೭ರಂದು ಪಾಂಡಿಚೆರಿಯ ಯಾನಮ್‌ನಲ್ಲಿರುವ ರೀಜೆನ್ಸಿ ಸಿರಮಿಕ್ಸ್ ಕಾರ್ಖಾನೆಯಲ್ಲಿ ಪೊಲೀಸ್‌ರ ಏಟಿಗೆ ಸಂಘದ ನಾಯಕ ಬಲಿಯಾದ ನಂತರ ಕಂಪನಿಯ ಅಧ್ಯಕ್ಷನ ಮೇಲೆ ನಡೆದ ಹಲ್ಲೆ ಅವನ ಸಾವಿನಲ್ಲಿ ಪರ್ಯವಸಾನವಾಯಿತು. ಇದಕ್ಕೂ ಮುಂಚೆ, ೨೦೧೦ರ ನವೆಂಬರ್ ೧೩ರಂದು ಗಾಜಿಯಾಬಾದ್‌ನ ಅಲೈಡ್ ನಿಪ್ಪಾನ್ ಕಂಪನಿಯ ಹಿರಿಯ ಅಧಿಕಾರಿ ಸಾವು, ೨೦೦೯, ಸೆಪ್ಟೆಂಬರ್ ೨೧ರಂದು ಕೊಯಂಬತ್ತೂರ್‌ನ ಪ್ರೈಕಾಲ್ ಕಂಪನಿಯ ಉಪಾಧ್ಯಕ್ಷನ ಸಾವು, ೨೦೦೮, ಸೆಪ್ಟೆಂಬರ್ ೨೨ರಂದು ಗ್ರೇಜಿಯಾನೊ ಟ್ರಾನ್ಸ್‌ಮಿಶನ್‌ನ ಪ್ರಧಾನ ವ್ಯವಸ್ಥಾಪಕನ ಸಾವು, ತೀವ್ರಗೊಳ್ಳುತ್ತಿರುವ ಕಾರ್ಮಿಕ ಪ್ರತಿರೋಧಕ್ಕೆ ಸೂಚನೆಗಳಾಗಿವೆ. ಮನೇಸಾರ್ ಪ್ಲಾಂಟ್‌ನ ಗುತ್ತಿಗೆ ಕಾರ್ಮಿಕರ ಹೋರಾಟ, ಅವರ ಮೇಲೆ ನಡೆಸಿದ ಪೊಲೀಸ್ ದಾಳಿ, ಸರ್ಕಾರ ಮತ್ತು ಮಾಲೀಕರ ದಬ್ಬಾಳಿಕೆ ಕಾರ್ಮಿಕರಿಗೆ ಇಂದಿನ ವ್ಯವಸ್ಥೆಯನ್ನು ಪರಿಚಯಿಸಿದೆ. ಈ ಎಲ್ಲ ಬೆಳವಣಿಗೆಗಳು ಬಂಡವಳಿಗರನ್ನು ಗಾಬರಿಗೊಳಿಸಿವೆ. ನ್ಯಾಯಾಂಗದ ದೃಷ್ಟಿಕೋನವೂ ಸ್ವಲ್ಪಮಟ್ಟಿಗೆ ಬದಲಾಗುತ್ತಿದೆ.

**ಏರಲೇಬೇಕಾದ ಪ್ರತಿಭಟನೆಯ ಕಾವು**

ಗುತ್ತಿಗೆ ಕಾರ್ಮಿಕ ಪದ್ಧತಿ ಇಂದಿನ ಉದ್ಯೋಗ ವ್ಯವಸ್ಥೆಯಲ್ಲಿ ಅಡಗಿರುವ ಟೈಂ ಬಾಂಬ್ ಸ್ಫೋಟ ಗೊಳ್ಳುವ ದಿನಗಳು ದೂರವಿಲ್ಲ. ೧೯೮೦ರಿಂದ ಜಾರಿಯಲ್ಲಿರುವ ಕಾರ್ಮಿಕ ವಿರೋಧಿ ಪ್ರತಿಗಾಮಿ ವ್ಯವಸ್ಥೆ ಮುಂದಿನ ದಿನಗಳಲ್ಲಿ ಪ್ರಬಲವಾಗುವ ಸಾಧ್ಯತೆಗಳಿವೆ. ಇದನ್ನು ಎದುರಿಸಲು ಕಾರ್ಮಿಕರ ಸಂಘಟನೆಗಳು ೧೩ ಕೋಟಿ ಗುತ್ತಿಗೆ ಕಾರ್ಮಿಕರು ಮತ್ತು ೨೦ ಕೋಟಿ ಅಸಂಘಟಿತ ಕಾರ್ಮಿಕರನ್ನು ಸಂಘಟಿಸಬೇಕಾದ್ದು ಚಾರಿತ್ರಿಕ ಅಗತ್ಯ. ೨೦೧೩ ಫೆಬ್ರವರಿ ಮತ್ತು ಡಿಸೆಂಬರ್ ೨೦೧೩ರಂದು ದೇಶದ ಪ್ರಮುಖ ಕಾರ್ಮಿಕ ಸಂಘಟನೆಗಳು, ಬ್ಯಾಂಕ್ ಮತ್ತು ವಿಮಾ ನೌಕರರ ಸಂಘಟನೆಗಳ ನೇತೃತ್ವದಲ್ಲಿ ನಡೆದ ಸಾರ್ವತ್ರಿಕ ಮುಷ್ಕರಗಳು, ಸ್ವಾಗತಾರ್ಹ ಬೆಳವಣಿಗೆ. ಈ ವರ್ಗ ಸಂಘರ್ಷವನ್ನು ಮುಂದಿನ ದಿನಗಳಲ್ಲಿ ತೀವ್ರಗೊಳಿಸುವುದು ೨೦೧೪ರ ಮೇ ದಿನದ ಸಂಕಲ್ಪವಾಗಲಿ ಮತ್ತು ದಬ್ಬಾಳಿಕೆ – ಶೋಷಣೆಯ ವಿರುದ್ಧ ಪ್ರತಿಭಟನೆಯ ಕಾವು ಏರಲಿ ಎಂದು 'ಹೊಸತು' ಇಡೀ ಕಾರ್ಮಿಕ ವರ್ಗಕ್ಕೆ ಹಾರೈಸುತ್ತದೆ.

**ಮುರಳೀಧರ್ ಚಿಕ್ಕಮಗಳೂರು**
ವಕೀಲರು, ನಂ. ೮೩, ೫ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩

# ಆದಿಲ್‌ಷಾಹಿಗಳ ಕಾಲದ ಸಾಮಾಜಿಕ ಮತ್ತು ಧಾರ್ಮಿಕ ಸಾಮರಸ್ಯ

## - ಒಂದು ಅವಲೋಕನ

ಸಾಮಾನ್ಯವಾಗಿ ಮುಸ್ಲಿಂ ಸುಲ್ತಾನರ ಆಳ್ವಿಕೆಯ ಕಾಲವನ್ನು ನಮ್ಮ ಕೆಲವು ರೋಗಗ್ರಸ್ತ ಮನಸ್ಸುಗಳು ಸದಾ ನೇತ್ಯಾತ್ಮಕವಾಗಿಯೇ ನೋಡುವ ಮನೋಗತ ಬೆಳೆಸಿಕೊಂಡಿವೆ. ಅನೇಕ ಬಾರಿ 'ಮೊಸರಿನಲ್ಲಿ ಕಲ್ಲು ಹುಡುಕುವ ಪ್ರಯತ್ನಕ್ಕೂ' ಪೂರ್ವಗ್ರಹ ಮನಸ್ಸುಗಳು ಹೋಗುವುದುಂಟು. ಆದರೆ ಚರಿತ್ರೆಯನ್ನು ಹಾಗೆ ನೋಡುವುದು ಇತಿಹಾಸ ಸಂಶೋಧನಾ ಕ್ರಮಕ್ಕೆ ವಿರುದ್ಧವಾದುದು. ನಾವು ಎಲ್ಲ ರೀತಿಯ ಪೂರ್ವಗ್ರಹಗಳಿಂದ ಮುಕ್ತರಾಗಿ ಪ್ರಾಂಜಲ ಮನಸ್ಸಿನಿಂದ ಹಾಗೂ ಸಮಾಜಮುಖಿ ಸದಾಶಯಗಳೊಂದಿಗೆ ಇತಿಹಾಸವನ್ನು ಕಟ್ಟಬೇಕಿದೆ. ಆಗ ಮಾತ್ರ ಇತಿಹಾಸವು ಮನಸ್ಸನ್ನು ಕೆರಳಿಸುವ ಬದಲು ಅರಳಿಸುತ್ತದೆ. ಹೀಗೆ ಚರಿತ್ರೆಗೆ ಹೊಸ ಅರ್ಥವನ್ನು ತಂದುಕೊಡಲು ಸಾಧ್ಯವಿದೆ. ಈ ಆಶಯಗಳೊಂದಿಗೆ ಇಲ್ಲಿ ಆದಿಲ್‌ಷಾಹಿಗಳ ಕಾಲದಲ್ಲಿ ಹಿಂದೂ ಮತ್ತು ಮುಸಲ್ಮಾನರ ನಡುವಿನ ಸಾಮಾಜಿಕ ಹಾಗೂ ಧಾರ್ಮಿಕ ಸಾಮರಸ್ಯದ ಅವಲೋಕನವನ್ನು ನಡೆಸಲು ಪ್ರಯತ್ನಿಸಿದ್ದೇನೆ.

ಬಿಜಾಪುರ ಜಿಲ್ಲೆಯು ಚಾರಿತ್ರಿಕವಾಗಿ ಸರ್ವಜನಾಂಗದ ಶಾಂತಿಯ ತೋಟ. ಇಲ್ಲಿ ಹಲವು ಧರ್ಮೀಯರು, ಪಂಥೀಯರು ಸಹಬಾಳ್ವೆಯನ್ನು ನಡೆಸುತ್ತಾ ಬಂದಿದ್ದಾರೆ. ಬಾದಾಮಿಯಲ್ಲಿರುವ ಶೈವ, ವೈಷ್ಣವ ಹಾಗೂ ಜೈನ ಗುಹಾಲಯಗಳೇ ಇದಕ್ಕೆ ಸಾಕ್ಷಿ. ಸಾಮಾಜಿಕ ಸಮಾನತೆ ಹಾಗೂ ಜಾತಿ ವಿರೋಧಿ ಆಂದೋಲನವನ್ನು ಹುಟ್ಟು ಹಾಕಿದ ಬಸವಣ್ಣನ ಜನ್ಮ ಭೂಮಿ ಕೂಡ ಬಿಜಾಪುರ ಜಿಲ್ಲೆಯೇ ಆಗಿದೆ. ವಿಶ್ವಾತ್ಮಕ ಭಾವೈಕ್ಯತೆಯ ಬೀಜ ಬಿತ್ತಿದ ಅನೇಕ ದಾಸರು, ಸೂಫಿ ಸಂತರು ಕೂಡ ಬಿಜಾಪುರದ ಪರಿಸರದಿಂದ ಬಂದಿದ್ದಾರೆ. ಹೀಗಾಗಿ ಸರ್ವಧರ್ಮ ಸಮನ್ವಯತೆಗೆ ಬಿಜಾಪುರದ ನೆಲ ಚಾರಿತ್ರಿಕವಾಗಿ ಹದವಾಗಿತ್ತು.

ಬಿಜಾಪುರದ ಆದಿಲ್‌ಷಾಹಿ ಮನೆತನದ ಸ್ಥಾಪಕನಾದ ಯೂಸೂಫ್ ಆದಿಲ್ ಷಾ ಟರ್ಕಿಯ ಒಟ್ಟೋವಾನ್ ಮನೆತನಕ್ಕೆ ಸೇರಿದವನು. ಕಾರಣಾಂತರಗಳಿಂದ ಜೀವರಕ್ಷಣೆಗಾಗಿ ಟರ್ಕಿಯನ್ನು ತೊರೆಯಬೇಕಾಯಿತು. ಅಲ್ಲಿಂದ ತಲೆಮರೆಸಿಕೊಂಡು ಹೊರಟ ಯೂಸೂಫನು ಮಹಾರಾಷ್ಟ್ರದ ದಾಬೋಲ್ ಬಂದರಿಗೆ ಬಂದಿಳಿದ. ನಂತರ

**ಸರ್ವ ಧರ್ಮಗಳ ಆಶ್ರಯತಾಣವಾಗಿದ್ದ ಬಿಜಾಪುರ ಸುಲ್ತಾನರ ಕಾಲಘಟ್ಟವು ಕರ್ನಾಟಕ ಇತಿಹಾಸದ ಓದುಗರಿಗೆ ಸೌಹಾರ್ದತೆಯ ಪಾಠವನ್ನು ಹೇಳುತ್ತದೆ. ೧೪೮೯ರಿಂದ ೧೬೮೬ರವರೆಗಿನ ಸುಮಾರು ಎರಡು ಶತಮಾನಗಳ ಆದಿಲ್‌ಷಾಹಿಗಳ ರಾಜ್ಯಾಡಳಿತದಲ್ಲಿ ಪರಸ್ಪರ ದ್ವೇಷ, ಅಸೂಯೆ, ಗುಂಪುಗಾರಿಕೆ, ರಾಜಕೀಯ ಸಂಚು, ಕೊಲೆ ಇತ್ಯಾದಿಗಳಿಗೇನೂ ಕೊರತೆ ಇಲ್ಲ. ಯುದ್ಧ, ರಾಜ್ಯ ವಿಸ್ತರಣೆ ಮೊದಲಾದ ರಾಜಕೀಯ ಮೇಲಾಟದಲ್ಲಿ ಹಲವು ಹಿಂದೂ–ಮುಸ್ಲಿಮರು ಜೀವ ಕಳೆದುಕೊಂಡಿರುವುದು ಉಂಟು. ಧಾರ್ಮಿಕ ವಿಷಯವಾಗಿ ಷಿಯಾ–ಸುನ್ನಿ ಪಂಥದವರ ನಡುವೆ, ವಿದೇಶಿ ಮತ್ತು ಸ್ಥಳೀಯ ಮುಸ್ಲಿಮರ ನಡುವೆ, ಅವರವರ ಗುರು ಶಿಷ್ಯರ ನಡುವೆ, ಲಿಂಗಾಯತ–ಜೈನರ ನಡುವೆ ಹಲವಾರು ಸಲ ಕಲಹಗಳು ಏರ್ಪಟ್ಟಿರುವುದುಂಟು. ಆದರೆ ಗಮನಿಸಬೇಕಾದ ಬಹು ಮುಖ್ಯ ಅಂಶವೆಂದರೆ, ಹಿಂದೂ–ಮುಸ್ಲಿಮರ ನಡುವೆ ಈ ರೀತಿಯ ಯಾವುದೇ ಕಲಹಗಳಾಗಲಿ, ದಂಗೆಗಳಾಗಲಿ, ಸಾವು–ನೋವುಗಳಾಗಲಿ, ಹಲ್ಲೆಗಳಾಗಲಿ, ಲೂಟಿಗಳಾಗಲಿ ನಡೆದ ಬಗ್ಗೆ ಯಾವೊಂದು ಸುಳಿವುಗಳಿಲ್ಲದಿರುವುದೇ ವಿಶೇಷ. ಇದು ಆದಿಲ್‌ಷಾಹಿಗಳ ಕಾಲದಲ್ಲಿ ಹಿಂದೂ ಮತ್ತು ಮುಸಲ್ಮಾನರ ನಡುವೆ ಇದ್ದ ಸಾಮಾಜಿಕ ಮತ್ತು ಧಾರ್ಮಿಕ ಸಾಮರಸ್ಯ, ಸೌಹಾರ್ದತೆ ಮತ್ತು ಸಹಬಾಳ್ವೆಯನ್ನು ತೋರ್ಪಡಿಸುತ್ತದೆ.**



**ರಾಜೇಶ್ ಹೆಚ್. ಜಿ.**

ಇರಾನಿ ವ್ಯಾಪಾರಿಯ ಗೆಳೆತನದೊಂದಿಗೆ ಬಹಮನಿಗಳ ರಾಜಧಾನಿಯಾದ ಬೀದರ್‌ಗೆ ಬಂದನು. ಅಲ್ಲಿ ತನ್ನ ಪ್ರತಿಭೆ ಮತ್ತು ಸ್ವಪ್ರಯತ್ನಗಳಿಂದ ಮೇಲೇರಿದನು. ಬಹಮನಿ ರಾಜ್ಯದಲ್ಲಿ ವಿದೇಶಿಯರು ಮತ್ತು ಸ್ಥಳೀಯರ ನಡುವೆ ನಡೆಯುತ್ತಿದ್ದ ಸಂಘರ್ಷದಲ್ಲಿ ದಕ್ಷ ಪ್ರಧಾನಿ ಮಹಮ್ಮದ್ ಗವಾನನು ಮರಣದಂಡನೆಗೆ ಗುರಿಯಾದ ನಂತರ ಬಹಮನಿ ಸಾಮ್ರಾಜ್ಯ ದುರ್ಬಲಗೊಂಡಿತು. ಈ ಸಂದರ್ಭದಲ್ಲಿ ಬಿಜಾಪುರ ವಿಭಾಗದ ರಾಜ್ಯಪಾಲನಾಗಿದ್ದವನೇ ಯೂಸೂಫ್ ಆದಿಲ್‌ಖಾನ್. ಯೂಸೂಫ್ ಆದಿಲ್‌ಖಾನನು ಬಹಮನಿ ರಾಜ್ಯದಲ್ಲಿನ ಅರಾಜಕತೆಯ ಲಾಭವನ್ನು ಬಳಸಿಕೊಂಡು ಸುಮಾರು ೧೪೮೯ರಲ್ಲಿ ಸ್ವತಂತ್ರ ಸುಲ್ತಾನನೆಂದು ಘೋಷಿಸಿಕೊಂಡನು. ಹೀಗೆ ಬಿಜಾಪುರದ ಬಾದಶಹನಾದ ಯೂಸೂಫ್ ಆದಿಲ್‌ಖಾನನು ಆದಿಲ್‌ಷಾಹಿಯಾದನು. ದಖನ್ನಿನ ಬಿಜಾಪುರದಲ್ಲಿ ವಿದೇಶಿಯನಾದ ಯೂಸೂಫ್ ಆದಿಲ್‌ಷಾಹಿಯು ಷಿಯಾ ಪಂಗಡಕ್ಕೆ ಸೇರಿದವನಾದರೂ ಪ್ರತಿಯೊಬ್ಬರು ತಮ್ಮ ನಂಬಿಕೆಯಂತೆ ಬದುಕಲು ಅವಕಾಶ ನೀಡುವ ಮೂಲಕ ಸುನ್ನಿ, ಹಿಂದೂಗಳೆಲ್ಲರ ನಡುವೆ ಸಾಮರಸ್ಯವನ್ನು ನೆಲೆಗೊಳಿಸಿದನು. ಮರಾಠ ಸರದಾರ ಮುಕುಂದರಾಯನನ್ನು ಸೋಲಿಸಿ, ಅವನ ತಂಗಿಯನ್ನು ಮದುವೆಯಾಗಿ ಅವಳಿಗೆ 'ಬುಬೂಜಿ ಖಾನುಮ್' ಎಂದು ಹೆಸರಿಟ್ಟನು. ಯೂಸೂಫನು 'ಬುಬೂಜಿ ಖಾನುಮ್'ಳನ್ನು ಹೊರತು ಬೇರೆ ವಿವಾಹ ಕೂಡ ಆಗಲಿಲ್ಲ. ಅವಳೇ ಅವನ ಪಟ್ಟದರಸಿಯಾಗಿದ್ದಳು. ಅವಳಿಗೆ ಜನಿಸಿದ 'ಇಸ್ಮಾಯಿಲ್ ಆದಿಲ್ ಷಾ'ನೇ ನಂತರ ಪಟ್ಟಕ್ಕೂ ಬಂದನು. ಮೊಘಲರ ಏಳಿಗೆಯಲ್ಲಿ ಹಿಂದೂಗಳಾದ ರಾಜಪೂತರ ನೆರವು ಹೇಗೆ ದೊರೆಯಿತೋ ಹಾಗೆಯೇ ವಿಜಾಪುರದ ಆದಿಲ್‌ಷಾಹಿಗಳ ಏಳಿಗೆಯಲ್ಲಿ ಹಿಂದೂಗಳಾದ ಮರಾಠರ ಕೊಡುಗೆ ಸ್ಮರಣೀಯವಾದುದು.

ಹೀಗೆ ಇಸ್ಲಾಂ ಧರ್ಮ ಮತ್ತು ನಂಬಿಕೆಗಳನ್ನು ಮೈಗೂಡಿಸಿಕೊಂಡಿದ್ದ ಪರ್ಷಿಯನ್ನರು, ತುರ್ಕಿಗಳು, ಅಬಿಸೀನಿಯನ್ನರು, ಅರ್ಮೇನಿಯನ್ನರು ಒಂದು ಕಡೆಯಾದರೆ, ಹಿಂದೂ ನಂಬಿಕೆಗಳನ್ನು ಮೈಗೂಡಿಸಿಕೊಂಡಿದ್ದ ಸ್ಥಳೀಯ ಮುಸ್ಲಿಮರು ಮತ್ತೊಂದು ಕಡೆ ಇದ್ದರು. ವಿದೇಶಿಯ ಮುಸ್ಲಿಮರು ಇಲ್ಲಿ ನೆಲೆಯೂರಬೇಕಾದರೆ ಸ್ಥಳೀಯರೊಂದಿಗೆ ಹೊಂದಿಕೊಂಡು ಹೋಗುವುದು ಅನಿವಾರ್ಯವಾಗಿತ್ತು. ಅದಕ್ಕಾಗಿ ಯೂಸೂಫ್ ಆದಿಲ್‌ಷಾಹಿಯು ಪರಸ್ಪರ ಸಹಬಾಳ್ವೆಯ ಹೊಸತತ್ವವನ್ನು ರೂಪಿಸಿಕೊಂಡನು.

ಮರಾಠರೊಂದಿಗಿನ ವೈವಾಹಿಕ ಸಂಬಂಧದಿಂದ ಯೂಸೂಫನ ಆಸ್ಥಾನದಲ್ಲಿ ಮರಾಠ ಸರದಾರರ ಪ್ರಭಾವ ಸಹಜವಾಗಿಯೇ ಇತ್ತು. ಮರಾಠಿ ಮನೆತನದವರು ಆದಿಲ್‌ಷಾಹಿ ಕಾಲದಲ್ಲಿ ಅಧಿಕಾರ ಮತ್ತು ಪ್ರಭಾವಗಳನ್ನು ಹೊಂದಿದವರಾಗಿದ್ದರು. ಅವರಲ್ಲಿ ಶಿವಾಜಿಯ ತಂದೆ ಶಹಾಜಿ ಭೋಸಲೆ ಕೂಡ ಒಬ್ಬನಾಗಿದ್ದನು. ಶಹಾಜಿಯು ಬೆಂಗಳೂರಿನ ರಾಜ್ಯಪಾಲ ಹಾಗೂ ದಕ್ಷಿಣದ ಸುಭೇದಾರನಾಗಿದ್ದನು. ಮರಾಠಿ ಜಗದೇವ ಎಂಬುವನು ಪ್ರಧಾನ ಅಮಾತ್ಯ ಪದವಿಗೆ ಏರಿದ್ದನು. ಅಲ್ಲದೆ ಫಲ್ಟನದ ನಿಂಬಾಳ್ಕರ್, ಮುಧೋಳದ ಘೋರ್ಪಡೆ ಮುಂತಾದವರು ಆದಿಲ್‌ಷಾಹಿ ಕಾಲದ ಪ್ರಮುಖ ಸರದಾರರಾಗಿದ್ದರು.

ಯೂಸೂಫ್ ಆದಿಲ್‌ಷಾಹನ ನಂತರ ಅವನ ಮಗ ಇಸ್ಮಾಯಿಲ್ ಆದಿಲ್‌ಷಾಹ (೧೫೧೦–೧೫೩೪) ಅಧಿಕಾರಕ್ಕೆ ಬಂದನು. ಬಹಮನಿ ಸಾಮ್ರಾಜ್ಯದಿಂದ ಉದಯಿಸಿದ ಐದು ಷಾಹಿ ಮನೆತನಗಳಲ್ಲಿ ಬಿಜಾಪುರದ ಆದಿಲ್‌ಷಾಹಿ ಮನೆತನವು ಷಿಯಾ ಪಂಗಡಕ್ಕೆ ಸೇರಿದ ಏಕೈಕ ಮನೆತನವಾಗಿತ್ತು. ಬಾಲಕನಾಗಿದ್ದ ಇಸ್ಮಾಯಿಲ್‌ನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಕಮಾಲ್‌ಖಾನ್ ಎಂಬ ಅಧಿಕಾರಿಯು ಸುನ್ನಿ ಪಂಗಡಕ್ಕೆ ಸೇರಿದವನಾಗಿದ್ದನು. ಅವನಿಗೆ ಷಿಯಾ ರಾಜವಂಶದ ಬಗ್ಗೆ ದ್ವೇಷವಿತ್ತು. ಅವನು ಆದಿಲ್‌ಷಾಹಿ ರಾಜವಂಶವನ್ನು ನಿರ್ನಾಮ ಮಾಡುವ ತಂತ್ರ ಹೂಡಿದರೂ ಅದು ಫಲಿಸಲಿಲ್ಲ.

ಆದಿಲ್‌ಷಾಹಿ ಮನೆತನವನ್ನು ನಿರ್ಮೂಲನೆ ಮಾಡುವ ಪ್ರಯತ್ನದಲ್ಲಿ ಇತರ ಸುನ್ನಿ ಪಂಗಡದ ಷಾಹಿ ಮನೆತನಗಳು ಬಹಮನಿ ಸುಲ್ತಾನ ಮಹಮ್ಮದ್ ಷಾಹನ ನೇತೃತ್ವದಲ್ಲಿ ಒಂದಾದವು (೧೫೧೪). ಇವುಗಳ ಒಕ್ಕೂಟ ಸೇನೆಯನ್ನು ಇಸ್ಮಾಯಿಲ್ ಆದಿಲ್‌ಷಾಹನ ಸೈನ್ಯ ಸೋಲಿಸಿ ಮಹಮ್ಮದ್ ಷಾಹ ಹಾಗೂ ಅವನ ಮಗ ಅಹ್ಮದ್‌ನನ್ನು ಸೆರೆಹಿಡಿಯಿತು. ಆದರೆ ಇಸ್ಮಾಯಿಲ್ ಅವರನ್ನು ಮರ್ಯಾದೆಯಿಂದ ನಡೆಸಿಕೊಂಡನಲ್ಲದೆ ತನ್ನ ಸೋದರಿಯನ್ನು ಅಹ್ಮದನಿಗೆ ಕೊಟ್ಟು ಮದುವೆಯನ್ನು ಮಾಡಿದನು. ಹಾಗೆಯೇ ಅಹ್ಮದ್‌ನಗರದ ಬುರಾನ್ ನಿಜಾಂಷಾನಿಗೆ ಮತ್ತೋರ್ವ ಸೋದರಿಯನ್ನು ವಿವಾಹ ಮಾಡಿಕೊಟ್ಟನು (೧೫೨೪). ಹೀಗೆ 'ದ್ವೇಷವನ್ನು ಪ್ರೀತಿಯಿಂದ ಗೆಲ್ಲಬಹುದು' ಎಂಬುದು ಆದಿಲ್‌ಷಾಹಿಗಳ ಸಂಸ್ಕೃತಿಯಾಗಿತ್ತು. ಅದಕ್ಕಾಗಿ ವೈವಾಹಿಕ ಸಂಬಂಧದ ನೀತಿಯನ್ನು ತಮ್ಮ ಆಳ್ವಿಕೆಯ ಉದ್ದಕ್ಕೂ ಅಳವಡಿಸಿಕೊಂಡರು.

ಮೊದಲನೇ ಇಬ್ರಾಹಿಂ ಆದಿಲ್‌ಷಾಹನು (೧೫೩೫–೧೫೫೭) ಇಸ್ಮಾಯಿಲ್ ನಂತರ ಅಧಿಕಾರಕ್ಕೆ ಬಂದನು. ಈತ ಸುನ್ನಿ ಸುಲ್ತಾನರ ವಿರೋಧವನ್ನು ಕಟ್ಟಿಕೊಳ್ಳದಿರಲು ಹೊಸ ನೀತಿಗಳನ್ನು ಅಳವಡಿಸಿಕೊಂಡನು. ಅದೇನೆಂದರೆ :

* ಸುನ್ನಿ ಸಂಪ್ರದಾಯ ಬದ್ಧ ಇಸ್ಲಾಂ ಆಚರಣೆಗಳನ್ನು ಬೆಂಬಲಿಸುವುದಾಗಿತ್ತು. ಅದರ ಜೊತೆಗೆ ವಿದೇಶಿ ಅಧಿಕಾರಿಗಳ ಬದಲಿಗೆ ಸ್ಥಳೀಯ ದಖನಿಗಳನ್ನೇ ನೇಮಿಸಿದನು.
* ಸಾಧ್ಯವಾದ ಕಡೆಗಳಲ್ಲಿ ಹಿಂದೂಗಳನ್ನೂ ನೇಮಿಸಿದನು. ಆಸ್ಥಾನದ ಲೆಕ್ಕ ಪತ್ರಗಳ ನಿರ್ವಹಣೆಗೆ ಬ್ರಾಹ್ಮಣರನ್ನು ನೇಮಿಸಿಕೊಂಡನು. ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಹೊಣೆಯನ್ನು ಮರಾಠರಿಗೆ ವಹಿಸಿದನು. ಅವನ ಸೈನ್ಯದಲ್ಲಿ ೩೦,೦೦೦ ಮರಾಠ ಸೈನಿಕರಿದ್ದರೆಂದು ತಿಳಿದು ಬರುತ್ತದೆ.
* ಆಡಳಿತವನ್ನು ಪರ್ಷಿಯನ್ ಬದಲಿಗೆ ಸ್ಥಳೀಯ ಭಾಷೆಗಳಲ್ಲಿ ನಡೆಸಲಾರಂಭಿಸಿದನು. ಮರಾಠಿ ಮತ್ತು ಕನ್ನಡ ಭಾಷೆಗಳು ಆಡಳಿತ ಭಾಷೆಯ ಸ್ಥಾನ ಪಡೆದವು.

**ಒಂದನೇ ಅಲಿ ಆದಿಲ್‌ಷಾಹ (೧೫೫೭–೧೫೮೦) :** ಇವನು ಇಬ್ರಾಹಿಂನ ನಂತರ ಅಧಿಕಾರಕ್ಕೆ ಬಂದನು. ಒಂದನೇ ಅಲಿಯು ಪುನಃ ಷಿಯಾ ಸಂಪ್ರದಾಯಗಳಿಗೆ ಮನ್ನಣೆ ನೀಡಿದನು. ವಿಜಯನಗರದ ರಾಮರಾಯನೊಂದಿಗೆ ಉತ್ತಮ ಸಂಬಂಧ ಹೊಂದಿದ್ದನು. ರಾಮರಾಯನ ಪತ್ನಿಯು ಅಲಿಯನ್ನು 'ದತ್ತು ಪುತ್ರ' ಎಂದೇ ಕರೆಯುತ್ತಿದ್ದಳು. ರಾಮರಾಯನ ಮಗ ಮರಣ ಹೊಂದಿದಾಗಲೂ ವಿಜಯನಗರಕ್ಕೆ ಭೇಟಿ ನೀಡಿದ್ದನೆಂದು ತಿಳಿಯುತ್ತದೆ. ಹಾಗೆಯೇ ಒಂದನೇ ಅಲಿಯು ಅಹ್ಮದ್‌ನಗರದ ಹುಸೇನ್ ನಿಜಾಂ ಷಾಹನ ಮಗಳಾದ ಚಾಂದ್ ಬೀಬಿಯನ್ನು ಮದುವೆಯಾದನು. ಹೀಗೆ ನೆರೆಹೊರೆಯ ಸುಲ್ತಾನರೊಂದಿಗೂ ವೈವಾಹಿಕ ಸಂಬಂಧವನ್ನು ಬೆಳೆಸುವ ಮೂಲಕ ದಖನ್ ಮುಸ್ಲಿಂ ಮನೆತನಗಳ ನಡುವೆ ಒಂದು ಸೌಹಾರ್ದಯುತ ವಾತಾವರಣವನ್ನು ಸೃಷ್ಟಿಸಲು ಕಾರಣನಾದನು.

ಒಂದನೇ ಅಲಿಯ ಕಾಲದಲ್ಲಿಯೇ ವಿಜಾಪುರ ಚಿತ್ರಕಲಾಶೈಲಿಯು ಆರಂಭವಾಯಿತು. ಚಿನ್ನದ ಹೊಳಪಿನ ಈ ಚಿತ್ರಶೈಲಿಯಲ್ಲಿ ಹಿಂದೂ ದೇವತೆಗಳೂ ಚಿತ್ರಿತಗೊಂಡಿರುವುದು ಒಂದು ವಿಶೇಷ ಹಾಗೂ ಸೌಹಾರ್ದತೆಯ ಸಂಕೇತವಾಗಿದೆ. ಹಿಂದೂ–ಮುಸ್ಲಿಂ ಸಂತರಿಗೆ ಆಶ್ರಯ ನೀಡಿದನು. ಸರ್ವಧರ್ಮ ಸಮನ್ವಯಕ್ಕೆ ಪೂರಕ ವಾತಾವರಣ ಸೃಷ್ಟಿಸಿದನು. ತಾನು ಸ್ವತಃ ಹಿಂದೂ ಸನ್ಯಾಸಿಯಂತೆ ಕೇಸರಿ ವಸ್ತ್ರಗಳನ್ನು ಧರಿಸುತ್ತಿದ್ದನು. ಅವರೊಂದಿಗೆ ಆಧ್ಯಾತ್ಮಿಕ ವಿಷಯಗಳನ್ನೂ ಚರ್ಚಿಸುತ್ತಿದ್ದನು.

**ಎರಡನೇ ಇಬ್ರಾಹಿಂ ಆದಿಲ್ ಷಾಹ (೧೫೮೦–೧೬೨೭) :** ಈತನು ಒಂದನೇ ಅಲಿ ಆದಿಲ್ ಷಾಹನ ಸೋದರ ತಹ್ಮಾಸಪ್‌ನ ಮಗ. ೯ನೇ ವಯಸ್ಸಿನಲ್ಲಿಯೇ ಅಧಿಕಾರಕ್ಕೆ ಬಂದನು. ಈತನ ಕಾಲವು ದಕ್ಷಿಣ ಭಾರತದ ಚರಿತ್ರೆಯಲ್ಲಿಯೇ ಧಾರ್ಮಿಕ ಸಾಮರಸ್ಯ ಮತ್ತು ಸಾಮಾಜಿಕ ಸೌಹಾರ್ದತೆ ಹಾಗೂ ಸಹಬಾಳ್ವೆಗೆ ಹೆಸರಾಗಿದೆ. ಪರ್ಷಿಯನ್ ರಾಜವಂಶದ ಭಾಷೆಯಾಗಿದ್ದರೂ ಮರಾಠಿಯನ್ನು ಆಡಳಿತ ಭಾಷೆ ಮಾಡಿದನು. ಮೊಘಲ್ ದೊರೆ ಅಕ್ಬರನೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದ ಇವನು ಅಕ್ಬರನಂತೆಯೇ ಜಾತ್ಯತೀತನೂ ಉದಾರಿ ದೊರೆಯೂ ಆಗಿದ್ದನು. ಅಕ್ಬರನ ರಾಯಭಾರಿಯು ಇವನ ಆಸ್ಥಾನಕ್ಕೆ ಬಂದಾಗ ಮರಾಠಿಯಲ್ಲಿಯೇ ವ್ಯವಹರಿಸಿದನೆಂದು ಹೇಳಲಾಗುತ್ತದೆ.

ಎರಡನೇ ಇಬ್ರಾಹಿಮನು ಕಂದಾಯ ಇಲಾಖೆಯ ಮೇಲ್ವಿಚಾರಣೆಯನ್ನು ಹಿಂದೂಗಳ ಕೈಗಿತ್ತನು. ಹಿಂದೂ ಸಾಧು ಸಂತರಿಗೆ ತನ್ನ ಆಸ್ಥಾನದಲ್ಲಿ ಸ್ಥಾನ ಕಲ್ಪಿಸಿದನು. ಇವನ ಆಸ್ಥಾನದಲ್ಲಿ ೩೦೦ ಮಂದಿ ಹಿಂದೂ ಕವಿಗಳು ಮತ್ತು ತತ್ವಜ್ಞಾನಿಗಳಿದ್ದರು. ಇವನ ಅರಮನೆಯ ಪಕ್ಕದಲ್ಲಿಯೇ ನರಸಿಂಹ ದೇವಾಲಯ ಕಟ್ಟಿಸಿದನು. ಅದನ್ನು ಇಂದಿಗೂ ಕಾಣಬಹುದಾಗಿದೆ. ಎರಡನೇ ಇಬ್ರಾಹಿಮನಿಗೆ ಹಿಂದೂ ದೇವತೆ ಸರಸ್ವತಿ ಮತ್ತು ಸಂಗೀತದ ಬಗೆಗೆ ಅಪಾರ ಭಕ್ತಿ ಮತ್ತು ಪ್ರೀತಿ. ಇವನಿಗೆ ಸರಸ್ವತಿ ಆರಾಧನೆಯ ದೀಕ್ಷೆ ಕೊಟ್ಟ ಗುರು ರುಕ್ಮಾಂಗದ ಪಂಡಿತ. ಸುಲ್ತಾನ ತನ್ನ ಅರಮನೆ ಆವರಣದಲ್ಲಿ ಸರಸ್ವತಿ ವಿಗ್ರಹ ಸ್ಥಾಪನೆ ಮಾಡುವಷ್ಟು ಪ್ರೇರಣೆ ಪಡೆದಿದ್ದನು. ಈತನೇ ಬರೆದ 'ಕಿತಾಬ್–ಎ–ನೌರಸ್' ಕೃತಿಯ ಮೊದಲ ಗೀತೆಯಲ್ಲಿ –

*ನವರಸ್ ಸ್ವರ್ ಜುಗ್‌ಜಗ್ ಜೋತಿ ಆಣೆ ಸರ್ವಗುಣೀ*
*ಯೋ ಸತ್ ಸರ್‌ಸುತೀ ಮಾತಾ ಇಬ್ರಾಹಿಂ ಪ್ರಸಾಧ್ ಭಈ ದೂನೀ*

ಎಂದು ಸರಸ್ವತಿಯನ್ನು ಸ್ತುತಿಸಿದ್ದಾನೆ. ಅದೇ ರೀತಿ ಹಿಂದೂ ದೇವತೆಗಳಾದ ಗಣಪತಿ, ಶಿವ, ದುರ್ಗೆ ಮೊದಲಾದ ದೇವತೆಗಳನ್ನು ತನ್ನ ಕೃತಿಯ ಒಳಗೆ ಹೆಸರಿಸಿದ್ದಾನೆ. ಹೀಗೆ ಎರಡನೇ ಇಬ್ರಾಹಿಮನು ಜಾತ್ಯತೀತ, ಉದಾರವಾದಿ ಮನೋಭಾವದ ಸುಲ್ತಾನನಾಗಿದ್ದನು.




ಹಿಂದೂ ದೇವತಾರಾಧನೆ ಮಾಡುತ್ತಾ ಧರ್ಮಭ್ರಷ್ಠನಾಗುತ್ತಿರುವ ಸುಲ್ತಾನನನ್ನು ತಿದ್ದಲು ಸಂಪ್ರದಾಯಸ್ಥ ಮುಸಲ್ಮಾನರಲ್ಲಿ ಕೆಲವರು 'ಅಬುಲ್ ಹಸನ್ ಖಾದ್ರಿ' ಎಂಬ ಸೂಫಿಯನ್ನು ಅಜ್ಮೀರಿನಿಂದ ಕರೆಸುತ್ತಾರೆ. ಆದರೆ ಬಿಜಾಪುರಕ್ಕೆ ಬಂದ ಹಸನ್ ಖಾದ್ರಿಯು ರುಕ್ಮಾಂಗದನ ಗೆಳೆಯನಾಗಿ ಹೋದನೆಂದು 'ರುಕ್ಮಾಂಗದ ಚರಿತ್ರೆ'ಯಲ್ಲಿ ಬಣ್ಣಿಸಿದೆ.

ಹೀಗೆ ಹಿಂದೂ ಧರ್ಮದ ಬಗೆಗಿನ ಇಬ್ರಾಹಿಮನ ಪ್ರೀತಿ ಮತ್ತು ಸಂಗೀತ ಜ್ಞಾನ ಮೊದಲಾದವನ್ನು ತಿಳಿದ ಜನತೆ ಈತನನ್ನು 'ಜಗದ್ಗುರು' ಎಂದು ಕರೆಯುತ್ತಿದ್ದರು. ಇಬ್ರಾಹಿಮನು ಅಕ್ಬರನ 'ದೀನ್-ಎ-ಇಲಾಹಿ' ರೀತಿಯಲ್ಲಿಯೇ 'ದಾದ್-ಏ-ಇಲಾಹಿ' ಎಂಬ ತತ್ವವನ್ನು ಸಾರಿದನು. 'ದಾದ್-ಏ-ಇಲಾಹಿ' ಎಂದರೆ 'ಜನರನ್ನು ಒಗ್ಗೂಡಿಸುವುದು ದೇವರನ್ನು ಬೆಂಬಲಿಸುವ ಕೆಲಸ' ಎಂಬ ನಂಬಿಕೆಯಾಗಿತ್ತು. ಆದರೆ ಅಕ್ಬರನ ರೀತಿಯಲ್ಲಿ ಈ ಪಂಥವನ್ನು ರೂಪಿಸುವ ಕಡೆಗೆ ಸುಲ್ತಾನನು ಗಮನ ಕೊಡಲಿಲ್ಲ.

ಹಿಂದೂ-ಮುಸ್ಲಿಮರೆಲ್ಲ ಸೇರಿ ಪ್ರತೀ ತಿಂಗಳೂ ಮೊದಲ ಗುರುವಾರದಂದು 'ಈದ್-ಎ-ನೌರಸ್' ಎಂಬ ರಾಷ್ಟ್ರೀಯ ಹಬ್ಬವನ್ನು ಆಚರಿಸುತ್ತಿದ್ದರು. ಅಂದು ಸಾರ್ವತ್ರಿಕ ರಜಾದಿನವಾಗಿರುತ್ತಿತ್ತು. ದತ್ತನ ಭಕ್ತನೂ ಆಗಿದ್ದರಿಂದ ಗುರುವಾರವನ್ನು ಆಯ್ದುಕೊಂಡಿದ್ದನೆಂದು ಹೇಳಲಾಗುತ್ತದೆ. ಎರಡನೇ ಇಬ್ರಾಹಿಮನು ತನ್ನ ಅರಮನೆಯ ಕೋಟೆಯಲ್ಲಿನ ದತ್ತ ದೇವಾಲಯವನ್ನು ದುರಸ್ತಿ ಮಾಡಿಸಿ ಅದರ ಪೂಜೆಗೆ ವ್ಯವಸ್ಥೆ ಮಾಡಿದನು.

ಆದಿಲ್‌ಷಾಹಿಗಳ ಆಡಳಿತವು ಹಿಂದೂಗಳ ಬಗೆಗೆ ಸಹಿಷ್ಣುತೆಯನ್ನು ಹೊಂದಿದ್ದು, ಹಲವು ಹಿಂದೂ ದೇವಾಲಯಗಳ ನಿರ್ಮಾಣ ಮತ್ತು ದುರಸ್ತಿ ಕಾರ್ಯ ನಡೆಸಿರುವುದಕ್ಕೆ ಮತ್ತೊಂದು ನಿದರ್ಶನ ಅಥಣಿಯ ಸಿದ್ದೇಶ್ವರ ದೇವಾಲಯ. ಈತನು ದೇವಾಲಯಗಳಿಗೆ ಇದ್ದ ದಾನದತ್ತಿಗಳನ್ನು ಮುಂದುವರಿಸಿದ್ದಲ್ಲದೆ, ಹೊಸದಾಗಿಯೂ ದಾನಗಳನ್ನು ನೀಡಿದನು.

ಆದಿಲ್‌ಷಾಹಿಗಳ ಮೊದಲ ಸುಲ್ತಾನ ಯೂಸೂಫ್ ಆದಿಲ್‌ಷಾಹನ ಕಾಲದಿಂದ ನೂರುವರ್ಷಗಳ ಕಾಲ ಸೂಫಿಗಳು ಬಿಜಾಪುರದತ್ತ ಮುಖ ಮಾಡಿರಲಿಲ್ಲ. ಆದರೆ ಎರಡನೇ ಇಬ್ರಾಹಿಮನ ಕಾಲದಿಂದ ಈ ವಲಸೆ ಹೆಚ್ಚು ಆರಂಭವಾಗುತ್ತದೆ. ಏಕೆಂದರೆ ಪರ್ಶಿಯಾದಲ್ಲಿದ್ದ ಸಫವಿ ದೊರೆಗಳು ಷಿಯಾಗಳಾಗಿದ್ದು, ಸೂಫಿಗಳಿಗೆ ವಿರುದ್ಧ ವಾಗಿದ್ದರಿಂದ ಸೂಫಿ ಸಂತರೆಲ್ಲ ಸುನ್ನಿ ರಾಜ್ಯಗಳ ಕಡೆಗೆ ವಲಸೆ ಹೋಗುತ್ತಿದ್ದರು. ಆದರೆ ೨ನೇ ಇಬ್ರಾಹಿಂ ತುಂಬಾ ಉದಾರಿಯೂ, ಸೂಫಿಗಳ ಬಗೆಗೆ ಗೌರವ ತಳೆದವ ನಾದ್ದರಿಂದ ಇವನ ಕಾಲಾವಧಿಯಲ್ಲಿ ಸೂಫಿ ಸಂತರು ಹೆಚ್ಚಿನ ಸಂಖ್ಯೆಯಲ್ಲಿ ಬಿಜಾಪುರದ ಕಡೆಗೆ ಬರಲಾರಂಭಿಸಿದರು. ಬಾಗ್ದಾದಿನಿಂದ ಸೂಫಿ ಸಂತ ಶಾನೂರುದ್ದೀನ್ ಸಫವಿ ಬಂದನು. ಗುಜರಾತಿನಿಂದ ಸತ್ತಾರಿಯಾ ಸೂಫಿಗಳು ಬಿಜಾಪುರದ ಕಡೆಗೆ ಬಂದರು. ಗುಲ್ಬರ್ಗಾ ಮತ್ತು ಬೀದರ್‌ಗಳು ರಾಜಕೀಯವಾಗಿ ದುರ್ಬಲ ಕೇಂದ್ರಗಳಾದ ಬಳಿಕ ಅಲ್ಲಿನ ಚಿಸ್ತಿ ಹಾಗೂ ಖಾದ್ರಿ ಸೂಫಿಗಳು ವಿಜಾಪುರಕ್ಕೆ ಬಂದರು. ಇವರಲ್ಲಿ ಗುಲ್ಬರ್ಗಾದಿಂದ ಬಂದೇನವಾಜರ ವಂಶದ ಇಬ್ಬರು ಖಲೀಫರು ಇದ್ದರು. ಬೀದರ್‌ನಿಂದ ಬಂದವರಲ್ಲಿ ಶಾ ಖಾಸಿಂ ಖಾದ್ರಿ, ಶಾ ನೂರುಲ್ಲಾ ಖಾದ್ರಿ, ಶಾ ಅಬ್ದುಲ್ ಹಸನ್ ಖಾದ್ರಿ, ಶಾ ಮುಸ್ತುಫ ಖಾದ್ರಿ ಮುಂತಾದವರು ಪ್ರಮುಖರು.

ಬಿಜಾಪುರದಲ್ಲಿ ಸೂಫಿಗಳ ಪ್ರಾಮುಖ್ಯತೆ ಹೆಚ್ಚಲು ಕೆಲವು ಕಾರಣಗಳಿವೆ. ಮತಾಂತರಗೊಂಡ ಮುಸ್ಲಿಮರಿಗೆ ನಮಾಜು, ಕುರಾನು ಇತ್ಯಾದಿ ಶಿಷ್ಟ ಇಸ್ಲಾಮ್ ಆಚರಣೆಗಿಂತಲೂ ದರ್ಗಾ ಸಂಸ್ಕೃತಿ ಸಮೀಪ ಅನಿಸಿದ್ದುದರಿಂದ ಸೂಫಿಗಳು ಮುಖ್ಯವಾದರು. ನಾಥಪಂಥ, ಲಿಂಗಾಯತ ಪಂಥಗಳ ವಾತಾವರಣದಲ್ಲಿ ಬೆಳೆದ ಅವರಿಗೆ ಗುರುಭಕ್ತಿ, ಗದ್ದಿಗೆ ಆರಾಧನೆಗಳನ್ನುಳ್ಳ ಸೂಫಿ ಸಂಸ್ಕೃತಿ ಬೇರೆ ಎನಿಸಲಿಲ್ಲ. ಜೊತೆಗೆ ಆಗಿನ ಕಾಲದ ಅನೇಕ ಸೂಫಿಗಳು ಹಿಂದೂ ಸಮುದಾಯ ಹಾಗೂ ಪಂಥಗಳ ಜೊತೆಗೂ ಆತ್ಮೀಯವಾಗಿದ್ದರು.

ಬಿಜಾಪುರದಲ್ಲಿದ್ದ ಸೂಫಿಗಳಲ್ಲಿ ಖಾದ್ರಿ, ಶತ್ತಾರಿ ಮತ್ತು ಚಿಸ್ತಿ ಎಂಬ ೩ ಗುಂಪುಗಳಿದ್ದವು. ಚಿಸ್ತಿಗಳು ಗುಲ್ಬರ್ಗಾದಲ್ಲಿ ಪ್ರಭುತ್ವದ ಜೊತೆಗೆ ನಿಕಟವಾಗಿದ್ದರು. ಆದರೆ ಬಿಜಾಪುರದ ಆಸ್ಥಾನದ ಚಟುವಟಿಕೆಗಳಿಂದ ದೂರವೇ ಉಳಿದರು.

ಬಿಜಾಪುರದ ಈ ಸೂಫಿಗುಂಪುಗಳ ಎರಡು ರೀತಿಯ ಕೊಡುಗೆಗಳನ್ನು ಹೀಗೆ ವಿಶ್ಲೇಷಿಸಬಹುದು.

೧. ಬಿಜಾಪುರದ ಹೊರವಲಯದಲ್ಲಿದ್ದ ಚಿಸ್ತಿಗಳು ಸಾಹಿತ್ಯದ ಬೆಳವಣಿಗೆಗೆ ಕಾರಣರಾದರು.

೨. ನಗರದ ಒಳಗಿದ್ದ ಖಾದ್ರಿ ಮತ್ತು ಶತ್ತಾರಿಗಳು ಸಮಾಜದ ಸುಧಾರಣೆಗೆ ಗಮನ ಕೊಟ್ಟರು.

ಆದಿಲ್‌ಷಾಹಿಗಳ ಕಾಲದ ಹಿಂದೂ ಧರ್ಮದಲ್ಲಿನ ಒಂದು ಪ್ರಮುಖ ಬೆಳವಣಿಗೆಯನ್ನು ಗುರುತಿಸಬಹುದು. ಅದೇ ದಾಸ ಪರಂಪರೆಯ ಏಳಿಗೆ. ಅವರಲ್ಲಿ ರುಕ್ಮಾಂಗದ ಪಂಡಿತ, ಮಹಿಪತಿರಾಯರು ಪ್ರಮುಖರು. ರುಕ್ಮಾಂಗದ ಒಬ್ಬ ಸಮಾಜ ಸುಧಾರಕ, ಶ್ರೇಷ್ಠ ಸಂಗೀತಗಾರ, ವೈದ್ಯ ಮತ್ತು ಯೋಗಿ. ಇಬ್ರಾಹಿಂ ಆದಿಲ್‌ಷಾಹನು ಇವನಿಂದ ಸರಸ್ವತಿಯ ದೀಕ್ಷೆ ಪಡೆದಿದ್ದನು. ರುಕ್ಮಾಂಗದನು ವಿಠ್ಠಲನ ಭಕ್ತನಾಗಿದ್ದನು. ಕೀರ್ತನೆ, ಹರಿಕಥೆಗಳನ್ನು ಮಧುರವಾಗಿ ಹಾಡುತ್ತಿದ್ದನು.

ಮಹಿಪತಿರಾಯರು ಕಾಖಂಡಕಿಯ ಐಗಳಿ ಕುಲಕರ್ಣಿ ಮನೆತನಕ್ಕೆ ಸೇರಿದವರು. ಸುಮಾರು ೭೦೦ ಕೀರ್ತನೆಗಳನ್ನು ಸೇರಿಸಿ ಹಾಡಿದ್ದಾರೆ. ಇವರಲ್ಲದೆ ಕೃಷ್ಣದಾಸ, ಪ್ರಸನ್ನ ವೆಂಕಟದಾಸ, ಗಲಗಲಿ ಅವ್ವನವರು, ಸಿಂದಗಿಯ ಭೀಮಾಶಂಕರರು, ಅವರ ಮಗ ಜಕ್ಕಪ್ಪಯ್ಯ ಪ್ರಮುಖರು. ಭೀಮಾಶಂಕರರು 'ಭೀಮಾಶಂಕರ' ಎಂಬ ಹೊಸ ಮತಪರಂಪರೆಯನ್ನೇ ಹುಟ್ಟು ಹಾಕಿದರು. 'ಭೀಮಾಶಂಕರ' ಮತಪರಂಪರೆ ನಾಥಪರಂಪರೆಗೆ ಸಮೀಪವಾದುದಾಗಿದೆ.

ಸರ್ವ ಧರ್ಮಗಳ ಆಶ್ರಯತಾಣವಾಗಿದ್ದ ಬಿಜಾಪುರ ಸುಲ್ತಾನರ ಕಾಲಘಟ್ಟವು ಕರ್ನಾಟಕ ಇತಿಹಾಸದ ಓದುಗರಿಗೆ ಸೌಹಾರ್ದತೆಯ ಪಾಠವನ್ನು ಹೇಳುತ್ತದೆ. ೧೪೮೯ರಿಂದ ೧೬೮೬ರವರೆಗಿನ ಸುಮಾರು ಎರಡು ಶತಮಾನಗಳ ಆದಿಲ್‌ಷಾಹಿಗಳ ರಾಜ್ಯಾಡಳಿತದಲ್ಲಿ ಪರಸ್ಪರ ದ್ವೇಷ, ಅಸೂಯೆ, ಗುಂಪುಗಾರಿಕೆ, ರಾಜಕೀಯ ಸಂಚು, ಕೊಲೆ ಇತ್ಯಾದಿಗಳಿಗೇನೂ ಕೊರತೆ ಇಲ್ಲ. ಯುದ್ಧ, ರಾಜ್ಯ ವಿಸ್ತರಣೆ ಮೊದಲಾದ ರಾಜಕೀಯ ಮೇಲಾಟದಲ್ಲಿ ಹಲವು ಹಿಂದೂ-ಮುಸ್ಲಿಮರು ಜೀವ ಕಳೆದುಕೊಂಡಿರುವುದುಂಟು. ಧಾರ್ಮಿಕ ವಿಷಯವಾಗಿ ಷಿಯಾ-ಸುನ್ನಿ ಪಂಥದವರ ನಡುವೆ, ವಿದೇಶಿ ಮತ್ತು ಸ್ಥಳೀಯ ಮುಸ್ಲಿಮರ ನಡುವೆ, ಅವರವರ ಗುರು ಶಿಷ್ಯರ ನಡುವೆ, ಲಿಂಗಾಯತ-ಜೈನರ ನಡುವೆ ಹಲವಾರು ಸಲ ಕಲಹಗಳು ಏರ್ಪಟ್ಟಿರುವುದುಂಟು. ಆದರೆ ಗಮನಿಸಬೇಕಾದ ಬಹು ಮುಖ್ಯ ಅಂಶವೆಂದರೆ, ಹಿಂದೂ-ಮುಸ್ಲಿಮರ ನಡುವೆ ಈ ರೀತಿಯ ಯಾವುದೇ ಕಲಹಗಳಾಗಲಿ, ದಂಗೆಗಳಾಗಲಿ, ಸಾವು-ನೋವುಗಳಾಗಲಿ, ಹಲ್ಲೆಗಳಾಗಲಿ, ಲೂಟಿಗಳಾಗಲಿ ನಡೆದ ಬಗ್ಗೆ ಯಾವೊಂದು ಸುಳಿವುಗಳಿಲ್ಲದಿರುವುದೇ ವಿಶೇಷ. ಇದು ಆದಿಲ್‌ಷಾಹಿಗಳ ಕಾಲದಲ್ಲಿ ಹಿಂದೂ ಮತ್ತು ಮುಸಲ್ಮಾನರ ನಡುವೆ ಇದ್ದ ಸಾಮಾಜಿಕ ಮತ್ತು ಧಾರ್ಮಿಕ ಸಾಮರಸ್ಯ, ಸೌಹಾರ್ದತೆ ಮತ್ತು ಸಹಬಾಳ್ವೆಯನ್ನು ತೋರ್ಪಡಿಸುತ್ತದೆ.

**ರಾಜೇಶ್ ಹೆಚ್. ಜಿ.**
ಇತಿಹಾಸ ಉಪನ್ಯಾಸಕರು, ಸರ್ಕಾರಿ ಸ್ವತಂತ್ರ ಪದವಿಪೂರ್ವ ಕಾಲೇಜು ಸೀಗೇಹಳ್ಳಿ
ತುರುವೇಕೆರೆ ತಾಲೂಕು, ತುಮಕೂರು ಜಿಲ್ಲೆ.







**ಕಷ್ಟಕುಲದ ಕಥೆ** (ದಲಿತರ ಸಬಲೀಕರಣ ಅಧ್ಯಯನಗಳು)

*ಟಿ. ಆರ್. ಚಂದ್ರಶೇಖರ*

**ಪುಟ : xvi + ೯೬ = ೧೧೨**

**ಬೆಲೆ : ರೂ. ೮೦**

**ಲಡಾಯಿ ಪ್ರಕಾಶನ**

ನಂ. ೨೧, ಪ್ರಸಾದ್ ಹಾಸ್ಟೆಲ್
ಗದಗ – ೫೮೨ ೧೦೧

*ದಲಿತರ ಬಗ್ಗೆ ಈ ದೇಶದಲ್ಲಿ ಎಷ್ಟು ಮಾತನಾಡಿದರೂ ಪೂರ್ಣವಿರಾಮ ಎಂಬುದು ಇರುವುದಿಲ್ಲ. ವಚನಕಾರರೆಲ್ಲ ಈ ವರ್ಗದ ಜನರ ಬಗ್ಗೆಯೇ ಹೆಚ್ಚು ಕಾಳಜಿ ವಹಿಸಿದ್ದು ಸ್ಪಷ್ಟ. ಹೆಚ್ಚಿನ ವಚನಕಾರರು ಕೆಳವರ್ಗಗಳಿಂದಲೇ ಬಂದಿದ್ದು, ದೀಕ್ಷೆಯನ್ನು ಪಡೆದು ಲಿಂಗಧಾರಣೆಮಾಡಿ ಶೈವಪಂಥಕ್ಕೆ ಸೇರಿದವರು. ಕಷ್ಟಜಾತಿ ಮತ್ತು ಕಷ್ಟಕುಲದವರು ತಾವು ಎಂಬಂತೆ ಅವರು ಪರಿಭಾವಿಸಿಕೊಂಡಿದ್ದಕ್ಕೆ ಆ ಪದಗಳನ್ನು ಬಳಸಿದ ಕೆಲವು ವಚನಗಳಿವೆ. ಅವರು ಅಸ್ಪೃಶ್ಯತೆಯ ವಿರುದ್ಧದ ಆಂದೋಲನವನ್ನು, ಕ್ರಾಂತಿಯನ್ನು ಸಾಹಿತ್ಯದ ಮೂಲಕವೇ ಮಾಡಿದರು. ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಏನು ದಲಿತರ ಉದ್ಧಾರವಾಗಿದೆ ಎಂದು ಹೇಳಲಾಗುತ್ತದೋ ಅದು ನಿಜವಾಗಿ ಆಗಬೇಕಾದಷ್ಟು ಪ್ರಮಾಣದಲ್ಲಿ ಆಗಿಲ್ಲವೆಂದು ಇಲ್ಲಿನ ಅಧ್ಯಯನಶೀಲ ಬರಹಗಳು ಹೇಳುತ್ತವೆ. ನಮ್ಮಲ್ಲಿ ಪ್ರಾಮಾಣಿಕವಾಗಿ ದಲಿತರ–ಅಸ್ಪೃಶ್ಯರ ಬಗ್ಗೆ ಚಿಂತಿಸಿದವರು ಬಾಬಾ ಸಾಹೇಬ್ ಅಂಬೇಡ್ಕರ್. ರಾಜಕೀಯವಾಗಿ, ಸಾಮಾಜಿಕವಾಗಿ ಹೋರಾಟಮಾಡಿ ಪರಿಶಿಷ್ಟರಿಗೆ ಕೆಲವು ಸೌಲಭ್ಯಗಳು ಸಿಗುವಂತೆ ಮಾಡಿದರು. ಆದರೆ ಇಂದಿಗೂ ಮೀಸಲಾತಿಗಳಿಂದ ಮಾತ್ರ ಮೇಲೆ ಬಂದು ಹೆಸರಿಗೆ ಮಾತ್ರ ಅಧಿಕಾರದಲ್ಲಿರುವ ಸ್ಥಿತಿ ಅವರದ್ದು. ನಿಜವಾಗಿ ಸಾಮಾಜಿಕ ಸ್ತರದಿಂದ ಇನ್ನೂ ಮೇಲೇರಿಲ್ಲ, ದಲಿತರ ಬಗ್ಗೆ ಮಾತನಾಡಿ ಅವರ ಹೆಸರಿನಲ್ಲಿ ಬೇರೆಯವರು ಉದ್ಧಾರವಾದದ್ದೇ ನಮ್ಮ ದೇಶದಲ್ಲಿ ಜಾಸ್ತಿ ಎಂಬುದು ಇಲ್ಲಿನ ಅಧ್ಯಯನಗಳ ಸಾರ.*

**ನೊಂದ ಮಹಿಳೆಯರು ಆತ್ಮವಿಶ್ವಾಸದೆಡೆಗೆ**




*ಜಿ. ಎಸ್. ಜಯದೇವ*

**ಪುಟ : ೧೦೪** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಹಟ್ಟಿಯಲ್ಲಿ ಹೆಣ್ಣು ಕರು ಹುಟ್ಟಲಿ, ಮನೆಯೊಳಗೆ ಗಂಡು ಮಗು ಹುಟ್ಟಲಿ ಎಂದು ಆಶಿಸಿದ ನಮ್ಮ ಪೂರ್ವಿಕರು ಕುಟುಂಬ–ಖಾಸಗಿ ಆಸ್ತಿ ರೂಪುಗೊಳ್ಳುತ್ತಿದ್ದ ಕಾಲದವರು. ಇದೀಗ ಬಡತನ ನಿವಾರಣೆಯೆಂದರೆ ಬಡವರನ್ನೇ ನಿರ್ನಾಮ ಮಾಡುವುದು – ಮಹಿಳಾ ಸಮಸ್ಯೆ ನಿವಾರಿಸುವುದೆಂದರೆ ಹೆಣ್ಣು ಭ್ರೂಣವನ್ನೇ ನಾಶಪಡಿಸುವುದು – ಎಂಬಲ್ಲಿಗೆ ನಾವು ಬಂದು ತಲುಪಿದ್ದೇವೆ. ಪರಿಸ್ಥಿತಿಯ ದಿಕ್ಕು ಬದಲಾಗಿ ತತ್ಪರಿಣಾಮದ ಫಲಿತಾಂಶಗಳು ಕಣ್ಣೆದುರು ಗೋಚರಿಸುತ್ತಿವೆ. ಇವೆಲ್ಲ ಯಾಕಾಗಿ ಹೀಗಾಗುತ್ತದೆ ಎಂದರೆ ನಮ್ಮಲ್ಲಿನ ಸಮಾಜವ್ಯವಸ್ಥೆ ನಾವೇ ರೂಪಿಸಿಕೊಂಡಿದ್ದು ಹೀಗೆ. ಮಹಿಳೆಯರಿಗೆ ಆತ್ಮವಿಶ್ವಾಸದ ಕೊರತೆ – ಕೀಳರಿಮೆ ಹಾಗೂ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಇನ್ನೊಬ್ಬರನ್ನು ಅವಲಂಬಿಸಿ ಬಾಳಬೇಕಾದಾಗ ಆಕೆಗೆ ಸಂಕಷ್ಟಗಳು ಮುತ್ತಿಕೊಳ್ಳುತ್ತವೆ. ಕೌಟುಂಬಿಕ ಕ್ರೌರ್ಯ ಆಕೆಯಲ್ಲಿ ಮನೋದೈಹಿಕ ಕಾಯಿಲೆಗಳನ್ನು ತರಬಹುದು. ಇಂದಿನ ಮಹಿಳೆ ಇವುಗಳಿಂದ ಕೆಲಮಟ್ಟಿಗಾದರೂ ಮುಕ್ತಳಾಗಿದ್ದಾಳೆಂದರೆ ಅದು ವಿದ್ಯಾಭ್ಯಾಸದಿಂದ ಮಾತ್ರ. ಹಿಂದಿನ ಕಾಲಕ್ಕೆ ಹೋಲಿಸಿದರೆ ಆಕೆಯ ಸ್ಥಿತಿಯಲ್ಲಿ ಎಷ್ಟೋ ಬದಲಾವಣೆಯಾಗಿದೆ ಎಂಬುದು ಸತ್ಯ. ಆದರೂ ಆಕೆಗೆ ಹೊಸ ಹೊಸ ರೀತಿಯ ಸವಾಲುಗಳು ಹೊಸ ಪರಿಸ್ಥಿತಿಯಲ್ಲಿ ಎದುರಾಗಿವೆ. ಆಕೆಗೆ ಉಗುಳಲೂ ಆಗದ ನುಂಗಲೂ ಆಗದ ಬಿಸಿ ತುಪ್ಪದಂತಹ ಹಲವಾರು ಸಮಸ್ಯೆಗಳು ದುಡಿಯುವ ಹೆಣ್ಣು ಮಕ್ಕಳಿಗೆ ಇಂದಿಗೂ ಇವೆ. ಅವೇನೆಂದು ಕೆಲವು ಉದಾಹರಣೆ ಸಹಿತ ಇಲ್ಲಿ ಹೇಳಲಾಗಿದೆ.*




**ಗೆಲುವು ನನ್ನದೇ** (ಉದ್ಯೋಗಾಕಾಂಕ್ಷಿಗಳಿಗೆ ಮಾರ್ಗದರ್ಶಿ)

*ಕಿರಣ್ ಪ್ರಸಾದ್ ರಾಜನಹಳ್ಳಿ*

**ಪುಟ : ೧೦೮** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಇದು ಆತುರದ ಯುಗ. ಅದಕ್ಕೆ ತಕ್ಕಂತೆ ನಿಮ್ಮ ಕೌಶಲ ರೂಪುಗೊಳ್ಳದಿದ್ದಲ್ಲಿ ವೃತ್ತಿಕ್ಷೇತ್ರದಲ್ಲಿ ನೀವು ಕಾಲೂರಿ ನಿಲ್ಲಲಾರಿರಿ. ಇತ್ತೀಚೆಗೆ ಜಗತ್ತಿನ ವ್ಯಾವಹಾರಿಕ ಕ್ಷೇತ್ರ ಬಹುವೇಗದಿಂದ ಬದಲಾಗುತ್ತಿದೆ. ಅಪ್ಪನ ಕಾಲದ ಉದ್ಯೋಗದ ಸ್ವರೂಪ ಮಗನ ಕಾಲಕ್ಕೆ ಹುಬ್ಬೇರಿಸುವಂತೆ ಬದಲಾಗಿದೆ. ಸೈಕಲ್ ತುಳಿದು ಕಾರ್ಖಾನೆಗೆ ಕೆಲಸಕ್ಕೆ ಹೋಗುತ್ತಿದ್ದವನ ಮೊಮ್ಮಗ ಮೆಟ್ರೋದಲ್ಲಿ ಸಂಚರಿಸುತ್ತ ಲ್ಯಾಪ್ ಟಾಪ್ ಹಿಡಿದು ಕ್ಷಣಾರ್ಧದಲ್ಲಿ ತನ್ನ ಉದ್ಯೋಗದಾತನಿಗೆ ಇ–ಮೇಲ್ ಕಳಿಸುತ್ತಾನೆ. ಮಾಹಿತಿ ತಂತ್ರಜ್ಞಾನದ ಕ್ಷೇತ್ರವಂತೂ ಜಗತ್ತನ್ನೇ ತನ್ನ ಅಂಗೈಯಲ್ಲಿ ಹಿಡಿದು ಆಡಿಸುತ್ತದೆ. ಬದಲಾದ ಪರಿಸರಕ್ಕೆ ತಕ್ಕಂತೆ ಸಾಕಷ್ಟು ಉದ್ಯೋಗಾವಕಾಶಗಳೂ ಯುವ ಜನತೆಯನ್ನು ಆಕರ್ಷಿಸುತ್ತಿವೆ. ಅದಕ್ಕೆ ಬೇಕಾದಂಥ ತರಬೇತಿಗಳು ನಿಮ್ಮ ಕೈಗೆಟುಕುವಂತಿವೆ. ಆಯ್ಕೆ ನಿಮ್ಮದು! ಕಛೇರಿಗಳಲ್ಲಿ ಮಾಡುವ ಕೆಲಸದ ಎಲ್ಲ ರೀತಿಗಳು ಬದಲಾಗಿವೆ. ಫೇಸ್‌ಬುಕ್ – ಟ್ವಿಟರ್ – ಬ್ಲಾಗ್ – ಪೆನ್‌ಡ್ರೈವ್ – ಇಂಟರ್‌ನೆಟ್ – ಅಬ್ಬಾ! ಇವನ್ನೆಲ್ಲಾ ನೀವು ಕಲಿತುಕೊಂಡಿದ್ದೀರಾ? ನೀವು ಹಳೆಯ ಕಾಲದ ಚಲಾವಣೆಯಲ್ಲಿಲ್ಲದ ಕೆಲಸಗಳನ್ನು ಮರೆತು ಹೊಸ ಆವಿಷ್ಕಾರಗಳಿಗೆ ಒಗ್ಗಿಕೊಳ್ಳಬೇಕು. ಇಂದಿನ ಹೊಸಲೋಕ ಅರಿತುಕೊಳ್ಳಬೇಕು. ಹೊಸ ಕೋರ್ಸ್ – ಹೊಸ ಹೊಸ ಉದ್ಯೋಗಾವಕಾಶಗಳು. ಬದಲಾವಣೆಯೆಂಬ ಬಿರುಗಾಳಿಗೆ ತೂರಿ ಹೋಗದೆ ದೃಢವಾಗಿ ನಿಲ್ಲಬೇಕು. ಬನ್ನಿ – ಇಂದಿನ ಹೊಸ ಉದ್ಯೋಗಾವಕಾಶಗಳನ್ನು ತಿಳಿಸುವ ಮಾಹಿತಿಯ ಮಹಾಪೂರ ಪರಿಚಯಿಸಲಾಗಿದೆ.*

**ದೇವದಾಸಿ ಮತ್ತು ಬೆತ್ತಲೆ ಸೇವೆ**

*ಮೂಲ ಮರಾಠಿ : ಉತ್ತಮ ಕಾಂಬಳೆ; ಕನ್ನಡಕ್ಕೆ : ಡಾ|| ಸಿದ್ರಾಮ ಕಾರಣಿಕ*

**ಪುಟ : ೧೨೪ + ೪** **ಬೆಲೆ : ರೂ. ೧೦೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ನಮ್ಮ ಕಾಲದ ವೈಪರೀತ್ಯಗಳು ಹಲವಾರು. ಒಂದು ಕಡೆ ಅಭಿವೃದ್ಧಿಯ ಗಾನ ಕೇಳಿ ಬರುತ್ತಿದ್ದರೆ ಇನ್ನೊಂದೆಡೆ ಪಾತಾಳಕ್ಕಿಳಿದಿರುವ ಸಾಮಾಜಿಕ ವ್ಯವಸ್ಥೆಗಳ ಸವಾಲುಗಳಿವೆ. ಸಮಾಜಸೇವಾ ಸಂಘಟನೆಗಳು, ಸರಕಾರಗಳು ಸಮಾಜದಲ್ಲಿನ ಕೆಲವು ಅತಿ ಹೇಯ ಅನಿಷ್ಟ ಪದ್ಧತಿಗಳನ್ನು ನಿರ್ಮೂಲನಗೊಳಿಸಲು ಹೋರಾಟ ನಡೆಸುತ್ತಿದ್ದರೆ ಅವನ್ನು ಶತಾಯಗತಾಯ ಉಳಿಸಿಕೊಳ್ಳಲು ಸಂಬಂಧಿಸಿದ ಕೆಲವರ್ಗಗಳು ಹುನ್ನಾರ ನಡೆಸುತ್ತಿವೆ. ಇದರಲ್ಲಿ ಪರಂಪರೆಯಿಂದ ನಡೆದುಕೊಂಡು ಬಂದಿದ್ದನ್ನು ಕೈಬಿಡಲಾಗದು ಎಂಬ ವ್ಯಾಖ್ಯೆ ನೀಡಿ ಪ್ರತಿಷ್ಠಿತ ವರ್ಗ ಅಡ್ಡಗಾಲು ಹಾಕುತ್ತಿದೆ. ದೇವದಾಸಿ – ಬೆತ್ತಲೆಸೇವೆಯಂಥ ಕ್ರೂರ – ಅಸಂಸ್ಕೃತಿ ಪದ್ಧತಿ ಉಳಿಸಿಕೊಳ್ಳಲು ನಮ್ಮ ಭಾರತದಲ್ಲಿ ಚಂದ್ರಗುತ್ತಿ – ಸವದತ್ತಿಯಂತಹ ಜಾಗಗಳಿವೆ. ವಿರೋಧಕ್ಕಿಂತ ಪರವಾಗಿ ವಾದಿಸುವವರು ಹೆಚ್ಚಾಗಿದ್ದಾರೆ. ಕಾನೂನು–ದಂಡಗಳಿಗೆ ಹೆದರದೆ ಆಯಾ ಕಾಲಕ್ಕೆ ಜಾತ್ರೆಯ ಸಮಯಕ್ಕೆ ಎದ್ದು ನಿಂತು ಕೇಕೆ ಹಾಕಿ ಕುಣಿಯುತ್ತವೆ. ಕಾನೂನೂ ಇದೆ – ಪದ್ಧತಿಯೂ ಇದೆ ಎಂಬಂತಾಗಿದೆ ನಮ್ಮ ಭಾರತದ ಭವ್ಯ ಸಂಸ್ಕೃತಿಯ ಕಥೆ! ಇಂಥ ಪದ್ಧತಿಗಳನ್ನು ದೇವರ ಹೆಸರಿನಲ್ಲಿ ನಮ್ಮ ಸನಾತನ ಹಿಂದೂ ಸಮಾಜ ರಾಜಾರೋಷವಾಗಿ ನಡೆಸಿಕೊಂಡು ಬರುತ್ತಿದೆ. ಜನಜಾಗೃತಿ ಮೂಡದೆ ಯಾವುದೇ ಕಾನೂನು ಮಾಡಿದರೂ ನಡೆಯಬೇಕಾದ್ದು ತೆರೆಮರೆಯಲ್ಲಿ ನಡೆಯುತ್ತಿರುತ್ತದೆ. ಹೀಗೆ ಸಾಮಾಜಿಕ ಅನಿಷ್ಟಗಳ ಬಗ್ಗೆ ಜನರಲ್ಲಿ ತಿಳಿವು ಮೂಡಿಸಲು ಈ ಕೃತಿಯಲ್ಲಿ ಪ್ರಯತ್ನಿಸಲಾಗಿದೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

ದೊಡ್ಡ ದೊಡ್ಡೋರ ಸಂಗೀತ ಕೇಳೋದದಲ್ಲ ಅದೇ ಒಂದು ಪುಣ್ಯ. ಅದರಿಂದ ನಮ್ಮ ಸಂಗೀತದ ಜ್ಞಾನ ಅಭಿವೃದ್ಧಿ ಆಗ್ತದ. ಹಿಂಗಾಗಿ ನಾನು ತಂಬೂರಿ ಬಾರಿಸ್ಲಿಕ್ಕೆ ಹೋಗ್ತಿನಿ. ಇನ್ನು ಕೆಲವು ಕಡೆ ಕೆಲವು ಸಂಘ ಸಂಸ್ಥೆಗಳು ಉದಾಹರಣೆಗೆ, ಪಂಡಿತ್ ರವೀಂದ್ರ ಯಾವಗಲ್ ಅವರ ಶ್ರೀರಾಮ ಕಲಾ ವೇದಿಕೆ, ಪಂಡಿತ್ ಪರಮೇಶ್ವರ ಹೆಗಡೆ ಅವರ ರಾಜಗುರು ಸ್ಮೃತಿ, ಬೆಂಗಳೂರು ಗಾಯನ ಸಮಾಜ, ರಾಮಸೇವಾ ಮಂಡಳಿ, ಸುರ್ ಸಾಗರ್, ದೇವನಂದನ್ ಉಭಯಕರ್ ಉತ್ಸವ ಹೀಗೆ ಎಲ್ಲಾ ಕಡೆ ಹೋಗ್ತೀನಿ. ನಾನು ನನ್ನ ಜೀವನೋಪಾಯಕ್ಕೆ ಆಗೋವಷ್ಟು ಆಗಷ್ಟು ಈಗಷ್ಟು ಕೊಡ್ತಾರ. ನಾನೇ ಸ್ವತಃ ಒಂದು ಜೋಡಿ ತಂಬೂರಿ ಇಟ್ಕೊಂಡಿದೀನಿ. ಅದನ್ನ ಒಂದು ಆಟೋದಲ್ಲಿ ತೊಗೊಂಡು ಹೋಗ್ತೀನಿ. ತೊಗೊಂಡು ಬರ್ತೀನಿ. ಹೀಗೆ ಜೀವನ ನಡದದ್ರೀ...


ಪಂ. ಭೀಮಸೇನ ಜೋಶಿಯವರೊಂದಿಗೆ


ಪಂ. ಶಿವಕುಮಾರ್ ಶರ್ಮ ಜೊತೆಗೆ


ಡಾ|| ಬಾಲಮುರಳೀ ಕೃಷ್ಣ ಅವರೊಂದಿಗೆ


ಪಂ. ಬಸವರಾಜ ರಾಜಗುರು ಜೊತೆಗೆ

# ತಂಬೂರಿ ಮೀಟಿದವ... ವಿಜಯಕುಮಾರ್ ದೇಸಾಯಿ

ನಾನು ಒಬ್ಬ ಸಂಪೂರ್ಣ ಪ್ರಮಾಣದ ವೃತ್ತಿಪರ ಸಂಗೀತಗಾರನಾಗಬೇಕು ಅಂತ ನಿರ್ಧಾರ ಮಾಡಿ ೧೯೯೧ರಲ್ಲಿ ನನ್ನ ಆಕಾಶವಾಣಿಯ ಅಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದೆ. ಕೈಲಾದಷ್ಟು ಪಾಠಗಳನ್ನ ಹೇಳಿ ಮನೆ ಖರ್ಚಿಗಾಗುವಷ್ಟು ಸಂಪಾದಿಸುತ್ತಿದ್ದೆ. ಗುರುಗಳು ಕಲಿಸಿದ ರಾಗಗಳನ್ನ ಅಭ್ಯಾಸ ಮಾಡಿ ನನ್ನ ಸಂಗೀತದ ಹಾದಿಯನ್ನ ಪಕ್ವಗೊಳಿಸುತ್ತಿದ್ದೆ. ಆಗೊಂದು ಈಗೊಂದು ಕಾರ್ಯಕ್ರಮಗಳು ಬರ್ತಾ ಇದ್ವು. ಆದರೂ ತಮಗಾಗಿ ಹೇಳ್ತೀನಿ : ನಾನು ಆಕಾಶವಾಣಿ ಅಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದಾಗ ನನ್ನ ಬ್ಯಾಂಕ್ ಬ್ಯಾಲನ್ಸ್ ೫೦೦ ರೂಪಾಯಿ! ಆವಾಗಾಗಲೇ ನನಗೆ ಎರಡು ಗಂಡು ಮಕ್ಕಳಿದ್ದರು. ಬೆಂಗಳೂರಲ್ಲಿ ಒಂದು ಬಾಡಿಗೆ ಮನೆ. ಹೀಗೆ ಸಂಸಾರ ನಡೆದಿತ್ತು.

೧೯೯೫ರಲ್ಲಿ ಒಂದು ಸಂಗೀತ ಕಾರ್ಯಕ್ರಮಕ್ಕೆ ಹೋಗಿದ್ದೆ. ಒಬ್ಬ ಉದ್ಯಮಿಯ ಮನೆಯಲ್ಲಿ ನಡೆದ ಸಮಾರಂಭ. ಹಲವಾರು ಶ್ರೀಮಂತ ವ್ಯಕ್ತಿಗಳು ನೆರೆದಿದ್ದರು. ನನ್ನ ಪರಿಚಯ ಮಾಡಿ 'ಡಾ|| ನಾಗರಾಜರಾವ್ ಹವಾಲ್ದಾರ್ ಅವರಿಂದ ಸಂಗೀತ' ಎಂದು ಉದ್ಘೋಷಣೆ. ಎರಡೂವರೆ ಗಂಟೆ ಹಾಡಿದೆ. ಹಾಡಿದ ಮೇಲೆ ಒಬ್ಬ ಸೂಟ್‌ಧಾರಿಯಾದ ವ್ಯಕ್ತಿ ಬಂದು 'ಡಾ|| ಹವಾಲ್ದಾರ್, ನಿಮ್ಮ ಸಂಗೀತ ಬಹಳ ಚೆನ್ನಾಗಿತ್ತು. ನೀವೇನ್ಮಾಡ್ತೀರಿ ?' ಅಂತ ಕೇಳಿದ್ರು. 'ನಾನು ಸಂಗೀತಗಾರ ಸರ್, ಹಾಡು ಹೇಳ್ತೀನಿ' ಅಂದೆ. 'ಅದು ನಿಜ. ನಾನು ಈಗ ತಾನೆ ಕೇಳ್ದೆ ನಿಮ್ಮ ಸಂಗೀತನ. ಆದ್ರೆ ನಿಮ್ಮ ಹೆಸರಿನ ಹಿಂದೆ ಡಾಕ್ಟರ್ ಅಂತ ಇದೆಯಲ್ಲ ? ಇದೇನು ? ನೀವು ಯಾವ ಡಾಕ್ಟರ್' ಅಂತ ಕೇಳಿದ್ರು. ನಾನು ಮತ್ತೊಮ್ಮೆ ಅಷ್ಟೇ ವಿನಮ್ರವಾಗಿ 'ಇಲ್ಲ ಸರ್, ನಾನೊಬ್ಬ ಸಂಗೀತಗಾರ. ನಾನು ಹಾಡು ಹೇಳ್ತೀನಿ' ಅಂದೆ. ಅಲ್ಲಿಗೆ ಅವರ ತಾಳ್ಮೆ ಮುಗಿದಿತ್ತು. 'ಅದಿರ್ಲಿ ಹವಾಲ್ದಾರ್, ಊಟಕ್ಕೆ ಏನ್ ಮಾಡ್ತಿರಾ ?' ಅಂತ ಕಳಕಳಿಯಿಂದಲೇ ಕೇಳಿದ್ರು. ಅಂದರೆ ಸುಮಾರು ೨೧ ವರ್ಷಗಳ ಹಿಂದೆ ನಮ್ಮ ಸಮಾಜ, ಸಾಮಾಜಿಕ ಸ್ಥಿತಿ, ಆರ್ಥಿಕ ಪರಿಸ್ಥಿತಿ, ಜೀವನ ಶೈಲಿ, ಸಾಮಾಜಿಕ ಮೌಲ್ಯಗಳು ಎಲ್ಲಾ ಬದಲಾದ ಕಾಲದಲ್ಲೂ, ಒಬ್ಬರು ಸಂಗೀತಗಾರರಾಗಿ ತೃಪ್ತಿಯಿಂದ ಜೀವನ ನಡೆಸಬಹುದು ಅನ್ನೊ ಕಲ್ಪನೆ ಕೆಲವು ಜನಕ್ಕಿರಲಿಲ್ಲ. ಇದು ಸಂಗೀತಗಾರರ ಬಗ್ಗೆ ಒಂದು ವರ್ಗದ ಜನಕ್ಕಿರುವ ಕಲ್ಪನೆ. ಇದು ವೃತ್ತಿಪರ ಗಾಯಕನ ವಿಷಯ ಆಯ್ತು. ಹಾಗಾದ್ರೆ ಇನ್ನು ಸಹ ಕಲಾವಿದರು, ಅದರಲ್ಲೂ ತಂಬೂರಿ ನುಡಿಸುವವರು ಅವರ ಜೀವನ ಹೇಗೆ ನಡೆಯಬಹುದು ಅಂತ ನಾವೇನಾದ್ರು ಯೋಚನೆ ಮಾಡಿದೀವಾ ?

ಪುರಂದರದಾಸರು ಹೇಳ್ತಾರೆ, 'ತಂಬೂರಿ ಮೀಟಿದವಾ ಭವಾಬ್ಧಿ ದಾಟಿದವ.' ಅದಕ್ಕೆ ಲೌಕಿಕ ಹಾಗೂ ಪಾರಮಾರ್ಥಿಕ ಅರ್ಥಗಳನ್ನ ನೀಡ್ತಾ ಹೋಗ್ಬಹುದು. ಆದರೆ ಸಂಗೀತದ ವಲಯಗಳಲ್ಲಿ ತಂಬೂರಿ ನುಡಿಸ್ಲಿಕ್ಕೆ ಅಥವಾ ತಂಬೂರಿಗೆ ಎಷ್ಟು ಮಹತ್ವ ಇದೆ ಅನ್ನೋದಕ್ಕೆ ನಿಮಗೆ ಒಂದು ಚಿಕ್ಕ ಉದಾಹರಣೆಯನ್ನ ಹೇಳ್ತೀನಿ. ನಾನು ಧಾರವಾಡದಲ್ಲಿ ಸಂಗೀತರತ್ನ ಪದವಿಯ ಆರನೇ ವರ್ಷದ ಪರೀಕ್ಷೆಗೆ ಕೂತಾಗ ಪಂ. ಮಲ್ಲಿಕಾರ್ಜುನ ಮನ್ಸೂರ್ ಅವರು ಸಂಗೀತ ವಿಭಾಗದ ಮುಖ್ಯಸ್ಥರು ಆಗಿದ್ದರು ಹಾಗೂ ಪರೀಕ್ಷಕರಾಗಿ ಬಂದು ಕೂತಿದ್ದರು. 'ನೋಡಪಾ, ನೀನು ಆ ತಂಬೂರಿ ತೊಗೊ. ಅದರ ತಂತಿಗಳನ್ನೆಲ್ಲಾ

ಡಾ|| ನಾಗರಾಜರಾವ್ ಹವಾಲ್ದಾರ್




**ಪಂ. ವೆಂಕಟೇಶ್ ಗೋಡಖಿಂಡಿ ಜೊತೆಗೆ**

ಸಡಿಲ ಮಾಡಿಬಿಡು. ನಾವು ಹಾರ್ಮೋನಿಯಂನಿಂದ ಆಧಾರ ಷಡ್ಜ 'ಸ' ಸ್ವರ ಒಂದು ನಿಮಗೆ ಕೊಡ್ತೀವಿ. ಅದನ್ನ ಆಧಾರವಾಗಿಟ್ಟುಕೊಂಡು ನೀನು ಉಳಿದ ಮೂರು ತಂತಿಗಳನ್ನ ಶುದ್ಧವಾಗಿ ಸೇರಿಸಬೇಕು. ನಿನಗ ೧೫ ಮಿನಿಟ್ ಟೈಮ್ ಕೊಡ್ತೀವಿ. ನೀನು ಎಷ್ಟು ಚೊಲೊ ತಂಬೂರಿ ಶೃತಿ ಮಾಡ್ತಿ ಅನ್ನೋದರ ಮೇಲೆ ನಿನಗ ಮಾರ್ಕ್ಸ್ ಕೊಡ್ತೀವಿ' ಅಂತ ಅಂದ್ರು. ವಿಚಾರ ಮಾಡ್ರಿ ಒಂದು ತಂಬೂರಿ ಶೃತಿ ಮಾಡ್ಲಿಕ್ಕೆ ೧೦೦ ಅಂಕಗಳ ಒಂದು ಪತ್ರಿಕೆಯಲ್ಲಿ ೫೦ ಅಂಕಗಳನ್ನ ಅವರು ಮೀಸಲಿಡಬೇಕು ಅಂದರೆ ತಂಬೂರಿ ಶೃತಿಗೊಳಿಸುವುದಕ್ಕೆ, ಅದರ ನುಡಿಸಾಣಿಕೆ ಎಷ್ಟು ಮಹತ್ವದ್ದು ಅಂತ ನಮಗೆ ಗೊತ್ತಾಗುತ್ತದೆ. ನನ್ನ ಗುರುಗಳಾದ ಪಂ. ಮಾಧವ ಗುಡಿಯವರಂತೂ ಪಂ. ಭೀಮಸೇನ ಜೋಶಿಯವರ ಹಿಂದೆ ವೀರಮಂಡಿ ಹಾಕಿಕೊಂಡು ತಂಬೂರಿ ನುಡಿಸ್ತಾ ಇದ್ರು. ಮೂರು ಗಂಟೆ. ಆರು ಗಂಟೆ! ಸ್ವಲ್ಪವೂ ಶೃತಿ ಕದಲದಂತೆ ನುಡಿಸುವುದು ಒಂದು ನಿಜವಾದ ಕಲೆ. ತಂಬೂರಿ ಸರಿಯಾಗಿದ್ದರೆ ಒಬ್ಬ ಗಾಯಕನ, ಒಬ್ಬ ವಾದಕನ ಸಂಗೀತ ಬಹಳ ಸುಂದರವಾಗಿ ಮೂಡಿಬರುತ್ತದೆ. ಇಷ್ಟೆಲ್ಲಾ ಪೀಠಿಕೆ ಸಂಗೀತಗಾರರ ಬಗ್ಗೆ ಮತ್ತು ತಂಬೂರಿ ನುಡಿಸುವವರ ಬಗ್ಗೆ ಯಾಕೆ ಅಂದ್ರೆ, ಇವತ್ತು ನಾವು ಒಬ್ಬ ತಂಬೂರಿ ಕಲಾವಿದನ ಜೀವನದ ಬಗ್ಗೆ ಒಂದು ಚಿಕ್ಕ ಪಕ್ಷಿನೋಟ ನೋಡಲಿದ್ದೇವೆ. ವಿಜಯಕುಮಾರ್ ಮುತಾಲಿಕ್ ದೇಸಾಯಿ ಆ ಕಲಾವಿದ.

ವಿಜಯಕುಮಾರ್ ಅವರು ಮೂಲತಃ ಧಾರವಾಡದವರು. ನಾನು ಧಾರವಾಡದಲ್ಲಿ ಎಂ.ಎ. ಓದುತ್ತಿರಬೇಕಾದರೆ, ಪಿಎಚ್.ಡಿ. ಮಾಡುತ್ತಿರಬೇಕಾದರೆ, ಸಂಗೀತ ಕಲಿಯುತ್ತಿರಬೇಕಾದರೆ, ಇವರು ನಮ್ಮ ಗುರುಗಳಾದ ಮಾಧವ ಗುಡಿಯವರ ಮನೆಗೆ ಬರ್ತಾ ಇದ್ರು. ಹಾಗೆನೇ ಇವರು ಜೀವನೋಪಾಯಕ್ಕಾಗಿ ಒಂದು ಆಟೋ ರಿಕ್ಷಾ ಓಡಿಸ್ತಾ ಇದ್ರು. ಹೀಗಾಗಿ ಧಾರವಾಡದ ವಲಯಗಳಲ್ಲಿ ಇವರಿಗೆ 'ರಿಕ್ಷಾ ದೇಸಾಯಿ' ಅಂತಾನೇ ಹೆಸರು. ಈಗ ಇವರು ತಂಬೂರಿ ಕಲಾವಿದರಾಗಿ ತಮ್ಮನ್ನ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ. ಇವರದು ಮನೆಯಲ್ಲಿ ಸಂಗೀತದ ಹಿನ್ನೆಲೆ. ತಂದೆ ದತ್ತಾತ್ರೇಯ ದೇಸಾಯಿ ಮರಾಠಿ ರಂಗಗೀತೆಗಳನ್ನ ಬಹಳ ಚೆನ್ನಾಗಿ ಹಾಡೋರು. ತಾಯಿ ಶಾಂತಾಬಾಯಿ ದೇವರನಾಮಗಳನ್ನ ಹಾಡೋರು. ಹೀಗಾಗಿ ಮನೆಯ ಸಂಗೀತದ ವಾತಾವರಣದಲ್ಲಿ ಬೆಳೆದು ಬಂದ ಇವರು ಮಾಧವ ಗುಡಿಯವರಲ್ಲಿ ಶಿಷ್ಯತ್ವ ವಹಿಸಿ ಸಂಗೀತ ಕಲಿಯುವ ಪ್ರಯತ್ನದಲ್ಲಿದ್ರು. ಮಾಧವ ಗುಡಿಯವರ ಶಿಷ್ಯತ್ವ ಅಂದರೆ ಅದೆಷ್ಟು ಸುಂದರವೋ ಅಷ್ಟೇ ಕಠಿಣವೂ ಆಗಬಹುದು. ಅದನ್ನ ನಾನೂ ಬಲ್ಲೆ, ಅವರ ಶಿಷ್ಯ ವೃಂದ ಎಲ್ಲಾ ಬಲ್ಲರು. ಆದರೂ ನಮ್ಮ ದೇಸಾಯಿಯವರು 'ಏ! ನಮ್ಮ ಗುರುಗಳು ಏನ್ರಪಾ ನನ್ನ ಆಟೋದಾಗ ರಗಡ ಸಾರಿ ಓಡಾಡ್ಯಾರ. ಊಟಕ್ಕೂ ಹಾಕ್ಯಾರ. ಅವರ ಜುಬ್ಬಾನೂ ಕೊಟ್ಟಾರ. ಹಿಂಗಾಗಿ ಅವರ ಬಗ್ಗೆ ನನಗೆ ಬಹಳ ಗೌರವ' ಅಂತ ಹೇಳ್ತಾರೆ.




**ದೇಸಾಯಿ ಆಟೋ ಮುಂದೆ ಪಂ. ಬಸವರಾಜ ರಾಜಗುರು**

ನಿಮಗೆ ಹೇಳ್ತೀನಿ, ಸಂಗೀತದ ಕಲಿಕೆ ಒಂದು ಕಡೆ, ಸಂಗೀತದ ಸೇವೆಯನ್ನ ಹಲವಾರು ರೀತಿಗಳಿಂದ ಮಾಡಬಹುದು. ಅದಕ್ಕೆ ನಮ್ಮ ದೇಸಾಯಿಯವರು ಒಂದು ಜ್ವಲಂತ ಉದಾಹರಣೆ. ದೇಸಾಯಿಯವರು ಧಾರವಾಡದಲ್ಲಿ ನಡೀತಿದ್ದ ಪ್ರತಿಯೊಂದು ಕಾರ್ಯಕ್ರಮದಲ್ಲೂ ತಮ್ಮ ಆಟೋ ಮತ್ತು ತಂಬೂರಿ ಮೂಲಕ ಹಾಜರಿರುತ್ತಿದ್ದರು. ಅವರ ಆಟೋದಲ್ಲಿ ಪ್ರಯಾಣ ಮಾಡಿದ ಎಲ್ಲ ಕಲಾವಿದರ ಪಟ್ಟಿ ಕೊಡ್ತಾ ಹೋದ್ರೆ ಒಂದು ಹೊತ್ತಿಗೆನೇ ಆಗಬಹುದು. ಆದರೆ ಕೆಲವು ಹೆಸರುಗಳನ್ನ ಇಲ್ಲಿ ಗಮನಿಸೋಣ. ಪದ್ಮವಿಭೂಷಣ ಪಂ. ಮಲ್ಲಿಕಾರ್ಜುನ ಮನ್ಸೂರ್, ಡಾ॥ ಗಂಗೂಬಾಯಿ ಹಾನಗಲ್, ಡಾ॥ ಬಸವರಾಜ ರಾಜಗುರು, ಪಂ. ಮಾಧವ ಗುಡಿ, ಪಂ. ಸೋಮನಾಥ ಮರಡೂರ್, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟೀ, ಪಂ. ರಸಿಕಲಾಲ ಅಂಧಾರಿಯಾ, ಶ್ರೀಮತಿ ವತ್ಸಲಾತಾಯಿ, ಪಂ. ಭೀಮಸೇನ ಜೋಶಿ ಹೀಗೆ ಕಲಾವಿದರ ಪಟ್ಟಿ ಬೆಳೀತಾ ಹೋಗತ್ತೆ. ಇವರೆಲ್ಲ ನಮ್ಮ ದೇಸಾಯಿಯವರ ರಿಕ್ಷಾದಲ್ಲಿ ನಿರಂತರ ಪ್ರಯಾಣ ಮಾಡಿದವರು. ಪಂ. ರಾಜಗುರು ಅವರಿಗಂತೂ ದೇಸಾಯಿ ಪರ್ಸನಲ್ ಡ್ರೈವರ್ ಆಗಿ ಕೆಲಸ ಮಾಡಿದರು. ಪಂ. ರಾಜಗುರು ಅವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಗೀತ ವಿಭಾಗದ ಅತಿಥಿ ಉಪನ್ಯಾಸಕರಾಗಿದ್ದಾಗ ದೇಸಾಯಿಯವರ ಆಟೋದಲ್ಲೇ ಬರೋರು. ಅವರು ಕೊಟ್ಟಷ್ಟು; ಇವರು ಇಸ್ಕೊಂಡಷ್ಟು ಯಾವತ್ತು ನನಗೆ ಇಷ್ಟೇ ಕೊಡ್ರಿ ಹಿಂಗೇ ಮಾಡ್ರಿ ಅಂತ ಮಾತನಾಡಿದವರಲ್ಲ ನಮ್ಮ ದೇಸಾಯಿಯವರು. ಒಮ್ಮೆ ರಾಜಗುರು ಅವರ ಹುಟ್ಟೂರಾದ ಯಲಿವಾಳಕ್ಕೂ ಸಹ ದೇಸಾಯಿಯವರು ಪಂ. ರಾಜಗುರು ಅವರನ್ನ ಕರಕೊಂಡು ಹೋಗಿದ್ರು. ಹಾಗೆಯೇ ಧಾರವಾಡದ ಪ್ರಸಿದ್ಧ ಸಂಗೀತೋತ್ಸವ ಉಸ್ತಾದ್ ರಹಮತ್ ಖಾನ್ ಅವರ ಪುಣ್ಯತಿಥಿಯಲ್ಲಿ ನಡೆಯುವ ಅಹೋರಾತ್ರಿ ಸಂಗೀತ ಕಾರ್ಯಕ್ರಮಕ್ಕೆ ಬರುವ ಎಲ್ಲ ಕಲಾವಿದರನ್ನ ಹೋಟೆಲ್ ರೂಮಿನಿಂದ ಕಲಾ ಭವನಕ್ಕೆ ಕರೆದುಕೊಂಡು ಬರುವುದು ಕಲಾ ಭವನದಿಂದ ವಾಪಸ್ ಅವರ ಹೋಟೆಲ್ ರೂಮಿಗೆ ಬಿಡುವುದು, ಮಧ್ಯೆ ಮಧ್ಯೆ ಕೆಲವು ಕಲಾವಿದರ ಜೊತೆಗೆ ತಂಬೂರಿ ಸಾಥ್ ಮಾಡುವುದು ಸಹ ನಮ್ಮ ದೇಸಾಯಿಯವರ ಪ್ರೀತಿಯ ಜವಾಬ್ದಾರಿಯಾಗಿತ್ತು. ಅವರು ಇವತ್ತಿಗೂ ನೆನಸ್ತಾರೆ 'ಹವಾಲ್ದಾರ್ ಅವರೆ, ನನಗೆ ಸಮಿತಿಯವರು ಪೆಟ್ರೋಲ್ ಚಾರ್ಜ್ ಕೊಡ್ತಿದ್ರು. ಉಳಿದಂತೆ ನಾನು ಅವರಿಂದ ಒಂದು ಪೈಸಾ ಇಸ್ಕೊಂಡಿಲ್ಲ' ಅಂತ.

ಹೀಗೆ ಇದ್ದ ದೇಸಾಯಿಯವರು ಸ್ವಲ್ಪ ದಿವಸದ ನಂತರ ಧಾರವಾಡದಲ್ಲಿ ಜೀವನ ಕಷ್ಟ ಅನಸ್ಲಿಕ್ಕೆ ಪ್ರಾರಂಭವಾದಾಗ ಬೆಂಗಳೂರಿಗೆ ತಮ್ಮ ಹೆಂಡತಿ ಮಕ್ಕಳ ಸಮೇತ ವಲಸೆ ಬಂದರು ಜೀವನವನ್ನ ಅರಸಿ. ಒಬ್ಬ ಶಾಸ್ತ್ರೀಯ ಸಂಗೀತಗಾರನಾಗಿ ಹಲವಾರು ಸಾಮಾಜಿಕ ಬದಲಾವಣೆಗಳನ್ನ ನಾನು ಗಮನಿಸಿದ್ದೇನೆ. ಹಾಗೆಯೇ ಕಚೇರಿಯ ಶೈಲಿ, ಅದರ ಪರಿಕರಗಳು ಇವೆಲ್ಲ ಬದಲಾಗುತ್ತಾ ಬಂದಿದೆ. ಈಗ ಎಷ್ಟೋ ಜನ ವೃತ್ತಿಪರ ಸಂಗೀತಗಾರರು ನಿಜವಾದ ತಂಬೂರಿ ಇಲ್ಲದೇನೆ ಇಲೆಕ್ಟ್ರಾನಿಕ್ ತಂಬೂರಿ ಇಟ್ಕೊಂಡು ಹಾಡುವುದನ್ನ ನಾವೆಲ್ಲ ಗಮನಿಸಿದ್ದೇವೆ. ಟಿ.ವಿ.ಯಲ್ಲಿ ಬರಬಹುದಾದ ರಾಷ್ಟ್ರೀಯ ಸಂಗೀತ ಕಾರ್ಯಕ್ರಮಗಳಲ್ಲೂ ಈ ಇಲೆಕ್ಟ್ರಾನಿಕ್ ತಂಬೂರಿಯನ್ನ ಗಮನಿಸಿದ್ದೇವೆ. ಹೀಗಿದ್ದಾಗ ಬೆಂಗಳೂರಿನಂತಹ ಒಂದು ಊರಿಗೆ ನಮ್ಮ ವಿಜಯಕುಮಾರ್ ದೇಸಾಯಿಯವರು ಬಂದು ತಂಬೂರಿ ನುಡಿಸುವುದನ್ನೇ ಮೂಲ ವೃತ್ತಿ, ಮೂಲ ಆಧಾರವಾಗಿಟ್ಟುಕೊಂಡು ಎರಡು ಮಕ್ಕಳ ಜೊತೆ ಬಂದು ಜೀವನ ಮಾಡುತ್ತಿರುವುದು ನಿಜವಾಗ್ಲೂ ಅವರಿಗೆ ಸಂಗೀತದ ಬಗ್ಗೆ ಇರುವ ಕಳಕಳಿ ಮತ್ತು ಅದರಲ್ಲಿ ಇರಬಹುದಾದ ಅಚಲವಾದ ನಂಬಿಕೆಯನ್ನು ತೋರಿಸುತ್ತಿದೆ. ತಾವು ತಂಬೂರಿ ನುಡಿಸುವುದನ್ನಷ್ಟೇ ಅಲ್ಲದೆ

ತಮ್ಮ ಹಿರಿಯ ಮಗ ದತ್ತಾತ್ರೇಯನಿಗೆ ಪಂ. ವೆಂಕಟೇಶ ಗೋಡಖಿಂಡಿ ಹಾಗೂ ಅವರ ಮಗ ಪಂ. ಪ್ರವೀಣ ಗೋಡಖಿಂಡಿ ಅವರಲ್ಲಿ ಬಾನ್ಸುರಿ ವಾದನದಲ್ಲಿ ತಾಲೀಮು ನೀಡಿದ್ದಾರೆ. ಇತ್ತೀಚೆಗಷ್ಟೇ ಅಖಿಲ ಭಾರತ ಮಟ್ಟದಲ್ಲಿ ಆಕಾಶವಾಣಿಯವರು ಆಯೋಜಿಸುವ ಸಂಗೀತ ಸ್ಪರ್ಧೆಯಲ್ಲಿ ದತ್ತಾತ್ರೇಯ ದೇಸಾಯಿ ಯವರಿಗೆ ರಾಷ್ಟ್ರಮಟ್ಟದಲ್ಲಿ ಹಿಂದೂಸ್ತಾನಿ ಬಾನ್ಸುರಿ ವಾದನಕ್ಕೆ ಮೊದಲ ಸ್ಥಾನ ಸಿಕ್ಕಿದೆ. ಅದು ಎಲ್ಲ ಕಲಾವಿದರು ಹಾಗೂ ಕನ್ನಡಿಗರು ಹೆಮ್ಮೆಪಡುವ ವಿಷಯ. ಹಾಗೇನೆ ಅವರ ಎರಡನೇ ಮಗ ನಂದಕಿಶೋರ ಅವರು ಡಾ॥ ರವೀಂದ್ರ ಕಾಟೋಟಿಯವರಲ್ಲಿ ಹಾರ್ಮೋನಿಯಂ ಅಭ್ಯಾಸ ಮಾಡುತ್ತಿದ್ದು ಒಬ್ಬ ಉದಯೋನ್ಮುಖ ಹಾರ್ಮೋನಿಯಂ ಕಲಾವಿದರಾಗಿ ಹೊರಹೊಮ್ಮುತ್ತಿದ್ದಾರೆ. ಎಷ್ಟೋ ಜನ ಆರ್ಥಿಕವಾಗಿ ಸುಗಮವಾಗಿ ಜೀವನ ನಡೆಸುವಂತಹವರೂ ಸಹ ಈ ತರಹದ ಒಂದು ಧೈರ್ಯಕ್ಕೆ ಅಂದರೆ ತಮ್ಮ ಮಕ್ಕಳನ್ನ ಸಂಪೂರ್ಣವಾಗಿ ಸಂಗೀತಕ್ಕೆ ತೊಡಗಿಸುವ ವಿಷಯದಲ್ಲಿ ಚರ್ಚೆ ಜಿಜ್ಞಾಸೆ ಮೂಡಿ 'ಡಾಕ್ಟರ್ ಆಗು, ಇಂಜಿನಿಯರ್ ಆಗು' ಅಂತ ಹೇಳುವ ಪರಿಸ್ಥಿತಿ ಇದ್ದಾಗ ನಮ್ಮ ದೇಸಾಯಿಯವರು ಈ ಕೆಲಸ ಮಾಡಿದ್ದಾರೆ. ಇದು ಸಂಗೀತ ಲೋಕಕ್ಕೆ ಒಂದು ಉನ್ನತವಾದ ಕೊಡುಗೆ.


ಡಾ॥ ಗಂಗೂಬಾಯಿ ಹಾನಗಲ್ ಅವರೊಡನೆ ದೇಸಾಯಿಯವರ ಕುಟುಂಬ

ಇನ್ನು ನಮ್ಮ ದೇಸಾಯಿಯವರು ಯಾವ ಯಾವ ಕಲಾವಿದರ ಜೊತೆ ಸಂಗೀತ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಾರೆ, ತಂಬೂರಿ ಸಾಥ್ ನೀಡಿದ್ದಾರೆ ಅದೂ ಒಂದು ದೊಡ್ಡ ಪಟ್ಟಿ ಬೆಳೀತಾ ಹೋಗತ್ತೆ. ಡಾ॥ ಮಲ್ಲಿಕಾರ್ಜುನ ಮನ್ಸೂರ್, ಡಾ॥ ಗಂಗೂಬಾಯಿ ಹಾನಗಲ್, ಡಾ॥ ಬಸವರಾಜ ರಾಜಗುರು, ಡಾ॥ ಬಿಂದುಮಾಧವ ಪಾಠಕ್, ಪಂ. ಸಂಗಮೇಶ್ವರ ಗುರವ್, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಪಂ. ರಸಿಕಲಾಲ್ ಅಂಧಾರಿಯಾ, ಪಂ. ಮಾಧವ ಗುಡಿ, ಪಂ. ಸೋಮನಾಥ ಮರಡೂರು, ಪಂ. ವೆಂಕಟೇಶ ಗೋಡಖಿಂಡಿ, ಪಂ. ಜಸರಾಜ್, ಪಂ. ಹರಿಪ್ರಸಾದ ಚೌರಾಸಿಯ, ಪಂ. ಎಂ. ವೆಂಕಟೇಶ ಕುಮಾರ, ಪಂ. ರಾಜನ್ ಹಾಗೂ ಪಂ. ಸಾಜನ್ ಮಿಶ್ರಾ, ಗುಂಡೇಚಾ ಬಂಧುಗಳು, ಪಂ. ಅಜಯ ಪೋಹಂಕರ್, ಪಂ. ಇಂದೂಧರ ನಿರೋಡಿ, ಪಂ. ಅಜಯ ಚಕ್ರವರ್ತಿ, ಡಾ॥ ನಾಗರಾಜರಾವ್ ಹವಾಲ್ದಾರ್, ಪಂ. ರೋಣು ಮಜುಮದಾರ್, ಪಂ. ರಾಜೀವ ತಾರಾನಾಥ, ಉಸ್ತಾದ್ ಅಮ್ಜದ್ ಅಲಿ ಖಾನ್, ಅಪರೂಪದ ವಾದ್ಯವಾದಕರಾದ ಬೀನ್ ವಾದಕರು ಉಸ್ತಾದ್ ಅಸದ್ ಅಲಿ ಖಾನ್ – ಹೀಗೆ ದೇಶದ ನಾನಾ ಕಡೆಯಿಂದ ಬಂದ ಹಿರಿಯ ಕಲಾವಿದರ ಜೊತೆ ತಂಬೂರಿ ಸಾಥ್ ನೀಡಿದ ಹೆಗ್ಗಳಿಕೆ ನಮ್ಮ ದೇಸಾಯಿಯವರದು.

ಗೆಳೆತನದ ಸಲಿಗೆಯಿಂದ ನಾನು ದೇಸಾಯಿ ಅವರನ್ನ ಕೇಳಿದೆ, 'ಹೆಂಗ್ರೀ ದೇಸಾಯಿ ಅವರ ನೀವು ಹೀಗೆಂಗ ಎಲ್ಲಾ ಕಡೆ ತಂಬೂರಿ ಬಾರಸ್ಲಿಕ್ಕೆ ಹೋಗ್ತಿರಿ' ಅಂದ್ರ 'ಹೂಂ ರೀ ನಾಗರಾಜ್ ಅವರೇ ಹೇಳ್ತೀನಿ ಈ ದೊಡ್ಡ ದೊಡ್ಡೋರ ಸಂಗೀತ ಕೇಳೋದದಲ್ಲ ಅದೇ ಒಂದು ಪುಣ್ಯ. ಅದರಿಂದ ನಮ್ಮ ಸಂಗೀತದ ಜ್ಞಾನ ಅಭಿವೃದ್ಧಿ ಆಗ್ತದ. ಹಿಂಗಾಗಿ ನಾನು ತಂಬೂರಿ ಬಾರಿಸ್ಲಿಕ್ಕೆ ಹೋಗ್ತೀನಿ. ಇನ್ನು ಕೆಲವು ಕಡೆ ಕೆಲವು ಸಂಘ ಸಂಸ್ಥೆಗಳು ಉದಾಹರಣೆಗೆ, ಪಂಡಿತ್ ರವೀಂದ್ರ ಯಾವಗಲ್ ಅವರ ಶ್ರೀರಾಮ ಕಲಾ ವೇದಿಕೆ, ಪಂಡಿತ್ ಪರಮೇಶ್ವರ ಹೆಗಡೆ ಅವರ ರಾಜಗುರು ಸ್ಮೃತಿ, ಬೆಂಗಳೂರು ಗಾಯನ ಸಮಾಜ, ರಾಮಸೇವಾ ಮಂಡಳಿ, ಸುರ್ ಸಾಗರ್, ದೇವನಂದನ್ ಉಭಯಕರ್ ಉತ್ಸವ ಹೀಗೆ ಎಲ್ಲಾ ಕಡೆ ಹೋಗ್ತೀನಿ. ನಾನು ನನ್ನ ಜೀವನೋಪಾಯಕ್ಕೆ ಆಗೋವಷ್ಟು ಆಗಷ್ಟು ಈಗಷ್ಟು ಕೊಡ್ತಾರ. ನಾನೇ ಸ್ವತಃ ಒಂದು ಜೋಡಿ ತಂಬೂರಿ ಇಟ್ಕೊಂಡಿದೀನಿ. ಅದನ್ನ ಒಂದು ಆಟೋದಲ್ಲಿ ತೊಗೊಂಡು ಹೋಗ್ತೀನಿ. ತೊಗೊಂಡು ಬರ್ತೀನಿ. ಹೀಗೆ ಜೀವನ ನಡದದ್ರೀ' ಅಂತ ಹೇಳಿದ್ರು.

ಇಂತಹ ಒಂದು ನಿಸ್ವಾರ್ಥ ತುಂಬು ಜೀವನ ಇದರ ಮಧ್ಯೆ ಇತ್ತೀಚೆಗಷ್ಟೇ ನಮ್ಮ ವಿಜಯಕುಮಾರ್ ದೇಸಾಯಿ ಅವರಿಗೆ ಮೆದುಳಿನಲ್ಲಿ ರಕ್ತ ಸ್ವಲ್ಪ ಹೆಪ್ಪುಗಟ್ಟಿ ಅನಿರೀಕ್ಷಿತವಾಗಿ ಒಂದು ದೊಡ್ಡ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡರು. ಆ ಶಸ್ತ್ರಚಿಕಿತ್ಸೆಯ ನಂತರ ಅವರ ಮಗ ನನಗೆ ಫೋನ್ ಮಾಡಿದ. ಅಂಕಲ್ ನಮ್ಮ ಅಪ್ಪನಿಗೆ ಹೀಂಗೆ ಸರ್ಜರಿ ಆಗ್ಯದ್ರೀ, ನಿಮಗೆ ತಿಳಸ್ಲಿಕ್ಕೆ ಹೇಳಿದ್ರು ಅಂದ. ನಾನು ಎಷ್ಟು ಖರ್ಚು ಆಯ್ತಪ್ಪಾ ಅಂತ ಕೇಳಿದೆ. ಅಂಕಲ್ ಒಂದು ಮೂರು ದಿವಸ ಅವರು ಐ.ಸಿ.ಯು.ನೊಳಗಿದ್ರು, ಎಲ್ಲಾ ಸೇರಿ ಒಂದೂಕಾಲು ಲಕ್ಷದವರೆಗೂ ಬಂದದ್ರಿ ಅಂದ. ಆಗ ಕೂಡಲೇ ನಾನು ಸುನಾದ ಕಲಾ ಪ್ರತಿಷ್ಠಾನ ಹಾಗೂ ನಮ್ಮ ಸ್ನೇಹಿತರಿಂದ ದುಡ್ಡನ್ನ ಸಂಗ್ರಹಿಸಿ ನಾನು ದೇಸಾಯಿ ಅವರಿಗೆ ಕೊಟ್ಟು ನೀವು ಬೇಗ ಗುಣಮುಖರಾಗ್ರಿ ಅಂತ ಹೇಳಿ ಬಂದೆ. ಹಾಗೇ ಬೆಂಗಳೂರು ಗಾಯನ ಸಮಾಜ ಸಹ ಅವರಿಗೆ ಸಹಾಯ ಹಸ್ತವನ್ನು ನೀಡಲಿಕ್ಕೆ ಮುಂದೆ ಬಂದಿದೆ.

ಈ ಲೇಖನದ ಉದ್ದೇಶ ಅವರಿಗೆ ಧನ ಸಹಾಯ ನೀಡಲಿ ಅಥವಾ ನೀಡಬೇಕು ಅಂತಲ್ಲ. ಆದರೆ, ಈಗಿನ ನಾವಿರೋ ಪರಿಸ್ಥಿತಿಯಲ್ಲಿ ನಮ್ಮ ಸರ್ಕಾರ, ಈ ತರಹ ಕಲೆ ಕಲಾವಿದರಿಗೆ ಸಂಬಂಧಪಟ್ಟ ಕೆಲವು ಇಲಾಖೆಗಳು ಪರಭಾಷಾ ಹಿನ್ನೆಲೆ ಗಾಯಕರಿಗೆ ಅವರು ಅಸ್ತಂಗತರಾದ ಮೇಲೂ ಅವರ ಔಷಧಿ ಖರ್ಚನ್ನ ಲಕ್ಷಾನುಗಟ್ಟಲೆ ಕೊಡ್ಲಿಕ್ಕೆ ಮುಂದೆ ಆಗ್ತದೆ, ಮುಂದೆ ಬಂದಿದೆ, ಕೊಟ್ಟ ಉದಾಹರಣೆ ಗಳಿವೆ. ಇನ್ನು ಕಲಾವಿದ– ರಾಜಕಾರಣಿ ಆದವರ ಔಷಧಿಯ ವೆಚ್ಚವನ್ನ ಭರಿಸೋದಕ್ಕೆ ಸರ್ಕಾರ ಹಾಗೂ ನಾವು ಉತ್ಸುಕರಾಗಿರುತ್ತೇವೆ. ಆದರೆ ಹೀಗೆ ಎಲ್ಲೋ ಎಲೆ ಮರೆಯ ಕಾಯಿಯಾಗಿ ಸಂಗೀತ ಕ್ಷೇತ್ರಕ್ಕೆ ಬಹಳ ಉದಾತ್ತವಾದ ಕೊಡುಗೆಯನ್ನ ನೀಡಿದಂತಹ ನಮ್ಮ ವಿಜಯ ಕುಮಾರ್ ದೇಸಾಯಿ ಅವರು ಶ್ರೀಮತಿ ವಿದ್ಯಾ ದೇಸಾಯಿ ಮತ್ತು ಅವರ ಮಕ್ಕಳಿಗೆ ನಾವೆಲ್ಲಾ 'ನೋಡ್ರಪ್ಪಾ ನಿಮ್ಮ ಸಲುವಾಗಿ ನಾವು ಇದ್ದೀವಿ. ಸಂತೋಷವಾಗಿ, ಧೈರ್ಯ ವಾಗಿ ಜೀವನ ಮಾಡಿ' ಅಂತ ಹೇಳೋದೆನೇ ಈ ಲೇಖನದ ಮೂಲ ಉದ್ದೇಶ.


ವಿದುಷಿ ಮಾಲಿನಿ ರಾಜೂರ್‌ಕರ್



ಪಂ. ಅಜಯ ಪೋಹಂಕರ್ ಜೊತೆ

**ಡಾ॥ ನಾಗರಾಜರಾವ್ ಹವಾಲ್ದಾರ್**
ನಂ. ೧೪೦, 'ಸುಕೃತಿ ನಿವಾಸ'
ಐಟಿಐ ಬಡಾವಣೆ, ವಿದ್ಯಾಪೀಠದ ಹತ್ತಿರ
ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

# ಯುಕ್ರೇನ್ – ನ್ಯಾಟೋದ ದ್ವಿಮುಖ ಧೋರಣೆ

ಉತ್ತರ ಅಟ್ಲಾಂಟಿಕ್ ಕೌಲು ಸಂಘಟನೆ (ಇಂಗ್ಲಿಷಿನಲ್ಲಿ ಹ್ರಸ್ವರೂಪ ನ್ಯಾಟೊ) ಅಮೆರಿಕದ ನೇತೃತ್ವದಲ್ಲಿ ಸ್ಥಾಪನೆಗೊಂಡ ಒಂದು ರಾಜಕೀಯ ಮತ್ತು ಮಿಲಿಟರಿ ಕೂಟ. ಉದ್ದೇಶ ಕಮ್ಯುನಿಸಂ ವಿಸ್ತರಣೆಯನ್ನು ತಡೆಯುವುದು ಮತ್ತು ರಾಷ್ಟ್ರೀಯ ವಿಮೋಚನಾ ಚಳವಳಿಗಳನ್ನು ಹತ್ತಿಕ್ಕುವುದು. ಅಂದಿನ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳನ್ನು ಸುತ್ತುವರಿಯಲು ಅಮೆರಿಕ ಐವತ್ತರ ದಶಕದ ಪ್ರಾರಂಭದಲ್ಲಿ ಏಶಿಯಾದ ಸ್ವತಂತ್ರ ದೇಶಗಳನ್ನು ಸೇರಿಸಿ ಸೆಂಟೊ ಮತ್ತು ಸಿಯಾಟೋ ಎಂಬ ಎರಡು ಮಿಲಿಟರಿ ಕೂಟಗಳನ್ನು ಸ್ಥಾಪಿಸಿತು. ಮೊದಲಿನದು ಪಶ್ಚಿಮ ಏಶಿಯ ರಾಷ್ಟ್ರಗಳನ್ನು ಒಳಗೊಂಡಿದ್ದರೆ, ಎರಡನೆಯದು ಆಗ್ನೇಯ ಏಶಿಯ ದೇಶಗಳನ್ನೊಳಗೊಂಡಿತ್ತು. ಆದರೆ ಈ ಎರಡೂ ಅಲ್ಪಾಯುಗಳಾಗಿ ಅದೃಶ್ಯವಾದುವು. ನ್ಯಾಟೋ ಮಾತ್ರ ಉಳಿದುಕೊಂಡಿದೆ. ಅಮೆರಿಕದ ಕುಖ್ಯಾತ ಗೂಢಚರ್ಯೆ ಸಂಸ್ಥೆ ಸಿಐಎ ಸ್ಥಾಪನೆಯಾದ್ದು ೧೯೪೭ರಲ್ಲೇ. ಇವೆಲ್ಲದರ ಉದ್ದೇಶ ಒಂದೇ, ಕಮ್ಯುನಿಸಂ ವಿಸ್ತರಣೆಯನ್ನು ತಡೆಯುವ ಹೆಸರಿನಲ್ಲಿ ರಾಷ್ಟ್ರೀಯ ವಿಮೋಚನಾ ಹೋರಾಟಗಳನ್ನು ವಿರೋಧಿಸುವುದು ಮತ್ತು ವಿಧ್ವಂಸಕ ಚರ್ಯೆಗಳಲ್ಲಿ ತೊಡಗುವುದು. ನ್ಯಾಟೋ ಸ್ಥಾಪನೆಗೊಂಡಾಗಿನಿಂದ ನಡೆಸಿರುವ ದುರಾಕ್ರಮಣಗಳ ಪಟ್ಟಿ ಸಾಕಷ್ಟು ದೊಡ್ಡದೇ ಇದೆ. ಅಮೆರಿಕದ ಹಿತರಕ್ಷಣೆಯ ಹೆಸರಿನಲ್ಲಿ ಈ ಸಂಘಟನೆ ನಿಕರಾಗುವ, ವಿಯೆಟ್ನಾಮ್‌ನಿಂದ ಹಿಡಿದು ಕೊಸಾವೊ, ಸೆರ್ಬಿಯವರೆಗೆ ಹಸ್ತಕ್ಷೇಪ ಮಾಡಿದೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಎರಡನೇ ಮಹಾಯುದ್ಧದ ನಂತರ ಅಮೆರಿಕ ನಡೆಸಿರುವ ಎಲ್ಲ ದುರಾಕ್ರಮಣಗಳೂ ನಡೆದಿರುವುದು ನ್ಯಾಟೋದ ಹೆಸರಿನಲ್ಲೇ. ಈ ಕೂಟದ ಉಪಟಳವನ್ನು ಎದುರಿಸಲು ೧೯೫೫ರಲ್ಲಿ ಹುಟ್ಟಿಕೊಂಡಿದ್ದು ವಾರ್ಸಾ ಕೌಲು ಕೂಟ. ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳನ್ನೊಳಗೊಂಡಿತ್ತು ಅದು. ೧೯೯೧ರಲ್ಲಿ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ವಾರ್ಸಾ ಕೌಲು ಮಿಲಿಟರಿ ಕೂಟವೂ ವಿಸರ್ಜನೆಗೊಂಡಿತು. ಆದರೆ ನ್ಯಾಟೋ ಕೂಟ ಮಾತ್ರ ಹಾಗೇ ಉಳಿದುಕೊಂಡಿದೆ.

ಸಕ್ರಿಯವಾಗಿರುವ ನ್ಯಾಟೋ ಕೂಟದ ಗುರಿ ಈಗ ರಷ್ಯನ್ ಫೆಡರೇಶನ್‌ಅನ್ನು ಸುತ್ತುವರಿಯುವುದು. ಅದಕ್ಕಾಗಿ ಹಿಂದೆ ಅದು ಕೆಲವು ಪ್ರಯತ್ನಗಳನ್ನು ನಡೆಸಿ ಕೈಸುಟ್ಟುಕೊಂಡಿತು. ರಷ್ಯನ್ ಫೆಡರೇಶನ್ನಿನ ನೇತೃತ್ವದಲ್ಲಿ ಸ್ಥಾಪನೆಗೊಂಡಿರುವ, ಹಿಂದಿನ ಸೋವಿಯೆತ್ ಗಣರಾಜ್ಯಗಳನ್ನೊಳಗೊಂಡ ಕಾಮನ್‌ವೆಲ್ತ್‌ನ ಸದಸ್ಯ ರಾಷ್ಟ್ರಗಳನ್ನು ಎಳೆದುಕೊಳ್ಳುವುದಕ್ಕೆ ಪ್ರಯತ್ನಿಸಿತು ಅದು. ಈಗ ಯುಕ್ರೇನಿನಲ್ಲಿ ತಲೆದೋರಿರುವ ಬಿಕ್ಕಟ್ಟನ್ನು ಉಪಯೋಗಿಸಿಕೊಂಡು ಹಸ್ತಕ್ಷೇಪ ನಡೆಸಲು ಹವಣಿಸುತ್ತಿದೆ. ಅಲ್ಲಿನ ವಿದ್ಯಮಾನಗಳಲ್ಲಿ ನ್ಯಾಟೋದ ಕೈವಾಡ ಇರುವುದು ಸ್ಪಷ್ಟವಾಗಿದೆ. ಪಾಶ್ಚಾತ್ಯ ದೇಶಗಳ ಬೆಂಬಲಿಗರನ್ನು ಎತ್ತಿಕಟ್ಟಿ ಯುಕ್ರೇನ್‌ಅನ್ನು ನ್ಯಾಟೋ ಕೂಟದೊಳಕ್ಕೆಳೆದುಕೊಳ್ಳುವುದು ಹಂಚಿಕೆ. ೧೯೧೯ರಲ್ಲಿ ರಷ್ಯಾಗೆ ಸೇರಿದ ಕೆಲವು ಪ್ರಾಂತಗಳನ್ನು ಯುಕ್ರೇನಿಗೆ ಸೇರಿಸಿದ್ದು ಐತಿಹಾಸಿಕ ಸತ್ಯ. ೧೯೫೪ರಲ್ಲಿ ರಷ್ಯದ ಪ್ರಾಂತವಾಗಿದ್ದ ಕ್ರಿಮಿಯಾವನ್ನು ಯುಕ್ರೇನಿಗೆ ಸೇರಿಸಲಾಯಿತು. ಹಾಗಾಗಿ ಈ ಪ್ರದೇಶದಲ್ಲಿ ರಷ್ಯನ್ ಸಂಜಾತರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಈ ವರ್ಷದ ಮಾರ್ಚ್ ೧೬ರಂದು ಕ್ರಿಮಿಯಾದಲ್ಲಿ ನಡೆದ ಜನಮತ ಗಣನೆಯಂತೆ ಅದು ಪ್ರತ್ಯೇಕಗೊಂಡು ರಷ್ಯನ್ ಫೆಡರೇಶನ್ನಿನಲ್ಲಿ ಸೇರ್ಪಡೆಯಾಗಲು ನಿರ್ಧರಿಸಿದೆ. ಮಾರ್ಚ್ ೨೧ರಂದು ಇದಕ್ಕೆ ಸಂಬಂಧಪಟ್ಟಂತೆ ರಷ್ಯನ್ ಫೆಡರೇಶನ್ನಿನೊಂದಿಗೆ ಒಪ್ಪಂದವನ್ನು ಮಾಡಿಕೊಂಡಿದೆ. ಮತ್ತೊಂದು ಬೆಳವಣಿಗೆಯಲ್ಲಿ ಯುಕ್ರೇನಿನ ಪ್ರಾಂತ ದೋನೆತ್‌ಸ್ಕ್ ಕೂಡ ಪ್ರತ್ಯೇಕಗೊಳ್ಳಲು ನಿರ್ಧಾರ ಪ್ರಕಟಿಸಿದೆ. ಈ ಎಲ್ಲ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಯುಕ್ರೇನಿನಲ್ಲಿ ಇಂದು ಒಂದು ಬಗೆಯ ಅಂತರ್ಯುದ್ಧದ ಪರಿಸ್ಥಿತಿ ಇದೆ. ರಷ್ಯ ಪರ–ವಿರೋಧ ಬಣಗಳ ಚಟುವಟಿಕೆ ಜೋರಾಗಿದೆ.

ರಷ್ಯನ್ ಫೆಡರೇಶನ್ನಿನ ಅಧ್ಯಕ್ಷ ವ್ಲದೀಮಿರ್ ಪುಟಿನ್ ಪಾಶ್ಚಾತ್ಯ ದೇಶಗಳ ಹಸ್ತಕ್ಷೇಪದ ವಿರುದ್ಧವಾಗಿ ಎಚ್ಚರಿಕೆ ನೀಡಿದ್ದಾರೆ. ಕ್ರಿಮಿಯಾದ ಸೇರ್ಪಡೆ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಕಣ್ಣು ಕೆಂಪಗಾಗಿಸಿದೆ. ರಷ್ಯಾದ ಮೇಲೆ ಆರ್ಥಿಕ ದಿಗ್ಬಂಧನ ಹೊರಿಸಲು ಪ್ರಯತ್ನ ನಡೆದಿದೆ. ಈಗಾಗಲೇ ಕೆಲವು ಸರಕುಗಳ ರವಾನೆಗೆ ಪ್ರತಿಬಂಧ ಹೇರಲಾಗಿದೆ. ಶ್ರೀಮಂತ ಪಾಶ್ಚಾತ್ಯ ದೇಶಗಳ ಜಿ–೭ ಗುಂಪು ರಷ್ಯವನ್ನು ಹೊರಗಿರಿಸಲು ತೀರ್ಮಾನಿಸಿವೆ. ಕೆಲವರ್ಷಗಳ ಹಿಂದೆಯಷ್ಟೆ ರಷ್ಯವನ್ನು ಸೇರಿಸಿಕೊಂಡು ಈ ಗುಂಪು ಜಿ–೮ ಆಗಿತ್ತು. ಹಸ್ತಕ್ಷೇಪ ನಡೆಸಲು ನ್ಯಾಟೋ ಕೂಟ ತುದಿಗಾಲ ಮೇಲೆ ನಿಂತಿದೆ. ರಷ್ಯದ ತೈಲ ಮತ್ತು ಇಂಧನಾನಿಲದ ಮೇಲೆ ಅವಲಂಬಿತವಾಗಿರುವ ಪಶ್ಚಿಮ ಯೂರೋಪಿನ ದೇಶಗಳ ಹಿಂಜರಿಕೆಯಿಂದ ರಷ್ಯಾದ ಮೇಲೆ ಆರ್ಥಿಕ ದಿಗ್ಬಂಧನ ಈವರೆಗೆ ಸಾಧ್ಯವಾಗಿಲ್ಲ. ಯುಕ್ರೇನಿನಿಂದ ಬೇರ್ಪಟ್ಟ ಕ್ರಿಮಿಯಾವು ರಷ್ಯನ್ ಫೆಡರೇಶನ್ ಸೇರಿರುವುದನ್ನು ಪಶ್ಚಿಮ ರಾಷ್ಟ್ರಗಳು ಒಕ್ಕೊರಲಿನಿಂದ ಖಂಡಿಸಿವೆ. ಇದು ಪಾಶ್ಚಾತ್ಯ ದೇಶಗಳ, ಮುಖ್ಯವಾಗಿ ಅಮೆರಿಕದ ದ್ವಿಮುಖ ಧೋರಣೆಯನ್ನು ಎತ್ತಿ ತೋರಿಸುತ್ತದೆ.

ತಮಗೆ ಅನುಕೂಲವಾಗಿರುವಂಥ ಪರಿಸ್ಥಿತಿಗಳಲ್ಲಿ ಸ್ವಯಂ ನಿರ್ಣಯಾಧಿಕಾರದ ಹಕ್ಕನ್ನು, ಜನಮತಗಣನೆಯಲ್ಲಿ ಬಹುಮತೀಯರ ತೀರ್ಮಾನವನ್ನು ಬೆಂಬಲಿಸುವ ಪಾಶ್ಚಾತ್ಯ ದೇಶಗಳು ಕ್ರಿಮಿಯಾದ ವಿಚಾರದಲ್ಲಿ ಮಾತ್ರ ರಾಗ ಬದಲಿಸಿರುವುದು ಏತಕ್ಕೆ? ಕಾರಣ ಸ್ಪಷ್ಟ. ದ್ವಿಮುಖ ನೀತಿಗೆ ಯುಗೋಸ್ಲಾವಿಯದ ಉದಾಹರಣೆಯೊಂದೇ ಸಾಕು. ಯುಗೋಸ್ಲಾವಿಯ ಪೂರ್ವ ಯೂರೋಪಿನ ರಾಷ್ಟ್ರಗಳಲ್ಲೊಂದು. ಶೀತಯುದ್ಧ ಪ್ರಾರಂಭವಾಗುತ್ತಿದ್ದಂತೆಯೇ ಈ ರಾಷ್ಟ್ರ ಸೋವಿಯೆತ್ ಒಕ್ಕೂಟದ ಪ್ರಭಾವ ವಲಯದಿಂದ ಹೊರಬಂದು ಅಲಿಪ್ತ ಧೋರಣೆಯ ಪ್ರತಿಪಾದಕನಾಗಿತ್ತು. ಆಗ ಅದು ಪಾಶ್ಚಾತ್ಯ ದೇಶಗಳಿಗೆ ಅನುಕೂಲವಾಗಿತ್ತು. ಹಲವು ಜನಾಂಗೀಯ ಪ್ರದೇಶಗಳನ್ನು ಹೊಂದಿದ್ದ ಯುಗೋಸ್ಲಾವಿಯ ಮಾರ್ಷಲ್ ಟೀಟೋ ಬದುಕಿರುವವರೆಗೆ ಒಂದುಗೂಡಿದ ರಾಷ್ಟ್ರವಾಗಿತ್ತು. ಆತ ತೀರಿಕೊಂಡ ನಂತರ ದೇಶ ಛಿದ್ರಗೊಂಡಿತು. ಇದರಲ್ಲಿ ಪಶ್ಚಿಮ ರಾಷ್ಟ್ರಗಳ ಕೈವಾಡ ಇದ್ದುದು ಎಲ್ಲರಿಗೂ ಗೊತ್ತಿರುವ ವಿಚಾರ. ಹದಿನೈದು ವರ್ಷಗಳ ಹಿಂದೆ ದೇಶದಲ್ಲಿ ಅಂತರ್ಯುದ್ಧದ ಪರಿಸ್ಥಿತಿ ಇದ್ದಾಗ ನ್ಯಾಟೋ ಯುಗೋಸ್ಲಾವಿಯದ ಮೇಲೆ ನಡೆಸಿದ ದಾಳಿಯನ್ನು ನೆನಪಿಸಿಕೊಳ್ಳೋಣ. ಇದು ಆದೇಶದ ವಿಭಜನೆಗೆ ನಾಂದಿಯಾಯಿತು. ಸೆರ್ಬಿಯ, ಸ್ಲೊವೇನಿಯ, ಕ್ರೊಯೆಷಿಯ ಎಲ್ಲವೂ ಯುಗೋಸ್ಲಾವಿಯದಿಂದ ಜನಮತ ಗಣನೆ ನಡೆಸಿ ಪ್ರತ್ಯೇಕಗೊಂಡುವು. ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ಯಾವುದೇ ಆಕ್ಷೇಪಣೆ ಇಲ್ಲದೆ ಪ್ರತ್ಯೇಕಗೊಂಡ ಭಾಗಗಳಿಗೆ ಮನ್ನಣೆ ನೀಡಿದುವು. ಅದಕ್ಕಿಂತ ಮುಖ್ಯವಾಗಿ ಸೆರ್ಬಿಯದಿಂದ ಕೊಸಾವೊ ಪ್ರತ್ಯೇಕಗೊಂಡಾಗ ಈ ರಾಷ್ಟ್ರಗಳು ಮುಲಾಜಿಲ್ಲದೆ ಅದಕ್ಕೆ ಮಾನ್ಯತೆ ನೀಡಿದುವು. ಕಾರಣ ಅವೆಲ್ಲವೂ ಪಾಶ್ಚಾತ್ಯ ಪ್ರೇರಿತವಾಗಿದ್ದುವು, ಅವರಿಗೆ ಅನುಕೂಲವಾಗಿದ್ದುವು. ಹಾಗಿರುವಾಗ, ಕ್ರಿಮಿಯಾದ ವಿಚಾರದಲ್ಲಿ ತಾರತಮ್ಯ ಏಕೆ ಎನ್ನುವ ಪ್ರಶ್ನೆ ಸಹಜ. ಕ್ರಿಮಿಯಾದ ನಾಯಕರು ಈ ಪ್ರಶ್ನೆ ಎತ್ತಿದ್ದಾರೆ.

ಯುಕ್ರೇನಿನ ಪರಿಸ್ಥಿತಿ ರಷ್ಯಾ ಮತ್ತು ಅಮೆರಿಕವನ್ನು ಮತ್ತೊಮ್ಮೆ ಮುಖಾಮುಖಿಯಾಗಿಸಿದೆ. ಅಂತರರಾಷ್ಟ್ರೀಯ ವಿದ್ಯಮಾನದಲ್ಲಿ ಇದು ಹೊಸ ಬೆಳವಣಿಗೆ. ಭಾರತದಲ್ಲಿ ಈಗ ಚುನಾವಣೆಗಳ ಕಾಲವಾದ್ದರಿಂದ ಒಂದು ಬಗೆಯ ಮೌನ. ಹೊಸ ಸರಕಾರ ರಚನೆಯಾದ ಮೇಲೆ ಯಾವ ಧೋರಣೆ ತಳೆದೀತೋ ನೋಡಬೇಕು. ಯುಕ್ರೇನಿನಲ್ಲಿ ಪರಿಸ್ಥಿತಿ ಮಾತ್ರ ದಿನೇ ದಿನೇ ಹದಗೆಡುತ್ತಿದೆ. ರಷ್ಯ ಪರ–ವಿರೋಧಿ ಗುಂಪುಗಳ ಮಧ್ಯೆ ಘರ್ಷಣೆಗಳು ಅಲ್ಲಲ್ಲಿ ನಡೆಯುತ್ತಿವೆ. ಪರಿಸ್ಥಿತಿ ನಿಯಂತ್ರಣಕ್ಕೆ ಬರಲು ಸಾಕಷ್ಟು ಕಾಲ ಹಿಡಿದೀತು. ಶಾಂತಿಯುತವಾಗಿ ಇತ್ಯರ್ಥವಾದರೆ ಒಳಿತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಸಂಗೀತ ಕಲಾನಿಧಿ ವಿದ್ವಾನ್ ಆರ್. ಕೆ. ಶ್ರೀಕಂಠನ್

*ವೇದಾಂತವಾಕ್ಯಗಳ ನಮಕಾನುವಾಕಗಳ*
*ಕೇದಾರಗೌಳ ಮಣಿರಂಗಾರಭಿಗಳ*
*ನಾದಂಗಳಲಿ ಮನವ ಬೆರಸಿ ನೀನುತ್ತ್ರಮಿಸೆ*
*ಸಾಧನವೊ ಮುಕ್ತಿಗದು – ಮಂಕುತಿಮ್ಮ*

– ಶ್ರೀ ಡಿ. ವಿ. ಗುಂಡಪ್ಪನವರು ಕಗ್ಗದಲ್ಲಿ ಹೇಳಿರುವಂತೆ ವೇದಾಂತ ವಾಕ್ಯಗಳನ್ನು, ವೇದದ ಭಾಗಗಳನ್ನು, ಕೇದಾರಗೌಳ – ಮಣಿರಂಗು – ಆರಭಿ ಮುಂತಾದ ಸಂಗೀತದ ನಾದಗಳಲ್ಲಿ ಮನಸ್ಸನ್ನು ಬೆರೆಸಿ ಪ್ರಾಣವನ್ನು ಬಿಡುವಂತಾದರೆ ಅದು ಮೋಕ್ಷವನ್ನು ಪಡೆಯಲು ಸಾಧನವಾಗುತ್ತದೆ.

ಮೇಲೆ ತಿಳಿಸಿದ ಮಾರ್ಗದಲ್ಲಿ ೯೪ ವರುಷಗಳ ಸುದೀರ್ಘ, ಸಾರ್ಥಕ, ಸಂಗೀತಮಯ ಜೀವನವನ್ನು ನಡೆಸಿ ನಮ್ಮನ್ನಗಲಿದ ಸಂಗೀತಕಲಾನಿಧಿ ಡಾ॥ ಆರ್. ಕೆ. ಶ್ರೀಕಂಠನ್ ಅವರು ಪ್ರಾತಃ ಸ್ಮರಣೀಯರು. ವೇದಿಕೆಯನ್ನೇರಿ ಅವರು ಗಳಿಸಿದ ಅಪಾರ ಅನುಭವ ಸುಮಾರು ೮೦ ವರುಷಗಳದ್ದು. ಇಂತಹ ಹಿರಿಯ ಚೇತನ ಮುಕ್ತಿಪಥದ ಕಡೆಗೆ ಸಾಗಿದರು ಎಂದಾಗ ಒಂದು ಕ್ಷಣ ನಮಗ್ಯಾರಿಗೂ ನಂಬಲು ಸಾಧ್ಯವಾಗಲಿಲ್ಲ. ೯೪ ವರ್ಷಗಳ ಸುದೀರ್ಘ ಜೀವನ ನಡೆಸಿದ ಈ ಹಿರಿಯ ಚೇತನದ ಅಗಲಿಕೆ ಅದೇಕೋ ಏನೋ ನಮ್ಮ ಮನಸ್ಸಿಗೆ ನಿಜವೆಂದು ತುಂಬ ಸಮಯ ನಂಬಲೂ ಸಾಧ್ಯವಾಗಲಿಲ್ಲ. ಕನಿಷ್ಠ ಇನ್ನೊಂದು ಹತ್ತು ವರ್ಷಗಳಾದರೂ ಶ್ರೀಯುತರು ನಮ್ಮೊಂದಿಗೆ ಇದ್ದು ದಾರಿದೀಪವಾಗಿರುತ್ತಾರೆ ಎಂಬುದು ನಮ್ಮೆಲ್ಲರ ಮನಸ್ಸಿನಲ್ಲಿ ಇದ್ದ ಒಂದು ನಂಬಿಕೆ, ಧೈರ್ಯ. ಇದೇ ದೈವಲೀಲೆ. ಯಾವುದು ಪರಮ ಸತ್ಯವೋ ಅದನ್ನು ಸಹಜವಾಗಿ ಒಪ್ಪಿಕೊಳ್ಳಲು ನಮ್ಮ ಮನಸ್ಸು ಒಪ್ಪುವುದಿಲ್ಲ.

ಪದ್ಮಭೂಷಣ ಶ್ರೀ. ಶ್ರೀಕಂಠನ್ ಅವರಂತೆ ಸುದೀರ್ಘ ಸಾರ್ಥಕ ಜೀವನವನ್ನು ನಡೆಸಿದ, ನಡೆಸುತ್ತಿರುವ ಹಲವಾರು ಹಿರಿಯ ಚೇತನ ಗಳನ್ನು ಕಂಡಾಗ, ನಮ್ಮ ಅರಿವಿಗೆ ಥಟ್ಟನೆ ಗೋಚರಿಸುವುದು ಅವರ ಜೀವನೋತ್ಸಾಹ, ಕರ್ತವ್ಯ ಬದ್ಧತೆ, ಶಿಸ್ತುಬದ್ಧ ಜೀವನ ಹಾಗೂ ಅನುಭವದ ಹಾದಿ. ಶ್ರೀಯುತರುಗಳಾದ ನಿಟ್ಟೂರು ಶ್ರೀನಿವಾಸ ರಾಯರು, ಎಚ್. ನರಸಿಂಹಯ್ಯನವರು, ಪ್ರೊ॥ ಜಿ. ವೆಂಕಟಸುಬ್ಬಯ್ಯನವರು, ಪ್ರೊ॥ ಎ. ಎನ್. ಮೂರ್ತಿರಾವ್ ಹೀಗೆ ಹಲವಾರು ಹಿರಿಯರ ಜೀವನಶೈಲಿಯನ್ನು ಅವಲೋಕಿಸಿದಾಗ ಮುಖ್ಯವಾಗಿ ನಮಗೆ ಕಾಣುವುದು ಎರಡು ಅಂಶಗಳು. ಇವರು ತಮ್ಮ ಜೀವನದ ಗುರಿಯನ್ನು ಸರಿಯಾದ ಹಂತದಲ್ಲಿ ಗುರುತಿಸಿ, ಅದಕ್ಕೆ ಸೂಕ್ತವಾದ ಸಾಧನಾ ಮಾರ್ಗವನ್ನು ಅಳವಡಿಸಿ, ಅದಕ್ಕೆ ಬದ್ಧರಾಗಿ ತಮ್ಮ ಕಡೆಯ ಉಸಿರಿರುವವರೆಗೂ ಜೀವನವನ್ನು ನಡೆಸುತ್ತ ಹೋಗುವರು. ಇದು, ಇಂದಿನ ಯುವ ಜನಾಂಗಕ್ಕೆ ಅತ್ಯವಶ್ಯವಾಗಿ ಬೇಕಾಗಿರುವ ದಾರಿ. ನಮ್ಮ ಗುರಿ ಯಾವುದು ಎಂಬುದನ್ನು ಮನದಟ್ಟುಮಾಡಿಕೊಂಡು, ಗುರಿಯ ಹಿಂದೆ ಇರುವ ಗುರುವಿನ ಮಾರ್ಗ ದರ್ಶನದಲ್ಲಿ ಅವಿರತ ಶ್ರಮ ವಹಿಸಿ ಶಿಸ್ತುಬದ್ಧವಾದ ಜೀವನ ನಡೆಸುವುದು ಎಂಬುದೇ ನಾವು ಕಲಿಯಬೇಕಾಗಿರುವ ಪಾಠ.

ಡಾ॥ ಆರ್. ಕೆ. ಶ್ರೀಕಂಠನ್ ಅವರ ಜೀವನ, ವ್ಯಕ್ತಿತ್ವ ಅತ್ಯಂತ ಗಂಭೀರವಾದದ್ದು. ಸಂಗೀತವೇ ಅವರ ಉಸಿರು, ನಡೆ, ನುಡಿ, ಹವ್ಯಾಸ, ವೃತ್ತಿ, ಪ್ರವೃತ್ತಿ ಎಲ್ಲ.

ಶ್ರೀಯುತರ ನಿಕಟವರ್ತಿಯಾಗಿಯೋ

**ಕಲಾವತಿ ಅವಧೂತ್**

**ಶ್ರೀಕಂಠನ್ ಅವರು ಹರಿದಾಸರ ಕೀರ್ತನೆಗಳಿಗೆ ರಾಗಸಂಯೋಜನೆ ಮಾಡುವಾಗ ರಾಗಗಳ ಆಯ್ಕೆಯಲ್ಲಿ ತೋರಿರುವ ಜಾಣ್ಮೆ ಸಂಗೀತಾಸಕ್ತರ ಹಾಗೂ ವಿದ್ಯಾರ್ಥಿಗಳ ಗಮನಕ್ಕೆ ಬಂದಿರುವಂತಹ ಅಂಶ. ಆಕಾಶವಾಣಿಯಲಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಹಲವಾರು ಪ್ರಸಿದ್ಧ ಕವಿಗಳ ರಚನೆಗಳಿಗೆ ಸಂಗೀತ ಸಂಯೋಜನೆ ಮಾಡಿ, ಕವಿಯ ಮನದ ಭಾವವನ್ನು ಮನಮುಟ್ಟುವಂತೆ ಶ್ರೋತೃಗಳ ಕಿವಿಗೆ, ಹೃದಯಕ್ಕೆ ತಲುಪಿಸುತ್ತಿದ್ದ ಮಹಾನ್ ಕಲಾವಿದರು ಇವರು. ಅವರ ಅಭಿಜಾತ ಚಿಂತನೆ ಮತ್ತು ಶೈಲಿ ಮನೋಜ್ಞವಾದ್ದು. 'ಹೊಸತು' ಪತ್ರಿಕೆಯು ವಿದ್ವಾನ್ ಶ್ರೀಕಂಠನ್ ಅವರನ್ನು ಸಂದರ್ಶಿಸಿ ಪ್ರಕಟಿಸಿದ್ದ ಲೇಖನವನ್ನು ಆಸಕ್ತರು ಗಮನಿಸಬಹುದು. (ಹೊಸತು : ಜನವರಿ, ೨೦೦೭)**



ಅಥವಾ ನೇರ ಶಿಷ್ಯಳಾಗಿಯೋ ಕಲಿಯುವ ಭಾಗ್ಯ ನನಗಿರಲಿಲ್ಲವಾದರೂ ಅವರ ನಿರ್ದೇಶನದಲ್ಲಿ ಹಲವಾರು ಸಂಗೀತ ಕಾರ್ಯಕ್ರಮಗಳಲ್ಲಿ, ಧ್ವನಿಮುದ್ರಣಗಳಲ್ಲಿ ಹಾಡುವ ಯೋಗ ಒದಗಿಬಂದಿತ್ತು. ಶ್ರೀಕಂಠನ್ ಸರ್ ಪ್ರತ್ಯಕ್ಷವಾಗಲ್ಲದಿದ್ದರೂ ಪರೋಕ್ಷವಾಗಿ ಸಂಗೀತಾಸಕ್ತ ವಿದ್ಯಾರ್ಥಿಗಳಿಗೆಲ್ಲ ಪರಮ ಗುರುಗಳೇ ಆಗಿದ್ದರು.

ಅವರ ಕಾರ್ಯಕ್ರಮ ಯಾವುದೇ ಇರಲಿ: ಸೋದಾಹರಣ ಭಾಷಣವಿರಲಿ, ನಿರ್ದಿಷ್ಟ ವಸ್ತುವಿನ ಬಗೆಗಿನ ಚರ್ಚೆ ಇರಲಿ, ಗಾಯನ ಕಾರ್ಯಕ್ರಮವಿರಲಿ, ಸಂಗೀತ ಕಾರ್ಯಾಗಾರವಿರಲಿ – ಭಾಗವಹಿಸಿದ ಪ್ರತಿಯೊಬ್ಬರಿಗೂ ಏನಾದರೂ ಒಂದು ಹೊಸತನ್ನು ಕಲಿಯುವ ಅವಕಾಶ ಇದ್ದೇ ಇರುತ್ತಿತ್ತು.

ಶ್ರೀಕಂಠನ್ ಅವರದು ಒಂದು ಬಹುಮುಖ ವ್ಯಕ್ತಿತ್ವ. ಆದರೆ ಆ ಬಹುಮುಖಗಳೆಲ್ಲವೂ ಸಂಗೀತಕ್ಕೆ ಸಂಬಂಧಪಟ್ಟವೆ ಆಗಿದ್ದವು. ಸಂಗೀತ ವೇದಿಕೆಯಲ್ಲಿ ಮಹಾನ್ ಮೇರು ಕಲಾವಿದ, ಶಿಸ್ತಿನ ಸಿಪಾಯಿ ಆಗಿದ್ದ ಅತ್ಯುತ್ತಮ ಶಿಕ್ಷಕ, ಶ್ರೇಷ್ಠ ವಾಗ್ಮಿ, ಶ್ರೇಷ್ಠ ರಾಗ ಸಂಯೋಜಕ – ಹೀಗೆ ಅವರ ವ್ಯಕ್ತಿತ್ವದ ಹಲವಾರು ಮುಖಗಳ ಪರಿಚಯ ನಮ್ಮೆಲ್ಲರಿಗೂ ಆಗಿದೆ. ಶಿಸ್ತುಬದ್ಧ ಜೀವನ ನಡೆಸಿದ ಶ್ರೀಯುತರು ಅಧಿಕಾರವಾಣಿಯಿಂದ ನಿಶ್ಶಂಕೆಯಿಂದ ನುಡಿಯುತ್ತಿದ್ದ ನಿಷ್ಠುರವಾದ ಅಭಿಪ್ರಾಯಗಳು, ಟೀಕೆಗಳು, ಸಂಗೀತ ಶಾಸ್ತ್ರ ಹಾಗೂ ಪ್ರಯೋಗ ಭಾಗಗಳೆರಡರಲ್ಲೂ ಅವರಿಗಿದ್ದ ಅಪಾರ ಅನುಭವ ಹಾಗೂ ಅತಿ ಸ್ಪಷ್ಟವಾದ ನಿಲುವನ್ನು ತೋರಿಸುತ್ತಿತ್ತು. ಸಂಪ್ರದಾಯ ಬದ್ಧವಾದ ಜೀವನ – ಸಂಗೀತ ಎರಡನ್ನೂ ಮೈಗೂಡಿಸಿಕೊಂಡ ಶ್ರೀಯುತರಲ್ಲಿ ಯಾವುದೇ ಕಾರಣಕ್ಕೂ ತೋರಿಕೆಯ ಗುಣ, ಹಾರಿಕೆಯ ಮಾತು, ಅಸ್ಪಷ್ಟ ಅಭಿಪ್ರಾಯಗಳು ಬರಲು ಸಾಧ್ಯವೇ ಇರಲಿಲ್ಲ. ಖಚಿತತೆಯೇ ಮೈವೆತ್ತಿಕೊಂಡಂತೆ ಶ್ರೀಕಂಠನ್ ಅವರ ಜೀವನ, ನೋಟ, ಸಂಗೀತ, ಮಾತು ಎಲ್ಲವೂ.

ಇಂತಹ ಒಬ್ಬ ಮೇರು ಕಲಾವಿದನ ಬಗ್ಗೆ ಬರೆಯುವ ಸಾಹಸ ಮಾಡಲು ಹೊರಟಿದ್ದೇನೆ. ಅವರ ಸಂಗೀತ ವ್ಯಕ್ತಿತ್ವದ ಬಗ್ಗೆ ಬರೆಯಲು ನನಗಾವ ಅರ್ಹತೆಯೂ ಇಲ್ಲ. ಆದರೆ ಕರ್ತವ್ಯಕ್ಕೆ ಬದ್ಧಳಾಗಿ, ನನ್ನ ಹೃದಯದಲ್ಲಿ ಶ್ರೀಯುತರ ಬಗ್ಗೆ ಇರುವ ಅಪಾರ ಗೌರವವನ್ನು ವ್ಯಕ್ತಪಡಿಸಲು ಈ ಸಂದರ್ಭದ ಸದುಪಯೋಗ ಪಡಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ. ಸಂಗೀತದ ಬ್ರಹ್ಮಾಂಡವನ್ನೇ ಮೈಗೂಡಿಸಿಕೊಂಡವರ ಬಗ್ಗೆ ಬರೆಯಲು ಕಷ್ಟಸಾಧ್ಯ. ಆದರೆ, ಶ್ರೀಯುತರ ಹಲವಾರು ಕಲಾವಂತಿಕೆಗಳಲ್ಲಿ ಒಂದಾದ ರಾಗಸಂಯೋಜನೆ ಎಂಬ ಪ್ರಕಾರದಲ್ಲಿ ನನ್ನ ಅಲ್ಪ ಗಮನಕ್ಕೆ ಬಂದ ಕೆಲವು ವಿಶೇಷತೆಗಳ ಬಗ್ಗೆ ಒಂದು ಪುಟ್ಟ ಪಕ್ಷಿನೋಟವಿದು ಅಷ್ಟೇ.



ಎಲ್ಲವೂ ಭ್ರಷ್ಟ ಪಕ್ಷಗಳು
ಅವುಗಳಿಂದ ದೂರವಾಗಿ
ಹೊಸ ಪಕ್ಷ ಕಟ್ಟುವೆ...

ಶ್ರೀಕಂಠನ್ ಅವರು ಹರಿದಾಸರ ಕೀರ್ತನೆಗಳಿಗೆ ರಾಗಸಂಯೋಜನೆ ಮಾಡುವಾಗ ರಾಗಗಳ ಆಯ್ಕೆಯಲ್ಲಿ ತೋರಿರುವ ಜಾಣ್ಮೆ ಸಂಗೀತಾಸಕ್ತರ ಹಾಗೂ ವಿದ್ಯಾರ್ಥಿಗಳ ಗಮನಕ್ಕೆ ಬಂದಿರುವಂತಹ ಅಂಶ. ಆಕಾಶವಾಣಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಹಲವಾರು ಪ್ರಸಿದ್ಧ ಕವಿಗಳ ರಚನೆಗಳಿಗೆ ಸಂಗೀತ ಸಂಯೋಜನೆ ಮಾಡಿ, ಕವಿಯ ಮನದ ಭಾವವನ್ನು ಮನಮುಟ್ಟುವಂತೆ ಶ್ರೋತೃಗಳ ಕಿವಿಗೆ, ಹೃದಯಕ್ಕೆ ತಲುಪಿಸುತ್ತಿದ್ದ ಮಹಾನ್ ಕಲಾವಿದರು ಇವರು.

ದಾಸರ ಕೀರ್ತನೆಗಳಿಗೆ ಹಾಕಿರುವ ಸ್ವರದ ಮಟ್ಟನ್ನು ಸೂಕ್ಷ್ಮವಾಗಿ ಗಮನಿಸಿದಾಗ, ದಾಸರ ಮನದ ಇಂಗಿತವನ್ನು ಕೇಳುಗರಿಗೆ ತಲುಪಿಸುವಲ್ಲಿ ಈ ರಾಗಗಳು ಎಷ್ಟು ಯಶಸ್ವಿಯಾಗಿವೆ ಎಂಬುದನ್ನು ಗಮನಿಸಬಹುದು.

ದಾಸರ ಕೀರ್ತನೆಗಳನ್ನು ಶಾಸ್ತ್ರೀಯ ಮಟ್ಟಿನಲ್ಲಿ ಹಾಡಿದಾಗ ರಾಗವು ಕರ್ನಾಟಕಿಯಾಗಿರಲಿ – ಹಿಂದೂಸ್ಥಾನೀ ಶೈಲಿಯಲ್ಲಿರಲಿ ಆ ಕೀರ್ತನೆಯ ಸಾಹಿತ್ಯದ ಮೂಲ ಭಾವ, ಉದ್ದೇಶದ ಬಗ್ಗೆ ವಿಶೇಷ ಕಾಳಜಿ ವಹಿಸಬೇಕಾಗಿರುತ್ತದೆ. ದಾಸರ ಕೀರ್ತನೆಗಳಲ್ಲಿ 'ಮಾತು' ನಮಗೆ ಲಭ್ಯವಾಗಿದ್ದರೂ ಅದರ ಗೇಯ ಸ್ವರೂಪವು ಹಲವಾರು ಬದಲಾವಣೆಗೊಳಪಟ್ಟು, ಒಂದೇ ಕೀರ್ತನೆಯನ್ನು ಹಲವಾರು ರಾಗಗಳಲ್ಲಿ ಕೇಳುವ ಸಂದರ್ಭವೂ ಇರುತ್ತದೆ. ಇಂತಹ ಸಂದರ್ಭದಲ್ಲಿ ಆ ರಾಗಸ್ವರೂಪ ಆ ಕೀರ್ತನೆಯ ಮಾತುಗಳಿಗೆ ಹೊಂದುತ್ತದೆಯೇ ಎಂಬುವುದೇ ಮುಖ್ಯವಾದ ಪ್ರಶ್ನೆ.

ಶ್ರೀಕಂಠನ್ ಅವರು ಸಂಯೋಜಿಸಿರುವ ಸ್ವರ ಮಟ್ಟನ್ನು ಅಳವಡಿಸಿರುವ ಹಲವಾರು ದೇವರನಾಮಗಳನ್ನು ಕೇಳಿದಾಗ ಈ ರಾಗಸಂಯೋಜನೆ ಮಾಡುವುದೇ ಒಂದು ವಿಶಿಷ್ಟ ಕಲಾಪ್ರಕಾರ ಎನಿಸುತ್ತದೆ. ಅವರು ಸ್ವರಪಡಿಸಿರುವ ಶುದ್ಧ ಧನ್ಯಾಸಿ ರಾಗದ 'ನಾರಾಯಣ ನಿನ್ನ', ನಾದನಾಮಕ್ರಿಯ ರಾಗದ 'ರಾಗಿ ತಂದೀರ್‍ಯಾ', ಹಿಂದೋಳದ 'ಹಣ್ಣು ಬಂದಿದೆ', ಧನ್ಯಾಸಿಯ 'ಈಸಬೇಕು ಇದ್ದು ಜೈಸಬೇಕು', ನಾದ ರಾಗದ 'ಜಯತು ಕೋದಂಡರಾಮ', ಮೋಹನ ರಾಗದ 'ಅಂತರಂಗದಲಿ ಹರಿಯ ಕಾಣದವ', 'ಹಾಂಗೇ ಇರಬೇಕು ಸಂಸಾರದಲಿ', ರೀತಿಗೌಳದ 'ಕಥಾ ಶ್ರವಣ ಮಾಡೋ', ಸುರುಚಿಯ 'ಸ್ಮರಿಸುವ ಜನಕೆಲ್ಲ'... ಹೀಗೆ ಸಾಲು ಮಾಡುತ್ತ ಹೊರಟರೆ ನೂರಾರು ದೇವರನಾಮಗಳನ್ನು ಪಟ್ಟಿ ಮಾಡಬೇಕಾಗಬಹುದು.

ಈ ಕೀರ್ತನೆಗಳನ್ನು ಶ್ರವಣ ಮಾಡಿದಾಗ ಮುಖ್ಯವಾಗಿ ನಮಗೆ ಗೋಚರವಾಗುವುದು ಆ ಹಾಡಿನ ಧಾತು ಹಾಗೂ ಮಾತಿಗೆ ಇರುವ ಅನ್ಯೋನ್ಯ ಸಂಬಂಧ. ಮಾತಿಗೆ ಪೂರಕವಾದ ರಾಗ – ತಾಳ ಇದು ಶ್ರೀಕಂಠನ್‌ರವರ ಮಹಾನ್ ಕೊಡುಗೆ.

ಇವರು ಸ್ವರಪಡಿಸಿರುವ ಮೋಹನ ರಾಗದ 'ಹಾಂಗೇ ಇರಬೇಕು' ಎಂಬ ಪುರಂದರದಾಸರ ಒಂದು ಕೀರ್ತನೆಯ ಬಗ್ಗೆ ಇಲ್ಲಿ ವಿಸ್ತರಿಸಲು ಇಷ್ಟ ಪಡುತ್ತೇನೆ. ಮನುಷ್ಯ ಲೌಕಿಕ ಬದುಕಿನಲ್ಲಿ ಯಾವುದಕ್ಕೆ, ಎಷ್ಟು ಪ್ರಾಮುಖ್ಯತೆ ಕೊಡಬೇಕು, ಸಂಸಾರದ ಲೋಲುಪ್ತಿಗಳಲ್ಲಿ ನಮ್ಮ ಮನಸ್ಸನ್ನು ಎಷ್ಟು ಇಡಬೇಕು, ಥಟ್ಟನೆ ಅದರಿಂದ ಹೊರಬಂದು ವೈರಾಗ್ಯದ ಭಾವದಿಂದ, ನಿರ್ಲಿಪ್ತ ಭಾವದಿಂದ ಹೇಗೆ ಬದುಕಬೇಕು ಎಂಬುದನ್ನು ಅತ್ಯಂತ ಸುಂದರವಾಗಿ, ಸರಳವಾಗಿ ಹಲವಾರು ಹೋಲಿಕೆಗಳಿಂದ ಅರ್ಥೈಸುವ ಒಂದು ವಿಶಿಷ್ಟ ದೇವರನಾಮ ಇದು.

ಇದನ್ನು ಶ್ರೀಕಂಠನ್ ಅವರು ಮೋಹನರಾಗದಲ್ಲಿ ಸಂಯೋಜಿಸಿದ್ದಾರೆ. ಪುರಂದರದಾಸರು ಯಾವ ಅಧಿಕಾರವಾಣಿಯಲ್ಲಿ "ಇದು ಹೀಗೆ! ಹೀಗೆಯೇ ಇರಬೇಕು!" ಎಂದು ಖಚಿತವಾಗಿ ಹೇಳಿರುವರೋ, ಅದೇ ಅಧಿಕಾರವಾಣಿಯಲ್ಲಿ, ಸ್ಪಷ್ಟವಾಗಿ, ಖಚಿತವಾಗಿ ಈ ಅಭಿಪ್ರಾಯವನ್ನು ಹೇಳುವ ಧಾಟಿ ರಾಗಸಂಯೋಜನೆಯಲ್ಲೂ ವ್ಯಕ್ತವಾಗಿದೆ. ಮುಖ್ಯವಾಗಿ



# ಭಾರತೀಯ ಸಿನಿಮಾದ ಮಾಂತ್ರಿಕ ಛಾಯಾಗ್ರಾಹಕ ವಿ. ಕೆ. ಮೂರ್ತಿ ಇನ್ನಿಲ್ಲ

(೧೯೨೩ – ೨೦೧೪)

**ನ**ಮ್ಮ ಕನ್ನಡದವರೇ ಆದ, ತಮ್ಮ ಕ್ಯಾಮೆರಾದ ಮೂಲಕ ಬೆಳ್ಳಿತೆರೆಯ ಮೇಲೆ ನೂರಾರು ಮರೆಯಲಾಗದ ರೂಪಕಗಳನ್ನು ಸೃಷ್ಟಿಸಿದ, ಭಾರತೀಯ ಸಿನಿಮಾದ ಇತಿಹಾಸದಲ್ಲೇ ಛಾಯಾಗ್ರಹಣ ಕಲೆಗೆ ಹೊಸ ಭಾಷ್ಯವನ್ನೇ ಬರೆದ ವಿ. ಕೆ. ಮೂರ್ತಿ ೦೭.೦೪.೨೦೧೪ರಂದು ನಿಧನರಾಗಿದ್ದಾರೆ. ಛಾಯಾಗ್ರಹಣ ಕಲೆಯಲ್ಲಿ ಭಾರತವನ್ನು ವಿಶ್ವಮಟ್ಟಕ್ಕೇರಿಸಿದ ಮೂರ್ತಿಯವರದ್ದು ಸರಳ ವ್ಯಕ್ತಿತ್ವ, ಶಾಂತ ಸ್ವಭಾವ. ಹಲವಾರು ಫಿಲ್ಮ್‌ಫೇರ್ ಪ್ರಶಸ್ತಿಗಳು, ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಮುಂತಾದವು ಅವರನ್ನೇ ಅರಸಿಕೊಂಡು ಬಂದವುಗಳು. ನೆಳಲು ಬೆಳಕುಗಳ ಸಂಯೋಜನೆಗೆ ಹೊಸ ಅರ್ಥ ನೀಡಿದ ಮೂರ್ತಿಯವರ ಅದ್ಭುತ ಪ್ರತಿಭೆಗೆ ಖ್ಯಾತ ನಟ, ನಿರ್ದೇಶಕ ಗುರುದತ್ ಅವರ ಪ್ಯಾಸಾ, ಸಾಹಿಬ್ ಬೀಬಿ ಔರ್‌ಗುಲಾಮ್, ಕಾಗಜ್ ಕೆ ಫೂಲ್, ಚೌದ್‌ವೀನ್ ಕಾ ಚಾಂದ್, ಶ್ಯಾಮ್ ಬೆನಗಲ್ ಅವರು ಭಾರತ್ ಏಕ್ ಖೋಜ್ ಎಂಬ ದೂರದರ್ಶನಕ್ಕೆ ನಿರ್ದೇಶಿಸಿದ ಧಾರಾವಾಹಿ, ಕಮಲ್ ಅಮ್ರೋಹಿ ಅವರ ಪಾಕೀಜಾ ಇತ್ಯಾದಿ ಚಿತ್ರಗಳೇ ಸಾಕ್ಷಿ. ಹಿಂದಿ ಚಿತ್ರಗಳೇ ಅಲ್ಲದೆ ಕನ್ನಡ ಚಿತ್ರರಂಗದಲ್ಲೂ ತಮ್ಮ ಹಿರಿಮೆ ಮೆರೆದಿದ್ದಾರೆ. ಮೂರ್ತಿ ಅವರ ಆಪ್ತ ಶಿಷ್ಯರಲ್ಲೊಬ್ಬರಾದ ಗೋವಿಂದ್ ನಿಹಲಾನಿಯವರಂತಹ ಅನೇಕ ಛಾಯಾಗ್ರಾಹಕರು ಮೂರ್ತಿಯವರು ಸೃಷ್ಟಿಸಿರುವ ಭವ್ಯ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ, ಅದನ್ನು ಇನ್ನೂ ಹೆಚ್ಚು ಶ್ರೀಮಂತಗೊಳಿಸುವಲ್ಲಿ ಯಾವ ಸಂಶಯವೂ ಇಲ್ಲ.

ದಿವಂಗತ ವಿ. ಕೆ. ಮೂರ್ತಿ ಅವರಿಗೆ ನೆನಪಿಗೆ **ಹೊಸತು**ವಿನ ವಿನಮ್ರ ನಮನಗಳು.

ಶ್ರೀಕಂಠನ್ ಅವರ ಸಿರಿ ಕಂಠದಲ್ಲಿ ಈ ಹಾಡಿನ ವಿನಿಕೆಯನ್ನು ಕೇಳಿದಾಗ, ನಾನು ಹೇಳಬೇಕೆಂದು ಹೊರಟಿರುವ ಅಭಿಪ್ರಾಯ ಎಲ್ಲರ ಮನಮುಟ್ಟುತ್ತದೆ.

ಕೀರ್ತನೆಯ ಕೆಲವು ಸಾಲುಗಳನ್ನು ಗಮನಿಸೋಣ:

*ಹಾಂಗೇ ಇರಬೇಕು ಸಂಸಾರದಲ್ಲಿ – ಹ್ಯಾಂಗೇ ಬರೆದಿತ್ತೋ ಪ್ರಾಚೀನದಲ್ಲಿ ॥*<br>
*ಪಕ್ಷಿ ಅಂಗಳದಲ್ಲಿ ಬಂದು ಕೂತಂತೇ – ಆ ಕ್ಷಣದಲ್ಲಿ ಹಾರಿ ಹೋದಂತೇ ॥*<br>
*ಮಕ್ಕಳಾಡಿ ಮನೆ ಕಟ್ಟಿದಂತೇ – ಆಟ ಸಾಕೆಂದು ಅಳಿಸಿ ಹೋದಂತೇ ॥*<br>
*ನಾನಾ ಪರಿಯಲಿ ಸಂತೆ ನೆರೆದಂತೇ – ನಾನಾ ಪಂಥವ ಹಿಡಿದು ಹೋದಂತೇ ॥*<br>
*ಸಂಸಾರ ಪಾಶವ ನೀನೇ ಬಿಡಿಸಯ್ಯಾ – ಕಂಸಾರಿ ಪುರಂದರವಿಠಲರಾಯ ॥*<br>
ಹಾಂಗೇ ಇರಬೇಕು ಸಂಸಾರದಲ್ಲಿ.

ಈ ನುಡಿಗಳನ್ನು ಶ್ರೀಕಂಠನ್ ಅವರ ತುಂಬು ಶಾರೀರದಲ್ಲಿ, ಸಂಪೂರ್ಣ ಬಲದಿಂದ ಬಾಯ್ತೆರೆದು ಹಾಡುವ ಅವರ ವಿಶಿಷ್ಟ ಶೈಲಿಯಲ್ಲಿ ಕಂಚಿನ ಕಂಠದಿಂದ ಹೊರಹೊಮ್ಮುವ ವಿನಿಕೆಯಲ್ಲಿ ಕೇಳಿದಾಗ ಆಗುವ ಅನುಭವ ರೋಚಕವಾದ್ದು. ಇದು ನನ್ನ ವೈಯಕ್ತಿಕ ಅನುಭವ.

ಅವರು ಹಾಡಿರುವ ಇಂತಹ ರಚನೆಗಳನ್ನು ಕಲಿತು, ಹಾಡಲು ಹೊರಟಾಗ ಆಗುವ ಅನುಭವವೋ – ಅದಿನ್ನೂ ವಿಭಿನ್ನ. ಒಂದು ರೀತಿಯ ಭ್ರಮನಿರಸನ. ಏಕೋ ಏನೋ ಆ ಭಾವಪರವಶತೆ, ಭಾವನೆ ಬರುತ್ತಿಲ್ಲವಲ್ಲ ಎಂಬ ಅಳುಕು.

ಆಗ ನಮ್ಮ ಮನಸ್ಸಿಗೆ ಬರುವುದು – ಸಂಗೀತದ ಹಿರಿಮೆಯನ್ನು ಅರ್ಥಮಾಡಿಕೊಳ್ಳಲು, ಆ ಸಾಹಿತ್ಯದ ರಾಗದ ಒಳಹೊಕ್ಕು ಅದರ ರಸವನ್ನು ಕೇಳುಗರಿಗೆ ಉಣಬಡಿಸಲು ಮೊದಲು ನಾವೇ ಅದನ್ನು ಸಂಪೂರ್ಣವಾಗಿ ಅನುಭವಿಸಬೇಕು. ಅದಕ್ಕೆ ಬರಿಯ ಕಲಿಯುವ ಹುರುಪು ಮಾತ್ರ ಸಾಲದು, ಜೀವನದ ಅನುಭವವೂ ಮೇಳೈಸಬೇಕು. ಜೀವನದ ಮೌಲ್ಯಗಳನ್ನು ಅರ್ಥಮಾಡಿಕೊಳ್ಳುವ ವಯಸ್ಸೂ ಆಗಬೇಕು.

ಇಪ್ಪತ್ತರಲ್ಲಿ ನಮಗಿರುವ ಹುರುಪೇ ಬೇರೆ. ಆದರೆ ವಯಸ್ಸು ಮಾಗಿದಂತೆ ಜೀವನದ ನಾನಾ ಮುಖದ ಪರಿಚಯವಾಗುತ್ತ, ಸಂಗೀತವೂ ಪಕ್ವವಾಗುತ್ತ ನಮ್ಮಲ್ಲಿ ಹಲವಾರು ಬದಲಾವಣೆಗಳನ್ನು ತರುತ್ತದೆ ಎಂಬುದು ನನ್ನ ವಿನಮ್ರ ಅಭಿಪ್ರಾಯ. ಶ್ರೀಕಂಠನ್ ಅವರ ಕಂಠದಲ್ಲಿ ಪ್ರತಿಯೊಂದು ಕೃತಿ–ಕೀರ್ತನೆಯಲ್ಲೂ ಅದು ಎಷ್ಟೇ ಸರಳವಾದ ಮಟ್ಟಿರಲಿ, ಅತ್ಯಂತ ವೈಭವವಾಗಿ ನಮಗೆ ಗ್ರಾಹ್ಯವಾಗುವುದು ಈ 'ಅನುಭವ' ಎನ್ನುವ ದೊಡ್ಡ ಸಾಧನದಿಂದಲೇ.

*ಅನುಭವದ ಪಾಲೊಳು ವಿಚಾರ ಮಂಥನವಾಗೆ ।*<br>
*ಜನಿಯಿಕುಂ ಜ್ಞಾನ ನವನೀತವದೆ ಸುಖದಿಂ ॥*<br>
*ಗಿಣಿಯೋದು ಪುಸ್ತಕ ಜ್ಞಾನ; ನಿನ್ನನುಭವವೆ ।*<br>
*ನಿನಗೆ ಧರುಮದ ದೀಪ – ಮಂಕುತಿಮ್ಮ*

ಅನುಭವವೆ ಧರ್ಮದ ದೀಪ, ಅನುಭವವೆಂಬ ಹಾಲನ್ನು ವಿಚಾರವೆಂಬ ಮಂತಿನಿಂದ ಮಂಥನ ಮಾಡಿದಾಗ ಜ್ಞಾನವೆಂಬ ಬೆಣ್ಣೆ ಹುಟ್ಟುತ್ತದೆ. ಇದೇ ಸುಖವನ್ನು ಕೊಡತಕ್ಕದ್ದು, ಬರಿಯ ಪುಸ್ತಕದಿಂದ ದೊರೆತ ಜ್ಞಾನ ಕೇವಲ ಗಿಳಿಪಾಠ.

ಶ್ರೀಕಂಠನ್ ಅವರು ಗುರುವಿನ ಮಾರ್ಗ ದರ್ಶನದೊಂದಿಗೆ ತಮ್ಮ ಸ್ವಸಾಮರ್ಥ್ಯದಿಂದ ಅನುಭವ ಗಳಿಸಿ ಸಂಗೀತ ಪಯಣದಲ್ಲಿ ನಾದಯೋಗಿಗಳಾಗಿದ್ದವರು. ಅವರ ಸುದೀರ್ಘ ಸಾಂಸಾರಿಕ ಜೀವನದಲ್ಲಿ, ಕಲಾಜೀವನದಲ್ಲಿ, ಹಲವಾರು ಅನುಭವಗಳನ್ನು ಪಡೆದು, ಅವುಗಳನ್ನೆಲ್ಲ ತಮ್ಮ ಗಾಯನದಲ್ಲಿ ಬೆರೆಸಿದ್ದರು. ಹಾಗಾಗಿಯೇ ಅವರು ಶ್ರುತಿ ಹಿಡಿದರೇ ಸಾಕು, ಇಡೀ ಸಭಾಂಗಣ ಆ ನಾದತರಂಗಗಳಲ್ಲಿ ತುಂಬಿಹೋಗುತ್ತಿತ್ತು.

ಶ್ರೀಕಂಠನ್ ಸರ್ ಅವರ ಹಿರಿಯ ಶಿಷ್ಯರೂ ನಮ್ಮ ರಾಷ್ಟ್ರದ ಹೆಮ್ಮೆಯ ಕಲಾವಿದರೂ ಆದ ವಿದುಷಿ ಎಂ. ಎಸ್. ಶೀಲ ಹಾಗೂ ವಿದುಷಿ ಟಿ. ಎಸ್. ಸತ್ಯವತಿ ಅವರೊಂದಿಗೆ ಹಲವಾರು ಸಂದರ್ಭಗಳಲ್ಲಿ ವಿಚಾರ ವಿನಿಮಯ ಮಾಡಿದಾಗ ಕಾಣುವ ಅಂಶ ಶ್ರೀಯುತರಿಗೆ ಸಂಗೀತ ಕಲೆಯ ಬಗ್ಗೆ ಇದ್ದ ಉತ್ಕಟವಾದ ಆಸೆ, ಬಯಕೆ.

ಇಂತಹ ಉತ್ಕಟ ಇಚ್ಛೆ ಇದ್ದುದರಿಂದಲೇ ಅವರು ೯೪ರ ವಯಸ್ಸಿನಲ್ಲೂ ಜೀವನದ ಉತ್ಸಾಹವನ್ನು ಕಳೆದುಕೊಳ್ಳಲಿಲ್ಲ, ಕಲಿಯುವ ಬಯಕೆ ತೊರೆದಿರಲಿಲ್ಲ. ಎಂದೆಂದಿಗೂ ಕಲಿಯುವ ದಾಹ, ತೀರದ ಬಯಕೆ, ಹೊಸತನ್ನು ಪ್ರದರ್ಶಿಸುವ ಆಸೆ ಅವರಲ್ಲಿತ್ತು. ಇವರ ಜೀವನವೇ ನಮಗೆ ಒಂದು ಮಾದರಿ. ಇಂತಹ ಒಬ್ಬ ಕಲಾವಿದರನ್ನು ನಮ್ಮ ಕಾಲಮಾನದಲ್ಲಿ ನೋಡಿದ್ದು, ಅವರೊಂದಿಗೆ ಒಡನಾಟವಿದ್ದುದು ಹಾಗೂ ಅವರ ಬಗ್ಗೆ ಹಲವಾರು ರಸವತ್ತಾದ ಪ್ರಸಂಗಗಳನ್ನು ಕೇಳುವುದೇ ನಮಗೆ ಹಬ್ಬ. ಇದೇ ನಮ್ಮ ಸುಕೃತ. ಶ್ರೀಕಂಠನ್ ಸರ್ ಅವರು ಪರಿಪಾಲಿಸಿದ ಜೀವನಮೌಲ್ಯ ಗಳಲ್ಲಿ ಕೆಲವನ್ನಾದರೂ ಅಳವಡಿಸಿಕೊಳ್ಳಲು ನಾವು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ಅದೇ ನಾವು ಅವರಿಗೆ ಸಲ್ಲಿಸುವ ಗೌರವ.

**'ಗಾನಕಲಾಶ್ರೀ' ಕಲಾವತಿ ಅವಧೂತ್**<br>
ನಂ. ೧೧/೧, (ಹಳೆಯ ನಂ. ೧೫೨)<br>
೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ<br>
ದೇವನಾಥಚಾರ್ ಬೀದಿ, ಚಾಮರಾಜಪೇಟೆ<br>
ಬೆಂಗಳೂರು – ೫೬೦ ೦೧೮

ಸಾಯಂಕಾಲದ ಮನರಂಜನೆಯ ಸಮಯವನ್ನು ವಾಣಿಜ್ಯೀಕೃತ ಮನರಂಜನೆಗಳೇ ಗುತ್ತಿಗೆ ಹಿಡಿದುಬಿಡುತ್ತವೆ. ಜೊತೆಗೆ ಜಾಹಿರಾತುಗಳ ಕಿರಿಕಿರಿ ಬೇರೆ. ಇದನ್ನು ತಪ್ಪಿಸುವ ನಿಟ್ಟಿನಲ್ಲಿ ಗುಣಮಟ್ಟದ ಸೇವೆ ಎನ್ನುವ ಕಾಯ್ದೆಯನ್ನು ಜಾರಿಗೊಳಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಯಾವುದೇ ಒಂದು ದೂರದರ್ಶನದ ಕಾರ್ಯಕ್ರಮದ ನಡುವೆ ಅಂದರೆ ಒಂದು ಘಂಟೆಯ ಅವಧಿಯಲ್ಲಿ ಕೇವಲ ೧೨ ನಿಮಿಷ ಮಾತ್ರ ಜಾಹಿರಾತುಗಳನ್ನು ಪ್ರಸರಣ ಮಾಡಬೇಕೆಂಬ ನಿಯಮವಿದೆ. ಅದರಲ್ಲೂ ಕಾರ್ಯಕ್ರಮದ ನಡುವೆ ಅವುಗಳನ್ನು ತೂರಬಾರದು. ವೀಕ್ಷಕರಿಗೆ ಗುಣಮಟ್ಟದ ಮನರಂಜನೆಯನ್ನು ನೀಡಬೇಕು ಎನ್ನುವ ಷರತ್ತೂ ಇದೆ. ಈ ಬಗೆಯ ಕಟ್ಟಳೆಗಳ ಬಗ್ಗೆ ವಾಣಿಜ್ಯೀಕೃತ ಮನರಂಜನೆಯ ಮಂದಿಗೆ ಸಮಾಧಾನವಾಗದೆ ಮತ್ತೆ ಕ್ಯಾತೆ ತೆಗೆದಿರುವುದಿದೆ. ಇಡೀ ಹೊತ್ತು ಹಣವನ್ನು ಕೊಳ್ಳೆ ಹೊಡೆಯಲು ಅವಕಾಶ ಕೊಡಬೇಕು ಎನ್ನುವಂತೆ ಅವರು ಬಯಸುವುದಿದೆ. ಹೀಗೆ ಈ ವಾಣಿಜ್ಯೀಕೃತ ಮನರಂಜನೆ ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ಬಾಧಿಸುತ್ತಿರುವ ಈ ಶತಮಾನದ ಬಹುದೊಡ್ಡ ಶಾಪವಾಗಿ ಪರಿಣಮಿಸುತ್ತಿದೆ. ಆ ಬಗ್ಗೆ ಚರ್ಚೆ, ಚಿಂತನೆಗಳು ಕೂಡ ನಮ್ಮಲ್ಲಿ ನಿರೀಕ್ಷಿತ ಮಟ್ಟದಲ್ಲಿಲ್ಲ ಎನ್ನುವುದು ತೀರಾ ವಿಪರ್ಯಾಸ ಮತ್ತು ವಿಷಾದನೀಯ.



# ವಾಣಿಜ್ಯೀಕೃತ ಮನರಂಜನೆ ಮತ್ತು ಅದರ ಸಾಮಾಜಿಕ ಪರಿಣಾಮ

ಎಲ್ಲ ರಾಷ್ಟ್ರಗಳಲ್ಲಿ ಎಲ್ಲ ಕಾಲಗಳಲ್ಲಿ ಸಾಮ್ರಾಜ್ಯಶಾಹಿ ಧೋರಣೆಯನ್ನು ಆಯಾ ಕಾಲಮಾನವೇ ಸಂಪೋಷಿಸಿಕೊಂಡು ಬಂದಿರುವುದಿದೆ. ಪ್ರತಿಯೊಬ್ಬ ಆಳರಸನೂ ಅದೇ ಬಗೆಯ ಪರಿಸರವನ್ನು ಬೇರೆ ಬೇರೆ ರೀತಿಯಿಂದ, ಮೂಲಗಳಿಂದ ಬಯಸುವದಿತ್ತು. ೧೮ ಮತ್ತು ೧೯ನೇ ಶತಮಾನದ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ಪ್ರಭುತ್ವದ ಸ್ಥಾಪನೆಯಲ್ಲಿ ಅನುಸರಿಸಿದ ಮಾರ್ಗ ಈಗ ಹಳತು. ಆ ದಿಸೆಯಲ್ಲಿ ಅವರು ಮೊದಲು ನೌಕಾದಳ, ನಂತರ ಭೂದಳ ಅವೆರಡರ ಬೆನ್ನಲ್ಲಿ ನೌಕರಶಾಹಿ ಪಡೆಯನ್ನು ಸಾಮ್ರಾಜ್ಯದ ಸ್ಥಾಪನೆಗಾಗಿ ಅಟ್ಟುವದಿತ್ತು. ಅವುಗಳ ನಂತರ ಅಂತಿಮವಾಗಿ ಅವರ ಶೈಕ್ಷಣಿಕ ಕ್ರಮವನ್ನು ಪರಿಚಯಿಸುವ ಮೂಲಕ ಜಂಡಾ ಊರುವದಿತ್ತು. ಆದರೆ ಈಗ ಅಮೇರಿಕೆಯಂಥ ರಾಷ್ಟ್ರಗಳು ತುಸು ವಿಭಿನ್ನವಾದ ರೀತಿಯಲ್ಲಿ ಆ ಕೆಲಸವನ್ನು ಬಹುತೇಕರ ಗಮನಕ್ಕೆ ಬಾರದ ಹಾಗೆ ವಾಣಿಜ್ಯೀಕೃತ ದೂರದರ್ಶನದ ಕಾರ್ಯಕ್ರಮಗಳನ್ನೇ ಸಾಧನವನ್ನಾಗಿಟ್ಟುಕೊಂಡು ಅಂದು ಬ್ರಿಟಿಷರು ಮಾಡಿದ ಕೆಲಸವನ್ನೇ ವಿಭಿನ್ನ ನೆಲೆಯಲ್ಲಿ ಮಾಡುತ್ತಿವೆ. ವ್ಯತ್ಯಾಸ ಏನೆಂದರೆ ಅಂದು ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿ ಹಾಗೂ ಅದಕ್ಕೆ ಒಳಪಡುವ ಜನಸಮುದಾಯಗಳಲ್ಲಿ, ನೆಲೆಗಳಲ್ಲಿ ಒಂದು ಬಗೆಯ ಭಯ, ತಾತ್ಸಾರ ಮತ್ತು ಆಕ್ರೋಶಕ್ಕೆ ಕಾರಣ ವಾಗುತ್ತಿತ್ತು. ಆದರೆ ಈಗ ಅಮೇರಿಕೆ ತನ್ನ ವಾಣಿಜ್ಯೀಕೃತ ಮನರಂಜನೆಯ ಮೂಲಕ ಮಾಡುವ ಸಾಮ್ರಾಜ್ಯಶಾಹಿ ವಿಸ್ತರಣೆಯ ಧೋರಣೆಯಲ್ಲಿ ಯಾವುದೇ ಬಗೆಯ ಭಯ, ತಾತ್ಸಾರ, ಆಕ್ರಮಣವಿಲ್ಲ. ಇದೊಂಥರಾ ಸಾವಿನಲ್ಲೂ ಸುಖ ತೋರುವ ತಂತ್ರಗಾರಿಕೆ. ಇಲ್ಲಿ ಅದು ಯುದ್ಧ ಮತ್ತು ಆಕ್ರಮಣಗಳು ಮಾಡಬಹುದಾದ ಅನಾಹುತಗಳಿಗಿಂತಲೂ ಬಹುಪಾಲು ಆತಂಕಕಾರಿ ಪರಿಣಾಮಗಳನ್ನು ಬೇರೆ ರೀತಿಯಲ್ಲಿ ಉಂಟುಮಾಡಿದರೂ ಯುದ್ಧದ ಸಂದರ್ಭದ ತೀವ್ರತೆಯ ಕಾವು ಇಲ್ಲಿರುವುದಿಲ್ಲ.

**ಡಾ॥ ಎಸ್. ಬಿ. ಜೋಗುರ**

ತಣ್ಣಗೆ ಆವರಿಸುತ್ತಲೇ ಸಾಗುವ ಈ ಪರಿಕ್ರಮಣ ಅತ್ಯಂತ ಅಪಾಯಕಾರಿಯಾದುದು. ಯಾವುದೇ ಬಗೆಯ ಪ್ರತಿರೋಧಗಳಿಲ್ಲದೆ ಪ್ರಭುತ್ವವನ್ನು ಈ ಮುಖೇನ ಸ್ಥಾಪಿಸುವ ಹುನ್ನಾರ ಅಮೇರಿಕೆಯಂಥ ರಾಷ್ಟ್ರಗಳದ್ದು. ಸೂರ್ಯ ಮುಳುಗದ ಸಾಮ್ರಾಜ್ಯ ಗಳನ್ನು ನಾವು ಉಲ್ಲೇಖಿಸುವುದಿದೆ. ದೂರದರ್ಶನದ ವಾಣಿಜ್ಯೀಕೃತ ಮನರಂಜನಾ ಕಾರ್ಯಕ್ರಮಗಳಿಗೆ ಸಂಬಂಧಿಸಿಯೂ ಈ ಮಾತನ್ನು ವಿಸ್ತರಿಸ ಬಹುದಾಗಿದೆ. ರಷ್ಯಾದಂತಹ ರಾಷ್ಟ್ರಗಳಲ್ಲಿ ಯುದ್ಧದ ತಾಂತ್ರಿಕ ಸಂಗತಿಗಳೇ ಇವತ್ತಿಗೂ ಸಾಮ್ರಾಜ್ಯದ ವಿಸ್ತರಣೆಗೆ ಮತ್ತು ಪ್ರಭುತ್ವದ ಆಧಿಪತ್ಯಕ್ಕೆ ಬಹುಮುಖ್ಯ ಕಾರಣ ಎನ್ನುವ ನಂಬುಗೆ ಬಲವಾಗಿದೆ. ಇನ್ನು ನಮ್ಮಂಥಾ ರಾಷ್ಟ್ರಗಳಂತೂ ಈ ವಾಣಿಜ್ಯೀಕೃತ ಮನರಂಜನೆಯ ಅಪಾಯವನ್ನು ಲೆಕ್ಕಿಸಲಿಕ್ಕೂ ಸಾಧ್ಯವಿಲ್ಲ. ಕೇವಲ ನಾವು ಮಾತ್ರವಲ್ಲ, ತೃತೀಯ ಜಗತ್ತಿನ ಬಹುತೇಕ ರಾಷ್ಟ್ರಗಳು ಈ ದೂರದರ್ಶನದ ಮಸಾಲಾ ಕಾರ್ಯಕ್ರಮಗಳು ಭವಿಷ್ಯದಲ್ಲಿ ತಂದೊಡ್ಡಬಹುದಾದ ಆತಂಕಗಳನ್ನು ಊಹಿಸಲಿಕ್ಕೂ



ಸಾಧ್ಯವಿಲ್ಲ. ಅದೇನಿದ್ದರೂ ಆ ಬಗೆಯ ಬೀಜಗಳನ್ನು ಬಿತ್ತುವ ಯತ್ನದಲ್ಲಿರುವ ಅಮೇರಿಕೆಯಂಥಾ ರಾಷ್ಟ್ರಗಳಿಗೆ ಮಾತ್ರ ಆ ಗ್ರಹಿಕೆ ಸಾಧ್ಯ. ಯುರೋಪಿನ ಕೆಲವು ರಾಷ್ಟ್ರಗಳಿಗೆ ಅಮೇರಿಕೆ ಈ ದೂರದರ್ಶನದ ಕಾರ್ಯಕ್ರಮಗಳನ್ನು ಸಾಧನವಾಗಿಟ್ಟುಕೊಂಡು ತನ್ನ ಸಾಮ್ರಾಜ್ಯಶಾಹಿ ಧೋರಣೆಯನ್ನು ವಿಸ್ತರಿಸುವತ್ತ ನಡೆಸುತ್ತಿರುವ ತಂತ್ರಗಾರಿಕೆಗಳು ತಿಳಿದಿವೆ. ಹಾಗೆಂದು ಅದನ್ನು ಪ್ರತಿಭಟಿಸುವಂತೆಯೂ ಇಲ್ಲ. ಯಾಕೆಂದರೆ ಜನರಿಗೆ ಮನರಂಜನೆ ಕೊಡುವ ನೆಪದಲ್ಲಿ ಈ ಬಗೆಯ ಷಡ್ಯಂತ್ರ ನಡೆಸಲಾಗುತ್ತಿದೆ.

ಅಮೇರಿಕೆಯಂಥಾ ರಾಷ್ಟ್ರಗಳು ದೂರದರ್ಶನದ ಮುಖಾಂತರ ಅವರ ಕಾರ್ಯಕ್ರಮಗಳನ್ನು ಮಾತ್ರ ರವಾನೆ ಮಾಡದೆ ಪರೋಕ್ಷವಾಗಿ ಆ ಕಾರ್ಯಕ್ರಮದ ಜೊತೆಯಲ್ಲಿ ಅವರ ಆಲೋಚನಾ ಕ್ರಮವನ್ನೂ ರವಾನೆ ಮಾಡುತ್ತವೆ. ಇದು ಬಹುತೇಕ ರಾಷ್ಟ್ರಗಳ ಜನಸಾಮಾನ್ಯನ ಗ್ರಹಿಕೆಗೆ ಸಿಗದ ವಿಷಯ. ವಿಶ್ವದ ಎಲ್ಲ ಭಾಗಗಳಲ್ಲೂ ಬಂಡವಾಳಶಾಹಿ ವ್ಯವಸ್ಥೆ ತೀವ್ರತೆರನಾದ ತಾಂತ್ರಿಕ ಪ್ರಗತಿಗೆ ಕಾರಣವಾಗಿರುವಂತೆ ಆಯಾ ರಾಷ್ಟ್ರಗಳ ಸಾಂಸ್ಕೃತಿಕ ಅಧಃಪತನಕ್ಕೂ ಕಾರಣವಾಗಿರುವುದೂ ವಾಸ್ತವ ಸಂಗತಿ. ೧೯ನೇ ಶತಮಾನದ ಆರಂಭದಲ್ಲಿಯೇ ಅಮೇರಿಕೆಯಲ್ಲಿಯ ಸಾಂಸ್ಥಿಕ ಮೂಲಗಳನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಿದ ಅಲೆಕ್ಸಿ ಡಿ. ಟಾಕೆವೆಲ್ಲಿ ಗುರುತಿಸಿದಂತೆ, “ಅಮೇರಿಕನ್ನರು ತೀವ್ರವಾದ ಬದಲಾವಣೆಯ ನಡುವೆಯೂ ಹೊಂದಿಕೊಂಡು ಬದುಕುಳಿಯುತ್ತಾರೆ.” ಹೊಸ ಬಗೆಯ ತಂತ್ರಜ್ಞಾನವನ್ನು ಶೋಷಣೆ ಮಾಡಿ ಬೆಳೆಯುವ, ಬದುಕುವ ಗತ್ತುಗಾರಿಕೆಗಳೂ ಅಮೇರಿಕೆಯ ಬಂಡವಾಳಶಾಹಿಗಳಿಗೆ ಹೊಸದಂತೂ ಅಲ್ಲ. ಈ ಬಗೆಯ ತಾಂತ್ರಿಕ ಭರಾಟೆಯ ನಡುವೆಯೂ ಸಂಸ್ಕೃತಿ ಎನ್ನುವುದು ಬಿಕ್ಕಟ್ಟಿನಲ್ಲಿ ಬಸವಳಿಯಬೇಕಾಗುತ್ತದೆ. ಈಗ ಈ ಮಾತು ಅಮೇರಿಕೆಯಲ್ಲಿ ಸಾಬೀತಾಗುತ್ತಿದೆ. ಕೇವಲ ಅಮೇರಿಕೆ ಮಾತ್ರವಲ್ಲ, ವಿಶ್ವದ ಬಹುತೇಕ ರಾಷ್ಟ್ರಗಳು ತಾಂತ್ರಿಕತೆಯನ್ನೇ ಬದಲಾವಣೆ ಮತ್ತು ಪ್ರಗತಿ ಎಂದು ಹಾತೊರೆಯುತ್ತಿವೆ. ಈ ಮೂಲಕ ತಾವು ದಿವಾಳಿಯಾಗುತ್ತಿರುವ ಸಾಂಸ್ಕೃತಿಕ ಪರಿಸರದ ಪ್ರಜ್ಞೆಯೂ ಅವುಗಳಿಗೆ ಇಲ್ಲ. ಶ್ರೇಷ್ಠ ಸಮಾಜಶಾಸ್ತ್ರಜ್ಞ ಆಗ್ಬರ್ನ್ ಮತ್ತು ನಿಮಕಾಫ್ ಎನ್ನುವವರು ಈ ಬಗೆಯ ಸ್ಥಿತಿಯನ್ನು ಸಾಂಸ್ಕೃತಿಕ ಹಿಂಬೀಳುವಿಕೆ ಎಂದು ಕರೆದಿರುವುದಿದೆ. ವಸ್ತುರೂಪದ ಭೌತ ಸಂಸ್ಕೃತಿ ತೀವ್ರವಾಗಿ ಬದಲಾವಣೆ ಹೊಂದುವ ಜೊತೆಗೆ ಮುಂದೆ ಸಾಗುವ ಗುಣವನ್ನು ಹೊಂದಿದೆ. ವಿಷಯರೂಪದ ಅಭೌತ ಸಂಸ್ಕೃತಿ ನಿಧಾನವಾಗಿ ಸಾಗುತ್ತದೆ. ಪರಿಣಾಮವಾಗಿ ಅಲ್ಲಿ ಭೌತ ಮತ್ತು ಅಭೌತ ಸಂಸ್ಕೃತಿಯ ನಡುವೆ ಒಂದು ಬಗೆಯ ಅಂತರ ನಿರ್ಮಾಣವಾಗುತ್ತದೆ. ಇದನ್ನೇ ಸಾಂಸ್ಕೃತಿಕ ಹಿಂಬೀಳುವಿಕೆ ಎಂದು ಕರೆಯಲಾಗುವುದು. ಇಂದು ದೂರದರ್ಶನದ ಚಾನೆಲ್‌ಗಳು ಬಿತ್ತರಿಸುವ ವಾಣಿಜ್ಯೀಕೃತ ಮನರಂಜನೆಯು ಇಡೀ ವಿಶ್ವದ ಬೇರೆ ಬೇರೆ ರಾಷ್ಟ್ರಗಳ, ಅದರಲ್ಲೂ ಔದ್ಯೋಗೀಕರಣದ ಪ್ರಕ್ರಿಯೆಗೆ ಸಿಲುಕಿರುವ ರಾಷ್ಟ್ರಗಳ ಸಾಂಸ್ಕೃತಿಕ ಬೇರುಗಳನ್ನು ಸಡಿಲುಗೊಳಿಸುವಲ್ಲಿ ಭರಾಟೆಯಿಂದ ತೊಡಗಿಸಿಕೊಂಡಿವೆ. ಹಿಂದೆ ಕಾರ್ಲ್ ಮಾರ್ಕ್ಸ್ ಯುರೋಪನ್ನು ಉಲ್ಲೇಖಿಸುತ್ತ ಅದನ್ನು ಒಂದು ‘ಭೂತವನ್ನು ಬೇಟೆಯಾಡುವ ನೆಲೆ’ ಎಂದು ಕರೆದಿದ್ದ. ಸದ್ಯದ ಸಂದರ್ಭದಲ್ಲಿ ಆತ ಬದುಕಿದ್ದರೆ ಈ ವಾಣಿಜ್ಯೀಕೃತ ಮನರಂಜನೆಯನ್ನೇ ದೊಡ್ಡ ಭೂತ ಎಂದು ಕರೆಯುತ್ತಿದ್ದನೇನೋ...? ಈ ಬಗೆಯ ವಾಣಿಜ್ಯೀಕೃತ ಮನರಂಜನೆಗಳು ಪಶ್ಚಿಮದ ನೆಲೆಗಳಲ್ಲಿಯ ಸಂಸ್ಕೃತಿಯನ್ನು ಚಿವುಟಿ ಈಗ ಪೂರ್ವದೆಡೆಗೆ ತನ್ನ ನಾಲಿಗೆಯನ್ನು ಚಾಚುತ್ತಿರುವದಂತೂ ಹೌದು. ಅದರ ಕೆನ್ನಾಲಿಗೆಯ ವಿಸ್ತೃತ ರೂಪವನ್ನು ಬಹುತ್ವದ ಸಾಂಸ್ಕೃತಿಕ ಬಾಹುಳ್ಯವನ್ನು ಹೊಂದಿರುವ ಭಾರತದಂತಹ ನೆಲೆಗಳು ತುರ್ತಾಗಿ ಗುರುತಿಸಿ ಎಚ್ಚರಗೊಳ್ಳಬೇಕಾಗಿದೆ.

ಒಂದೆಡೆ ಮನರಂಜನೆ ಕಾರ್ಯಕ್ರಮಗಳು, ಅವುಗಳ ನಡುವೆ ಪೈಪೋಟಿಗೆ ನಿಂತಂತೆ ಕಾರ್ಯಕ್ರಮದ ನಡುವೆ ದಿಢೀರನೇ ತೂರಿಬರುವ ಜಾಹಿರಾತುಗಳು ನಮ್ಮ ಸಾಂಸ್ಕೃತಿಕ ಪರಿಸರದ ಮೇಲೆ ನಿರಂತರವಾಗಿ ದೊಡ್ಡ ಪ್ರಮಾಣದ ಒಂದು ಗದಾಪ್ರಹಾರವನ್ನೇ ಮಾಡುತ್ತಿವೆ. ಇನ್ನೂ ಊರುಭಂಗವಾಗಿಲ್ಲದಿರುವುದರಿಂದ ನಮಗೆ ಅದರ ನೋವುಗಳು ಬಾಧಿಸುತ್ತಿಲ್ಲ. ಈ ಜಾಹಿರಾತುಗಳ ಮೂಲಕ ಕೋಟ್ಯಾನುಗಟ್ಟಲೆ ವ್ಯವಹಾರ ಮಾಡುವ ಈ ವಾಣಿಜ್ಯೀಕೃತ ಚಾನೆಲ್‌ಗಳು ವೀಕ್ಷಕರನ್ನು ಹಪಾಹಪಿ ಗ್ರಾಹಕರನ್ನಾಗಿ ಪರಿವರ್ತಿಸುವಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಡೆನ್ಮಾರ್ಕ್‌ನಲ್ಲಿ ಈ ಬಗೆಯ ವಾಣಿಜ್ಯೀಕೃತ ಮನರಂಜನೆಯನ್ನು ಸಾತತ್ಯವಾಗಿ ವಿರೋಧಿಸುತ್ತಾ ಬರುವ ಜೊತೆಗೆ ಜಾಹಿರಾತುಗಳನ್ನು ರಾಷ್ಟ್ರೀಯ ಚಾನೆಲ್‌ನಲ್ಲಿ ಮಾತ್ರ ಪ್ರಸಾರ ಮಾಡುವ ಹಾಗೆ ಒತ್ತಡ ತರಲಾಯಿತು. ಹಾಗೆಯೇ ಆಸ್ಟ್ರಿಯಾದಲ್ಲಿ ಔಷಧಿಯ ಬಗ್ಗೆ, ಬ್ಯಾಂಕುಗಳ ಬಗ್ಗೆ, ರಾಜಕೀಯದ ಬಗ್ಗೆ, ಧಾರ್ಮಿಕ ಸಂಘಟನೆಗಳ ಬಗ್ಗೆ ಯಾವುದೇ ರೀತಿಯ ಜಾಹಿರಾತುಗಳನ್ನು ನೀಡುವಂತಿಲ್ಲ ಎಂದು ನಿಷೇಧವನ್ನು ಹೇರಿರುವುದಿದೆ. ಅಮೇರಿಕೆಯಂಥಾ ರಾಷ್ಟ್ರಗಳು ಈ ರಾಷ್ಟ್ರಗಳಿಗೆ ನೀವು ಹೀಗೆ ಮಾಡುವುದರಿಂದ ಅಪಾರ ಪ್ರಮಾಣದ ಆದಾಯವನ್ನು ಕಳೆದುಕೊಳ್ಳುತ್ತೀರಿ ಎಂದು ತನ್ನ ವಾಣಿಜ್ಯ ನೀತಿಯನ್ನು ಪ್ರತಿಪಾದಿಸಬಹುದೇನೋ...? ಇಂದು ಎಲ್ಲ ವಾಣಿಜ್ಯೀಕೃತ ಮನರಂಜನೆಯನ್ನು ನಿಯಂತ್ರಿಸುವವರು ಜಾಹಿರಾತುದಾರರು. ಅವರು ಮನರಂಜನೆಯನ್ನು ಒಂದು ಸಾಧನವನ್ನಾಗಿ ಮಾಡಿಕೊಂಡು ಅಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳ ನಡುವೆ ಬೇಕಾಬಿಟ್ಟಿಯಾಗಿ ನುಸುಳುವ, ತಮಗೆ ಬೇಕಾಗಿರುವ ಪ್ರಮಾಣದ ಗ್ರಾಹಕರನ್ನು ಸೆಳೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತಿದ್ದಾರೆ. ಮುಂದುವರಿದ ರಾಷ್ಟ್ರಗಳಲ್ಲಿಯ ವಾಣಿಜ್ಯೀಕೃತ ಮನರಂಜನೆ ಜನಪರ ಕಾರ್ಯಕ್ರಮ ಗಳಿಗಿಂತಲೂ ಜನಪ್ರಿಯ ಕಾರ್ಯಕ್ರಮಗಳ ಬಗ್ಗೆಯೇ ಹೆಚ್ಚಿನ ಆಸ್ಥೆಯನ್ನು

# ಗಜ಼ಲ್

ಬಿತ್ತಿದ ಬೀಜ ಮುರುಟುತಿದೆ ನೆಲದಲ್ಲೇ ಸತ್ತಂತಿದೆ ಬದುಕು
ಕನಸುಗಳು ಕರಗಿಹೋಗಿವೆ ಕಣ್ಣಲ್ಲೇ ಸತ್ತಂತಿದೆ ಬದುಕು

ಮಾಯಾ ಜಿಂಕೆಯ ಬೆನ್ನೇರಿ ಸಾಗಿಹುದು ಪಯಣ ದೂರದಲ್ಲಿ
ಹಾ ಲಕ್ಷ್ಮಣಾ ಅಡಗಿದೆ ಗಂಟಲಲ್ಲೇ ಸತ್ತಂತಿದೆ ಬದುಕು

ಎದೆಯೊಳಡಗಿದ್ದ ಭಾವನೆಗಳೆಲ್ಲ ಉರುಳಾಡಿ ಗೋಳಾಡಿ
ತೂಗಾಡುತಿವೆ ಕಟುಕನ ಕೊಕ್ಕೆಯಲ್ಲೇ ಸತ್ತಂತಿದೆ ಬದುಕು

ಹಗಲಿನಲ್ಲಿ ಹೆಜ್ಜೆಗಳ ಕಳವು ಇರುಳಿನಲ್ಲಿ ನೆರಳಿನ ಭಯವು
ಸಂಶಯದ ಹಾವುಗಳೆಲ್ಲ ನೆಲದಲ್ಲೇ ಸತ್ತಂತಿದೆ ಬದುಕು

ಕುದಿಯುತಿದೆ ಮನವು ಎಲ್ಲವನ್ನೂ ಆಪೋಶನಗೈಯಲೆಂದು
ಕಾದಿಹನು ಸಿದ್ಧ ಬದಲಾಗಲು ತನ್ನಲ್ಲೇ ಸತ್ತಂತಿದೆ ಬದುಕು

**ಸಿದ್ಧರಾಮ ಹಿರೇಮಠ. ಕೂಡ್ಲಿಗಿ**
ಬಾಪೂಜಿ ನಗರ, ಗುಡೇಕೋಟೆ ರಸ್ತೆ, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ

ತೋರುತ್ತಿವೆ. ಇಂದು ಅಸ್ತಿತ್ವದಲ್ಲಿರುವ ವಾಣಿಜ್ಯೀಕೃತ ಮನರಂಜನೆಯ ಚಾನೆಲ್‌ಗಳು ಜನರ ಸಮಯವನ್ನು ಸ್ಪರ್ಧಾತ್ಮಕವಾಗಿ ಲೂಟಿಮಾಡುವುದರಲ್ಲಿ ತೊಡಗಿ ಕೊಂಡಿವೆ. ನಾ ಮುಂದು ತಾ ಮುಂದು ಎಂದು ಗ್ರಾಹಕರಿಗೆ ಗಾಳ ಹಾಕುವಲ್ಲಿ ಕಸರತ್ತು ಮಾಡುತ್ತಿವೆ. ಪರಿಣಾಮವಾಗಿ ಹೆಚ್ಚೆಚ್ಚು ಜನಪ್ರಿಯ ಕಾರ್ಯಕ್ರಮಗಳನ್ನೇ ಪ್ರಸಾರ ಮಾಡುವ ಭರಾಟೆಯ ನಡುವೆ ಅರ್ಥಪೂರ್ಣ ಮತ್ತು ಗಂಭೀರವಾದ ವಿಷಯಗಳನ್ನಾಧರಿಸಿದ ಕಾರ್ಯಕ್ರಮಗಳೇ ವಿರಳವಾಗುತ್ತವೆ. ಜೊತೆಗೆ ವೀಕ್ಷಕರ ಮನಃಸ್ಥಿತಿಯ ಮೇಲೂ ಕಾರಣ–ಪರಿಣಾಮಗಳ ಸಂಬಂಧ ಸ್ಥಾಪನೆಯಾಗತೊಡಗುತ್ತಿದೆ. ಈ ಬಗೆಯ ವಾಣಿಜ್ಯೀಕೃತ ಮನರಂಜನೆಯನ್ನೇ ಮಾರುವ ಚಾನೆಲ್‌ಗಳ ನಡುವೆ ಸರಕಾರದ ಅಡಿಯಲ್ಲಿ ನಡೆಯುವ ರಾಜ್ಯ ಮಟ್ಟದ ದೂರದರ್ಶನದ ಚಾನೆಲ್‌ಗಳು ಕೂಡ ಇವರ ಜೊತೆಗೆ ಸ್ಪರ್ಧೆಗಿಳಿದು ಕ್ರಮೇಣವಾಗಿ ಅವೂ ಸಹ ಅದೇ ಮಾರ್ಗದಲ್ಲಿ ಸಾಗುವ ಸಾಧ್ಯತೆಗಳಿವೆ. ಸದ್ಯ ಬಿ.ಬಿ.ಸಿ. ಅದೇ ಬಗೆಯ ಸ್ಥಿತಿಯನ್ನು ಅನುಭವಿಸುತ್ತಿದೆ. ಇದಕ್ಕೆ ನಮ್ಮ ರಾಷ್ಟ್ರೀಯ ಚಾನೆಲ್‌ಗಳು ಕೂಡ ಹೊರತಲ್ಲ. ಜನರು ಈ ಬಗೆಯ ವಾಣಿಜ್ಯೀಕೃತ ಮನರಂಜನೆಯನ್ನು ನೋಡಿ ನೋಡಿ ಅದಕ್ಕಿಂತಲೂ ತೀವ್ರತೆರನಾದ ಪರಿಣಾಮವನ್ನು ಉಂಟುಮಾಡಬಹುದಾದ ಕಾರ್ಯಕ್ರಮಗಳನ್ನೇ ನಿರೀಕ್ಷಿಸುತ್ತಾರೆ. ಹಾಗಾಗಿಯೇ ಹಲ್ಲೆ, ಅತ್ಯಾಚಾರದ ಪ್ರಕರಣಗಳನ್ನು ಮತ್ತೆ ಮತ್ತೆ ವಾರಾನುಗಟ್ಟಲೆ ತೋರಿಸುವುದಿದೆ. ಅಂತಿಮವಾಗಿ ವೀಕ್ಷಕರ ನಿಜವಾದ ಅಭಿರುಚಿಯನ್ನು ಹಾಳುಗೆಡವಿ, ತಾನು ಬಡಿಸಿದ್ದನ್ನು ಮಾತ್ರ ಉಣ್ಣುವ ಸ್ಥಿತಿಗೆ ಅವರನ್ನು ನೂಕುವಲ್ಲಿ ಈ ವಾಣಿಜ್ಯೀಕೃತ ಮನರಂಜನೆಯ ಚಾನೆಲ್‌ಗಳು ಯಶಸ್ವಿಯಾಗಿವೆ. ಇಲ್ಲಿಯ ಜಾಹಿರಾತುಗಳ ಹಾವಳಿಗೆ ತತ್ತರಿಸಿದ ಕೆಲವು ಪತ್ರಿಕೆಗಳು ಈ ಜನಪ್ರಿಯ ಮಾರ್ಗವನ್ನೇ ತಮ್ಮ ಪ್ರಸಾರ ಮತ್ತು ಜಾಹಿರಾತುಗಳ ಹೆಚ್ಚಳದಲ್ಲಿ ಅನುಸರಿಸುವುದು ಇನ್ನೊಂದು ವಿಷಾದದ ಸಂಗತಿ. ಅವು ಕೂಡ ಮಸಾಲಾ ಸುದ್ದಿ, ಚಿತ್ರಗಳ ಬೆನ್ನಿಗೆ ಬೀಳುವಂತಾಯಿತು. ಈ ವಾಣಿಜ್ಯೀಕೃತ ಮನರಂಜನೆಯ ಚಾನೆಲ್‌ಗಳ ಎದುರಲ್ಲಿ ಕೂರುವವರಿಗೆ ಗಾಳ ಹಾಕಿ ಓದುವಂತೆ ಮಾಡುವದು ಸಾಮಾನ್ಯ ಕೆಲಸವಂತೂ ಅಲ್ಲ. ಹಾಗೆಯೇ ಸಾಹಿತ್ಯಕ ಕೃತಿಗಳನ್ನು, ಇತರೆ ಕೃತಿಗಳನ್ನು ಓದುವವರ ಪ್ರಮಾಣವೂ ಇಂದು ಕಡಿಮೆ. ಆದರೂ ಮಾರುಕಟ್ಟೆಗೆ ಬರುತ್ತಿರುವ ಗ್ರಂಥಗಳ ಪ್ರಮಾಣವೂ ಕಡಿಮೆಯಿಲ್ಲ. ಈಗೀಗ ಕೆಲವು ಪ್ರಕಾಶಕರು ಈ ಕಾಲಮಾನದ ಅಗತ್ಯ ಎನ್ನುವಂತೆ ತಮ್ಮ ಪುಸ್ತಕಗಳಿಗೆ ಜಾಕೆಟ್, ಕೋಟು ತೊಡಿಸುವ ಪರಿಪಾಠವನ್ನು ಅನುಸರಿಸು ತ್ತಿದ್ದಾರೆ. ಇದರಿಂದ ತೀರಾ ಅಪರೂಪದ ಸಮೂಹ ಎನ್ನುವಂತೆ ಉಳಿದಿರುವ ಓದುಗರ ಮೇಲೆ ಅದರ ದರದ ಹೊರೆ ಬೀಳುತ್ತದೆ. ಅಷ್ಟಕ್ಕೂ ಪುಸ್ತಕ ಜಾಕೇಟೇ ಅದರ ಮೌಲ್ಯ ಮತ್ತು ಪ್ರಮಾಣವಂತೂ ಅಲ್ಲ. ನಿರಕ್ಷರಿಗಳು ಬಿಡಿ, ಸಾಕ್ಷರರಲ್ಲೂ ಓದುಗರ ಪ್ರಮಾಣ ಕಡಿಮೆಯಾಗುತ್ತಿದೆ. ಬಹುತೇಕ ಸಮಯವನ್ನು ಈ ವಾಣಿಜ್ಯೀಕೃತ ಮನರಂಜನೆಗಳೇ ಲೂಟಿ ಮಾಡುತ್ತಿವೆ. ರಾಜಕೀಯ ಸುದ್ದಿಗಳಿಗೆ ಹೆಚ್ಚು ಅವಕಾಶ ಕೊಡದಂತೆ, ಅವರ ಜಾಹಿರಾತುಗಳನ್ನು ಒಟ್ಟಾರೆ ನಿಷೇಧಿಸುವಂಥ ಕ್ರಮದ ಅಗತ್ಯವಿದೆ. ಹೆಚ್ಚೆಚ್ಚು ಜಾಹಿರಾತು ನೀಡುವ ರಾಜಕೀಯ ಪಕ್ಷಗಳೇ ಗೆಲ್ಲುವ ಸ್ಥಿತಿಯನ್ನು ಈ ಬಗೆಯ ಚಾನೆಲ್‌ಗಳು ನಿರ್ಮಾಣ ಮಾಡುವ ಸಾಧ್ಯತೆಯಿದೆ.




ನಾನೂ ಆಮ್ ಆದ್ಮಿಯಿಂದಲೇ
ಈ ಮಟ್ಟಕ್ಕೆ ಬೆಳೆದವನು...,
ತೆಗೊಳ್ಳಿ ಎಲೆಕ್ಷನ್ ಖರ್ಚಿಗೆ...!

ತೀರಾ ಮುಂದುವರಿದ ರಾಷ್ಟ್ರ, ಅಲ್ಲಿ ಜನರಿಗೆ ಸಮಯವೇ ಸಿಗುವುದಿಲ್ಲ, ರಸ್ತೆಯ ಮೇಲೆ ಜನರೇ ಕಾಣಸಿಗುವುದಿಲ್ಲ ಎನ್ನುವ ಅಮೇರಿಕೆಯಂಥಾ ರಾಷ್ಟ್ರಗಳಲ್ಲಿಯೇ ಒಬ್ಬ ವೀಕ್ಷಕ ಸರಾಸರಿ ದಿನಕ್ಕೆ ಎಂಟು ಘಂಟೆಗಳ ಕಾಲ ಈ ಟಿ.ವಿ. ಮುಂದೆ ಕುಳಿತುಕೊಳ್ಳುವುದರಿಂದ ಸಮಯವನ್ನು ಕಳೆಯುವುದಿದೆ. ನಮ್ಮಲ್ಲಿ ಆ ಪ್ರಮಾಣ ಇನ್ನೂ ಹೆಚ್ಚು ಎನ್ನಬಹುದೇನೋ! ಕಾರ್ಯಕ್ರಮಕ್ಕೆ ಜನವೇ ಬರುವುದಿಲ್ಲ ಎನ್ನುವ ಮಾತು ಕೇವಲ ನಮ್ಮಲ್ಲಿ ಮಾತ್ರವಲ್ಲ, ಅಲ್ಲಿಯೂ ಇದೆ. ಬಹುತೇಕರು ಟಿ.ವಿ. ಮುಂದೆ ಕುಕ್ಕರುಬಡಿಯುವದರಿಂದ ಪಾರ್ಕುಗಳು, ಸಂಗೀತ ಕಚೇರಿಗಳು, ಸಭೆ ಸಮಾರಂಭಗಳು, ರಸ್ತೆಗಳು ಬಿಕೋ ಅನ್ನುವುದು ಸಹಜ. ಮಕ್ಕಳ ಆಟಗಳ ಪರಂಪರೆಯನ್ನೇ ಈ ವಾಣಿಜ್ಯೀಕೃತ ಮನರಂಜನೆ ಮತ್ತು ವಿಡಿಯೋ ಗೇಮ್ಸ್ ಕೊಂದು ಹಾಕಿವೆ. ಇಲ್ಲಿ ಮಕ್ಕಳು ಈ ಬಗೆಯ ಚಾನೆಲ್‌ಗಳಿಗೆ ತೀರಾ ಪ್ರಮುಖವಾದ ಗ್ರಾಹಕರು ಮತ್ತು ವಾರಸುದಾರರು. ಸಾವಿರಾರು ಘಂಟೆಗಳನ್ನು ಅವರು ಟಿ.ವಿ. ಮುಂದೆ ಕಳೆಯುವುದರಿಂದಾಗಿ ತಮ್ಮ ಬಾಲ್ಯಾವಸ್ಥೆಯನ್ನೇ ಅವರು ಮರೆತು ನೇರವಾಗಿ ಕೊಳ್ಳುಬಾಕ ಸಂಸ್ಕೃತಿಯ ಭಾಗವಾಗಿಬಿಡುತ್ತಾರೆ. ಈ ಬಗೆಯ ಭರಾಟೆ ಕುಟುಂಬ ಮತ್ತು ನೆರೆಹೊರೆಯಂಥಾ ಸಮೂಹ ಜೀವನವನ್ನು ಬಾಧಿಸಿಲ್ಲ ಎಂದು ಭಾವಿಸುವ ಅವಶ್ಯಕತೆಯಿಲ್ಲ. ಈ ವಾಣಿಜ್ಯೀಕೃತ ಮನರಂಜನೆಯ ಹಾವಳಿಗೆ ತುತ್ತಾದ ಅತ್ಯಂತ ಪ್ರಧಾನ ಸಾಮಾಜಿಕ ಸಮೂಹವೆಂದರೆ ಕುಟುಂಬ. ಈ ಬಗೆಯ ಕಾರ್ಯಕ್ರಮಗಳಿಂದಾಗಿ ಅಲ್ಲಿ ಸದಸ್ಯರ ನಡುವೆ ಮುಂಚೆ ಏರ್ಪಡುತ್ತಿದ್ದ ಸಾಮಾಜಿಕ ಅಂತರಕ್ರಿಯೆ ಈಗ ಸಾಧ್ಯವಾಗುತ್ತಿಲ್ಲ. ಪಾಲಕರ ಮತ್ತು ಮಕ್ಕಳ ನಡುವಿನ ಮಾತುಕತೆ ಕಡಿಮೆಯಾಗಿದೆ. ಇಬ್ಬರೂ ಕಾರ್ಯಕ್ರಮವನ್ನು ಹೆಚ್ಚೆಚ್ಚು ನೋಡುವಲ್ಲಿ ಬ್ಯುಸಿ. ಮನೆ ಎನ್ನುವುದು ಈಗ ಕೇವಲ ತಿಂದುಂಡು ಮಲಗುವ ಲಾಜಿಂಗ್ ಆಗಿ ಪರಿವರ್ತಿತವಾಗುತ್ತಿದೆ. ಫಾಸ್ಟ್ ಫುಡ್ ಸಂಸ್ಕೃತಿ ತೀವ್ರವಾಗಿ ಬೆಳೆಯುತ್ತಿರುವುದರಿಂದ ಆ ನಿಗದಿತ ಕಾರ್ಯಕ್ರಮದ ಅವಧಿಯೊಳಗಾಗಿ ಅಡುಗೆ ಮಾಡಿ ಮುಗಿಸುವ, ಇಲ್ಲವೇ ಹೊಟೇಲಿಂದ ತಂದು ತಿನ್ನುವ ಪರಿಪಾಠ ಆರಂಭವಾಗಿದೆ. ಗಂಡ–ಹೆಂಡತಿ ಮತ್ತು ಕುಟುಂಬದೊಳಗಿನ ಸಂಬಂಧಗಳನ್ನು ಅಲ್ಲಿ ಬರುವ ಯಾವುದೋ ಒಂದು ಸುದೀರ್ಘವಾದ ಧಾರಾವಾಹಿ ನಿರ್ಧರಿಸುತ್ತದೆ. ಈ ನಡುವೆ ಕುಟುಂಬದಲ್ಲಿರುವ ಹಿರಿಯರ ಗೋಳು ಇನ್ನೊಂದು ಬಗೆಯದು. ಹೆಚ್ಚು ಹೊತ್ತು ನಿರ್ವಾತವಾಗಿ ಮನರಂಜನೆಯನ್ನು ನೋಡಬೇಕೆನ್ನುವವರಿಗೆ ಈ ಹಿರಿಯರು ಹೊರೆಯಾಗತೊಡಗಿದ್ದಾರೆ. ಯುವಕರಂತೂ ಗ್ಲ್ಯಾಮರಸ್ ಲೋಕವೇ ನಿಜ, ಮಿಕ್ಕ ಯಾವುದರಲ್ಲಿಯೂ ಮಜವಿಲ್ಲ ಎನ್ನುವಂತೆ ಬದುಕನ್ನು ರೂಪಿಸಿಕೊಳ್ಳುತ್ತಿದ್ದಾರೆ. ಸೀದಾ ಸಾದಾ ಓಡಿಸಬೇಕಾದ ಬೈಕನ್ನೇ ಅವರು ಹಾವಿನ ಹೊರಳಾಟವಾಗಿಸುತ್ತಾರೆ. ಅವರೂ ಕೂಡ ತಮ್ಮ ಎಲ್ಲ ಸಮಸ್ಯೆಗಳೂ ಈ ಚಾನೆಲ್‌ಗಳಲ್ಲಿ ತೋರಿಸುವ ಜಾಹಿರಾತುಗಳಷ್ಟೇ ವೇಗವಾಗಿ ದಿಢೀರನೇ ಮಂಗಮಾಯವಾಗಬೇಕು ಎಂದು ಬಯಸುತ್ತಾರೆ. ನಿಜವಾದ ಬದುಕಿನ ಕಲ್ಪನೆಯೇ ಅವರಿಗೆ ಇಲ್ಲದಂತಾಗುತ್ತಿದೆ.

ಸಾಯಂಕಾಲದ ಮನರಂಜನೆಯ ಸಮಯವನ್ನು ಈ ಬಗೆಯ ವಾಣಿಜ್ಯೀಕೃತ ಮನರಂಜನೆಗಳೇ ಗುತ್ತಿಗೆ ಹಿಡಿದುಬಿಡುತ್ತವೆ. ಜೊತೆಗೆ ಜಾಹಿರಾತುಗಳ ಕಿರಿಕಿರಿ ಬೇರೆ. ಇದನ್ನು ತಪ್ಪಿಸುವ ನಿಟ್ಟಿನಲ್ಲಿ ಗುಣಮಟ್ಟದ ಸೇವೆ ಎನ್ನುವ ಕಾಯ್ದೆಯನ್ನು ಜಾರಿಗೊಳಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಯಾವುದೇ ಒಂದು ದೂರದರ್ಶನದ ಕಾರ್ಯಕ್ರಮದ ನಡುವೆ ಅಂದರೆ ಒಂದು ಘಂಟೆಯ ಅವಧಿಯಲ್ಲಿ ಕೇವಲ ೧೨ ನಿಮಿಷ ಮಾತ್ರ ಜಾಹಿರಾತುಗಳನ್ನು ಪ್ರಸರಣ ಮಾಡಬೇಕೆಂಬ ನಿಯಮವಿದೆ. ಅದರಲ್ಲೂ ಕಾರ್ಯಕ್ರಮದ ನಡುವೆ ಅವುಗಳನ್ನು ತೂರಬಾರದು. ವೀಕ್ಷಕರಿಗೆ ಗುಣಮಟ್ಟದ ಮನರಂಜನೆಯನ್ನು ನೀಡಬೇಕು ಎನ್ನುವ ಷರತ್ತೂ ಇದೆ. ಈ ಬಗೆಯ ಕಟ್ಟಳೆಗಳ ಬಗ್ಗೆ ವಾಣಿಜ್ಯೀಕೃತ ಮನರಂಜನೆಯ ಮಂದಿಗೆ ಸಮಾಧಾನವಾಗದೆ ಮತ್ತೆ ಕ್ಯಾತೆ ತೆಗೆದಿರುವುದಿದೆ. ಇಡೀ ಹೊತ್ತು ಹಣವನ್ನು ಕೊಳ್ಳೆಹೊಡೆಯಲು ಅವಕಾಶ ಕೊಡಬೇಕು ಎನ್ನುವಂತೆ ಅವರು ಬಯಸುವುದಿದೆ. ಹೀಗೆ ಈ ವಾಣಿಜ್ಯೀಕೃತ ಮನರಂಜನೆ ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ಬಾಧಿಸುತ್ತಿರುವ ಈ ಶತಮಾನದ ಬಹುದೊಡ್ಡ ಶಾಪವಾಗಿ ಪರಿಣಮಿಸುತ್ತಿದೆ. ಆ ಬಗ್ಗೆ ಚರ್ಚೆ, ಚಿಂತನೆಗಳು ಕೂಡ ನಮ್ಮಲ್ಲಿ ನಿರೀಕ್ಷಿತ ಮಟ್ಟದಲ್ಲಿಲ್ಲ ಎನ್ನುವುದು ತೀರಾ ವಿಪರ್ಯಾಸ ಮತ್ತು ವಿಷಾದನೀಯ.

**ಡಾ॥ ಎಸ್. ಬಿ. ಜೋಗುರ**
ಎನ್. ಬಿ. ಜ್ಯೋತಿ ಹಿರಿಯ ಪ್ರಾಥಮಿಕ ಶಾಲೆ ಹತ್ತಿರ, ಜಲದರ್ಶಿನಿ
ಧಾರವಾಡ – ೫೮೦ ೦೦೩

# ಊರ್ಧ್ವಮುಖಿ ಮನುಷ್ಯಚಿತ್ತದ ಚಿತ್ರಗಾರ ಚಿತ್ತಾಲ

## (೧೯೨೮–೨೦೧೪)



**ವಿಜ್ಞಾನದ ವಿದ್ಯಾರ್ಥಿಯಾಗಿ, ರಾಸಾಯನಿಕ ತಂತ್ರವಿಜ್ಞಾನದ ಪೊಲಿಮರ್ ಟೆಕ್ನಾಲಜಿಯಲ್ಲಿ ವಿಶೇಷ ತಜ್ಞರು. ಮುಂಬಯಿ ವಿಶ್ವವಿದ್ಯಾಲಯದ ಪ್ಲಾಸ್ಟಿಕ್ ತಂತ್ರಜ್ಞಾನದ ಬಿ.ಎಸ್‌ಸಿ. ಪದವಿಯಲ್ಲಿ ಮೊದಲನೇ ರ‍್ಯಾಂಕ್, ಚಿನ್ನದ ಪದಕಗಳನ್ನು ಪಡೆದಿದ್ದು, ಮುಂದೆ ತಮ್ಮ ೪೪ನೆಯ ವಯಸ್ಸಿನಲ್ಲಿ ಅಮೇರಿಕೆಯ ಸ್ಟೀವನ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಿಂದ ಸ್ನಾತಕೋತ್ತರ ಪದವಿ** [M.E. (Chem)] **ಪಡೆದದ್ದು ಅವರ ವಿದ್ಯಾರ್ಥಿಜೀವನದ ಮುಖ್ಯ ಗಳಿಗೆಗಳು. ಬೇಕೆಲ್ಯಾಬ್ ಹೈಲಮ್ ಲಿಮಿಟೆಡ್ ಕಂಪನಿಯಲ್ಲಿ ಹಲವು ವರ್ಷ ಮಾರ್ಕೆಟಿಂಗ್ ವಿಭಾಗದ ಜನರಲ್ ಮ್ಯಾನೇಜರ್ ಆಗಿ, ಮುಂದೆ ಅದೇ ಕಂಪನಿಯ ಎಕ್ಸಿಕ್ಯುಟಿವ್ ಡೈರೆಕ್ಟರರೂ ಆಗಿ ೧೯೮೫ರಲ್ಲಿ ನಿವೃತ್ತಿ ಹೊಂದಿದರು.**

ಆಧುನಿಕ ಕನ್ನಡ ಸಾಹಿತ್ಯದ ಆಳ–ಅಗಲಗಳನ್ನು ವಿಸ್ತರಿಸಿದ ಮಹತ್ವಪೂರ್ಣ ಬರಹಗಾರರಲ್ಲಿ ಅನನ್ಯರು ಯಶವಂತ ಚಿತ್ತಾಲ. ಗಾಢವಾದ ಮಾನವೀಯ ಅಂತಃಕರಣ ಅವರ ಬರಹದ ಮೂಲದ್ರವ್ಯ. ಅನುಭವವನ್ನು ಕಲೆಯನ್ನಾಗಿಸುವಲ್ಲಿಯೇ ಅವರ ಸರ್ವವಿಧವಾದ ಕಳಕಳಿ. ಬದುಕನ್ನು ಹೇಗೋ ಹಾಗೆ ಬರಹವನ್ನೂ ತುಂಬ ಮುಖ್ಯವೆಂದು ಪ್ರಾಮಾಣಿಕತೆ ಮತ್ತು ಆತ್ಮವಿಮರ್ಶೆ ಅವುಗಳ ಎರಡು ಕಣ್ಣುಗಳೆಂದೂ ನಂಬಿ, ಬದುಕಿ, ಬರೆದು ಇತ್ತೀಚೆಗಷ್ಟೇ ಬದುಕಿನ ಕೊನೆಪುಟ ತಿರುವಿದ ಅಸಾಮಾನ್ಯ ಕತೆಗಾರ. ನಿರಂತರವಾದ ಗತಿಶೀಲತೆ, ಅಸಾಮಾನ್ಯ ಚೈತನ್ಯಪೂರ್ಣತೆ ಅವರ ಸಣ್ಣಕತೆಗಳನ್ನೂ ಕಾದಂಬರಿಗಳನ್ನೂ ಮತ್ತೆ ಮತ್ತೆ ಓದುವಂತೆ ಮಾಡಿರುತ್ತವೆ.

ಅರವತ್ತರ ದಶಕದಲ್ಲಿ 'ಕಸ್ತೂರಿ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದ 'ಪಯಣ' ಕತೆಯನ್ನು ಓದಿದಾಗ ವಿಚಿತ್ರಭೀತಿ ಮತ್ತು ವಿಸ್ಮಯವಾದದ್ದು ಇಂದಿಗೂ ಮನದಿಂದ ಹೋಗಿಲ್ಲ. ಯಾರಾದರೂ ಸಾವನ್ನು ಕಾದು ಕೂತು, ಭೇಟಿಮಾಡಲು ಬರುವ ವ್ಯಕ್ತಿಗಾಗಿ ನಿರೀಕ್ಷಿಸುವಂತೆ ನಿರೀಕ್ಷಿಸುತ್ತಾ ಸ್ವಾಗತಿಸಿ ಬರಮಾಡಿಕೊಂಡುಬಿಡಬಹುದು ಎಂಬ ಆ ಮೃತ್ಯುಪ್ರಜ್ಞೆ ನಿಜಕ್ಕೂ ಆಗ ದಿಕ್ಕುಗೆಡಿಸಿತ್ತು. ಹೀಗೆ ಯಶವಂತ ಚಿತ್ತಾಲರೆಂಬ ಕತೆಗಾರರು ನನ್ನ ಮನದೊಳಕ್ಕೆ ಬರುವಾಗಲೇ ಅವರು 'ಸಂದರ್ಶನ'ವೆಂಬ ಕಥಾಸಂಕಲನದಿಂದ (೧೯೫೭) ಪ್ರಸಿದ್ಧರಾಗಿದ್ದರು. ಇದು ನಮ್ಮ ಪ್ರೀತಿಯ ಚಿತ್ತಾಲರು ಬರೆದಿದ್ದಪ್ಪ ಎಂದು ಆತ್ಮೀಯತೆಯಿಂದ ಅವರ ಕಥೆ, ಕಾದಂಬರಿಗಳನ್ನು ಓದತೊಡಗಿದ್ದು ತುಂಬ ಮುಂದೆ, ಎಪ್ಪತ್ತು–ಎಂಬತ್ತರ ದಶಕಗಳಲ್ಲಿ. ಆ ವೇಳೆಗೆ ಅವರು ನವ್ಯ ಪಂಥದ ಅಪರೂಪದ ಕತೆಗಾರರಾಗಿ ಸ್ಥಾಪಿತರಾಗಿದ್ದರು. ಅವರ ಕಥಾ ಸಂಕಲನಗಳಾದ 'ಆಬೋಲೀನ' (೧೯೬೦), 'ಆಟ' (೧೯೬೯), 'ಆಯ್ದಕತೆಗಳು' (೧೯೭೬), 'ಕತೆಯಾದಳು ಹುಡುಗಿ' (೧೯೮೦), 'ಬೇನ್ಯಾ' (೧೯೮೩)ಗಳಲ್ಲದೆ 'ಮೂರು ದಾರಿಗಳು' (೧೯೬೪) ಹಾಗೂ 'ಶಿಕಾರಿ' (೧೯೭೦) ಕಾದಂಬರಿಗಳಿಂದ ಸಾಕಷ್ಟು ವಿಮರ್ಶಕರ ಮಾನ್ಯತೆ ಅವರಿಗೆ ಸಿಕ್ಕಿತ್ತು.

ದೂರದ ಮುಂಬಯಿಯಲ್ಲಿಯೇ ಉಳಿದು, ಕನ್ನಡಿಗರಿಗೆ ಸಾಹಿತ್ಯದ ಮೂಲಕ ಮಾತ್ರ ತುಂಬ ಮುಖ್ಯರಾಗಿ ಬೆಳೆದ ಚಿತ್ತಾಲರು ಕನ್ನಡ ಸಾಹಿತ್ಯಕ್ಷೇತ್ರದ ಪ್ರಶಸ್ತಿ, ಬಹುಮಾನಗಳ ಕೊಳಕು ರಾಜಕೀಯದಿಂದಲೂ ದೂರವುಳಿದದ್ದರಿಂದ ಅವರು ಪರಿಶುದ್ಧ ಬರಹಗಾರಿಕೆಗಾಗಿಯೇ ಸ್ಮರಣೀಯರಾಗಿದ್ದಾರೆ. ಚಿತ್ತಾಲರ ಸಮಕಾಲೀನ ವಿಮರ್ಶಕ ವರ್ಗವು ಅವರ ಸಾಹಿತ್ಯ ಎಲ್ಲೆಲ್ಲಿ, ಎಷ್ಟೆಷ್ಟು, ಹೇಗೆ 'ನವ್ಯ' ಎಂದು ಪತ್ತೆ ಮಾಡಿ ದಾಖಲು ಮಾಡಿರುತ್ತದೆ. ಆಮೇಲಿನ ಬಂಡಾಯ ಸಾಹಿತ್ಯ ವಿಮರ್ಶೆಯು ಚಿತ್ತಾಲರ ಬರಹದ ವ್ಯಕ್ತಿಕೇಂದ್ರಿತತೆ, ಸಾಮಾಜಿಕ ಪ್ರಜ್ಞೆಯ ಬಗ್ಗೆ ಅನಾಸಕ್ತಿ, ಸಮಾಜದ ಪರಿವರ್ತನೆಯ ಬಗೆಗೆ ನಿರ್ಲಿಪ್ತ ಭಾವಗಳನ್ನು ಕುರಿತು ಆಕ್ಷೇಪಿಸಿರುವುದುಂಟು.

'ಪ್ರಗತಿಪರತೆ' ಎಂಬುದು ಚಿತ್ತಾಲರಿಗೆ ಸ್ವ–ಘೋಷಣೆಯ ತಾತ್ವಿಕ ನಿಲುವಾಗಿರಬೇಕು ಎಂದು ಎಲ್ಲೂ ಕಂಡಿಲ್ಲ. ತಾತ್ವಿಕತೆಯೆಂಬುದು ಕೃತಿಯ ಶಿಲ್ಪದ ಒಳಗಿನಿಂದಲೇ ಹೊಮ್ಮಬೇಕಲ್ಲದೆ ಹೊರಗಿನ ಆವರಣವಲ್ಲ – ಎಂಬುದನ್ನು ಅವರ ಬರಹಗಳು ಹೇಳುತ್ತವೆ. 'ಸಾಹಿತ್ಯದ ಸಪ್ತಧಾತುಗಳು' ಪ್ರಬಂಧದಲ್ಲಿ

**ಡಾ॥ ಬಿ. ಎನ್. ಸುಮಿತ್ರಾಬಾಯಿ**

ಅವರು ಏಳು ಸೂತ್ರವಾಕ್ಯಗಳ ಮೂಲಕ ತಮ್ಮ ದೃಷ್ಟಿಕೋನವನ್ನು ಸ್ಪಷ್ಟವಾಗಿ ಹೇಳಿರುತ್ತಾರೆ :

* ಸಾಹಿತ್ಯದ ಸದಾಕಾಲದ ವಿಷಯ ಮನುಷ್ಯ.
* ಸಾಹಿತ್ಯ ಮನುಷ್ಯನನ್ನು, ಅವನ ಮೂಲಕ ಬದುಕನ್ನು, ಭಾಷೆಯಲ್ಲಿ ಅರಿಯುವ ಅನನ್ಯ ಮಾಧ್ಯಮವಾಗಿದೆ.
* ಬದುಕಲ್ಪಟ್ಟ ಬದುಕು, ಅನುಭವಿಸಲ್ಪಟ್ಟ ಬದುಕು ಸಾಹಿತ್ಯದ ಮೂಲದ್ರವ್ಯವಾಗಿದೆ.
* ಮಾನವ ಜೀವನವನ್ನು ಅರಿಯಲು ಅವಶ್ಯವಿದ್ದ ಚೌಕಟ್ಟುಗಳಲ್ಲಿ ಸಮಾಜವೂ ಒಂದು ಚೌಕಟ್ಟು, ಆದರೆ ಏಕಮಾತ್ರ ಚೌಕಟ್ಟು ಅಲ್ಲ.
* ಅನುಭವ ಸಾಹಿತ್ಯದ ವಸ್ತುವಲ್ಲ; ಅದರ ದರ್ಶನೇಂದ್ರಿಯ.
* ಅನುಭವ, ಪ್ರಜ್ಞೆಯ ಎದುರು ಹಾಜರಿ ಕೊಡುವುದು ಒಂದು ಜೀವಂತ ಪ್ರತಿಮೆಯ ಮೂಲಕ.
* ಕತೆ-ಕಾದಂಬರಿಗಳಂಥ ಸಾಹಿತ್ಯ ಪ್ರಕಾರಗಳಿಗೆ ಇರುವ ನಿರ್ದಿಷ್ಟ ಹಾಗೂ ವಿಶಿಷ್ಟ ಆಕಾರಕ್ಕೂ ಅವು ಗ್ರಹಿಸಲು ಹೊರಟ ವಾಸ್ತವ ಸತ್ಯಕ್ಕೂ ಅನ್ಯೋನ್ಯ ಸಂಬಂಧವಿದೆ.




ಚಿತ್ತಾಲರು ಸಾಹಿತ್ಯಕ್ಕೆ, ಮನುಷ್ಯ ಜೀವನಕ್ಕೆ ಹಾಗೂ ಆ ಜೀವನದ ಭಾವನಾತ್ಮಕ ಅನುಭವದ ಪ್ರತಿಮಾಕರಣಕ್ಕೆ ಎಷ್ಟು ಮಹತ್ವ ನೀಡಿದ್ದರೆನ್ನುವುದನ್ನು ಈ ಏಳು ಸೂತ್ರವಾಕ್ಯಗಳೇ ಸೂಚಿಸುತ್ತವೆ. ಅಪ್ಪಟ ಮಾನವನಿಷ್ಠೆಯೇ ಅವರ ಬರಹದ ಜೀವಾಳ. ಹಾಗಿರುವಾಗ ಸಮಾಜದೊಳಗಿನ ನ್ಯಾಯಾನ್ಯಾಯಗಳನ್ನು ಜೀವಪೋಷಕ-ವಿನಾಶಕ ಲಕ್ಷಣಗಳನ್ನು ಸಂವೇದನಾಶೀಲವಾಗಿ ಗ್ರಹಿಸುವುದಕ್ಕೇ ಅವರ ಆದ್ಯತೆ. ಅದರಲ್ಲೂ ನಿರಂತರ ಅಂತರ್ಮುಖಿಯಾಗಿ ಮನುಷ್ಯರೆಲ್ಲರಲ್ಲೂ ಅವರ ಮಾನಸಿಕಲೋಕದ ಸೂಕ್ಷ್ಮಾತಿಸೂಕ್ಷ್ಮತೆಗಳನ್ನು ಗ್ರಹಿಸುವ ತೀವ್ರ ಆಸಕ್ತಿಯುಳ್ಳ ಲೇಖಕರಾದ ಚಿತ್ತಾಲರ ಬರಹದ 'ಪ್ರಗತಿಶೀಲತೆ' ಎಲ್ಲೂ ವಾಚ್ಯದ, ಮುಖವಾಡದ ರೂಪ ತಳೆಯುವುದು ಅಸಾಧ್ಯ. ಅದೇ ರೀತಿ ಅಭಿವ್ಯಕ್ತಿಯೆಲ್ಲ ಕಲಾತ್ಮಕವೇ ಆಗಿರಬೇಕೆನ್ನುವ ಅವರ ಛಲವನ್ನು ಬೂರ್ಜ್ವಾ ಅಂತರಂಗದ ಹಪಾಹಪಿಗಳ ಕುಸುರಿ ಕಲೆಗಾರಿಕೆ ಎಂಬಂತೆ ನೋಡಲು ಸಾಧ್ಯವಿಲ್ಲ.

ಚಿತ್ತಾಲರು ೧೯೨೮ರ ಆಗಸ್ಟ್ ೩ರಂದು ವಿಠೋಬಾ ಮತ್ತು ರುಕ್ಮಿಣೀ ದಂಪತಿಯ ಮಗನಾಗಿ ಜನಿಸಿದ್ದು ಉತ್ತರಕನ್ನಡ ಜಿಲ್ಲೆಯ ಹನೇಹಳ್ಳಿಯಲ್ಲಿ. ಅವರ ಅಣ್ಣ, ಕವಿ ಗಂಗಾಧರ ಚಿತ್ತಾಲರ ಗಾಢ ಪ್ರಭಾವ ಚಿತ್ತಾಲರ ಬರಹದ ಮೇಲಾಗಿತ್ತು. ಹನೇಹಳ್ಳಿ, ಕುಮಟಾ, ಮುಂಬಯಿಗಳಲ್ಲಿ ಅವರ ಶಿಕ್ಷಣದ ವಿವಿಧ ಘಟ್ಟಗಳನ್ನು ಯಶಸ್ವಿಯಾಗಿ ದಾಟಿದ್ದ ಚಿತ್ತಾಲರು ಸಾಹಿತ್ಯದ ವಿದ್ಯಾರ್ಥಿಯೂ ಅಲ್ಲ, ಸಾಹಿತ್ಯದ ಶಿಕ್ಷಕರೂ ಅಲ್ಲ. ಚಿತ್ತಾಲರು ಸಣ್ಣ ಕತೆಗಳನ್ನು ಬರೆಯಲಾರಂಭಿಸಿದಾಗ ಸ್ವಕ್ಷೇತ್ರವಾದ ವಿಜ್ಞಾನದಿಂದ ಗಳಿಸಿಕೊಂಡ ಸತ್ಯಾನ್ವೇಷಣೆಯ ವೈಜ್ಞಾನಿಕ ಮನೋಧರ್ಮ, ಮಾರ್ಕ್ಸ್‌ವಾದ, ಎಂ. ಎನ್. ರಾಯ್ ಅವರ ನವಮಾನವತಾವಾದಗಳ ಪರಿಚಯ ದಟ್ಟವಾಗಿ ಅವರನ್ನು ಪ್ರಭಾವಿಸಿದ್ದ ಕಾಲವಾಗಿತ್ತು. ಮನುಷ್ಯರ ವಿವೇಕ, ಅಂತಃಕರಣಗಳನ್ನು ಅವರ ಕಾರ್ಯಗಳ ನೈತಿಕ ಪ್ರಮಾಣಗಳೆಂದು ಬಗೆಯುವ ನಂಬುಗೆ ಆ ಮೊದಲ ಘಟ್ಟದ ಸಣ್ಣಕತೆಗಳಿಗೆ ಮುಖ್ಯ ಜೀವನ ದೃಷ್ಟಿಯನ್ನು ಒದಗಿಸಿತು. ೧೯೪೮-೬೩ರ ಅವಧಿಯಲ್ಲಿ ವೈಯಕ್ತಿಕ ಬದುಕಿನ ಅನೇಕ ದುರಂತಗಳು ಅವರನ್ನು ಆಘಾತಿಸಿದ್ದವು. ನೀತಿ-ಅನೀತಿ, ಪುಣ್ಯ-ಪಾಪಗಳೆಂಬ ಸರಳ ಧ್ರುವಗಳನ್ನು ಮೀರಿದ ಬದುಕಿನ ಸಂಕೀರ್ಣ ಆಯಾಮಗಳ ಅರ್ಥ ಶೋಧನೆಗೆ ಮಾನವತಾವಾದವಷ್ಟೇ ಸಾಲದೆಂದು ಕಂಡುಕೊಂಡ ಆ ಕಾಲದಲ್ಲೇ ಬದುಕಿನ ಪ್ರತಿಯೊಂದು ಕ್ರಿಯೆಯ ಹಿಂದೆ ಸಾವಿನ ಅರಿವು ಬಲವಾದ ಚಾಲನಶಕ್ತಿಯಾಗಿರುವ ಬಗೆಗಳನ್ನು ಅವರು ಶೋಧಿಸಲಾರಂಭಿಸಿದರು. ದೈವಶ್ರದ್ಧೆ, ಧರ್ಮಶ್ರದ್ಧೆ, ಪುರಾಣ ಸಂಕೇತಗಳು ಮಾನವರ ಅಂತರಂಗವನ್ನು ಆಳುವ ಬಗೆಗಳನ್ನು ಕಾರ್ಲ್. ಜಿ. ಯುಂಗ್, ಎರಿಕ್ ಫ್ರಾಮ್‌ರ ಬರಹ, ವಿಚಾರಗಳು ಕಾಣಿಸಿಕೊಟ್ಟವಾದರೆ, ನಿಷ್ಕಾರಣವಾದ ಯಾತನೆ, ಹಿಂಸೆ, ಶಿಕ್ಷೆಗೆ ಮಾನವ ಜೀವಿಗಳು ತುತ್ತಾಗುವುದಕ್ಕೆ ಮೂಲ ವ್ಯವಸ್ಥೆಯ ನಿರಂಕುಶಾಧಿಕಾರ ಕಾರಣವಾಗುವ ಬಗೆ ಹಾಗೂ ಅದರಲ್ಲಿ ಸಿಕ್ಕ ಮನುಜರು ನಡೆಸುವ ಅಸ್ತಿತ್ವದ ನಿಜದ ಹುಡುಕಾಟಗಳ ಲೋಕ ಕರ್ಕೆಗಾರ್ಡ್ ಮತ್ತು ಫ್ರಾಂಜ್ ಕಾಫ್ಕಾರಿಂದ ಚಿತ್ತಾಲರ ಬರಹದಲ್ಲೂ ಪ್ರವೇಶಿಸಿತು. ಚಿತ್ತಾಲರ ಬರಹದ ಮನೆಯ ತುಂಬ ಜನಗಳೇ ಜನಗಳು. ಹಳ್ಳಿಗರು, ನಗರಿಗರು, ಮಹಾನಗರಗಳ ಕೇರಿಕೊಂಪೆ, ಚಾಲು, ಅಪಾರ್ಟ್‌ಮೆಂಟ್‌ಗಳ ಸಾಮಾನ್ಯಾತಿ ಸಾಮಾನ್ಯರು, ಕೆಲವೊಮ್ಮೆ ಹನೇಹಳ್ಳಿಯಿಂದಲೇ ಬಂದುಬಿಡುವ ಮಧ್ಯಮ ವರ್ಗೀಯರು, ಬೃಹತ್ ಉದ್ಯಮದಾರರು, ಕೈಗಾರಿಕಾರಂಗದ ಟೈಕೂನುಗಳು, ಅಬ್ಬಬ್ಬ ! ಸಾಮಾನ್ಯವಾಗಿ ತುಂಬ ಅಂತರ್ಮುಖಿ ಆದ ಅತ್ಯಂತ ಕಡಿಮೆ ಆದರೆ ಹೃದಯದಿಂದ ಪ್ರಾಮಾಣಿಕವಾಗಿ ಮಾತ್ರ ಮಾತನಾಡುವ ಈ ಯಶವಂತರೆಂಬ ಚಿತ್ತದ ಆಲದ ಮರದಲ್ಲಿ ಇಷ್ಟೆಲ್ಲ ಬಗೆಬಗೆ ಜನರ ಸಂತೆಯೇ ಎಂದು ಸದಾ ಬೆರಗೇ ಬೆರಗು. ಎಷ್ಟು ಬಗೆಯ ಪಾತ್ರಗಳೋ ಅಷ್ಟೇ ಅಲ್ಲ ದೃಷ್ಟಿಕೋನಗಳು. ಆ ಒಬ್ಬೊಬ್ಬರಲ್ಲೂ ನೂರು ಸೀಳುಗಳುಳ್ಳ ಮನಗಳಿಂದ ಹುಟ್ಟುವ ನೂರು ಬಗೆಯ ಭಾವದರ್ಶನಗಳು, ಅನುಭವಕ್ಕೆ ಕೆತ್ತಿಟ್ಟ ಅನಂತ ಮುಖಗಳು.

ಈ ಬರಹಗಾರನೋ ಅವರೆಲ್ಲರ ಅಪ್ಪ ಮಾತ್ರವಲ್ಲ ಅಮ್ಮನೂ ಹೌದು. ಅಷ್ಟು ಜನರ ಅಷ್ಟು ಬಗೆಯ ಬದುಕಿನ ಅನುಭವಗಳೆಲ್ಲಕ್ಕೂ ಆಡುಂಬೊಲ. ಆದರೆ ಯಾರೊಬ್ಬರ, ಯಾವುದೊಂದು ಮುಖದ ಮಗ್ಗುಲಿಗೆ ವಾಲುವವನಲ್ಲ. ಎಲ್ಲರಿಗೆ, ಎಲ್ಲದಕ್ಕೂ ಅಕ್ಕರೆಯ ಕೈತುತ್ತು ಹಾಕುವವ. ಓದುಗಳಾಗಿ ನನಗಂತೂ ಈ ಅನನ್ಯರೀತಿಯ ಜೀವನಪ್ರೇಮವನ್ನು ಎಷ್ಟೆಷ್ಟು ವೈವಿಧ್ಯಮಯ ಭಾಷೆಯಲ್ಲಿ, ಎಷ್ಟೊಂದು ತಂತ್ರದ ತಂತುಗಳಲ್ಲಿ ಸೊಗಸಾಗಿಯೇ ಕಟ್ಟಬೇಕೆನ್ನುವ ಕಟ್ಟಡಿಗ ಚಿತ್ತಾಲರು ಸದಾ ಹಿಗ್ಗನ್ನೇ ಒದಗಿಸಿರುವ ಲೇಖಕ. ಆದರೆ ಈ ಹಿಗ್ಗು ಎಂಬುದು ಕಲೆಯ ನೆಲೆಯ ಸೊಬಗು ಕೊಡುವಂಥದೇ ಹೊರತು ಚಿತ್ತಾಲರ ಸಾಹಿತ್ಯದೊಳಗೆ ಹಿಗ್ಗು ತುಂಬಿದೆ ಎಂಬುದಲ್ಲ. ವಾಸ್ತವದಲ್ಲಿ ಅನೇಕ ವಿಮರ್ಶಕ ದಿಗ್ಗಜಗಳು ಬರೆದು ಬರೆದು ಚರ್ಚಿಸಿರುವುದು ಚಿತ್ತಾಲರ ಕಥಾಸಾಹಿತ್ಯದಲ್ಲಿ ಹಾಗೂ ಕಾದಂಬರಿಗಳಲ್ಲಿರುವ ವ್ಯಕ್ತಿಗಳು ಬದುಕಿನ ಸಂಕೀರ್ಣ ಒತ್ತಡಗಳಲ್ಲಿ ಸಿಕ್ಕು ಅನುಭವಿಸುವ ನೋವಿನ ಅನೇಕ ಪ್ರಕಾರಗಳನ್ನು ಕುರಿತೇ ಆಗಿರುತ್ತದೆ. ಪ್ರತ್ಯೇಕತೆ, ಅಸ್ವಸ್ಥತೆ, ಪರಕೀಯತೆ, ಮುಗ್ಧತೆ, ಲೈಂಗಿಕ ಅತೃಪ್ತಿ, ಕ್ರೌರ್ಯ, ಬೇಸರ, ಕೀಳರಿಮೆ, ಹೊಯ್ದಾಟ, ಅನಿಶ್ಚಿತತೆಗಳ ಮಹಾನ್ ಸಮುದ್ರ.

ಚಿತ್ತಾಲರ ಕಥನ ಸಾಹಿತ್ಯದಲ್ಲಿ ಮೈಪಡೆವ ಜನಗಳ ಅವರವರ ಯಾತನೆಗಳು, ಸಂಕಟಗಳು, ಮೂಗುಬ್ಬಸಗಳಿಂದಾಗಿ ಅವರವರ ಬದುಕು ಅವರದೇ ಕೇಂದ್ರವೃತ್ತಾಂತವಾಗಿಬಿಡುತ್ತವೆ. ಥಟ್ಟನೆ ಸಾಮಾನ್ಯತೆಯ ಊದಾ ಬಣ್ಣ ಕರಗಿ ಉಜ್ವಲ ಕೆಂಪು, ಬಿಳಿ, ಹಳದಿ, ಕಪ್ಪು, ಹಸುರು, ನೀಲಿಗಳ ಕಥಕ್ಕಳಿ ವರ್ಣಗಳಲ್ಲಿ ಅವರೊಳಗಿನ ರಾಗದ್ವೇಷಗಳು ಜಿಡ್ಡು ಜಾಪತ್ತುಗಳು ಧೀಂಗುಡಲು ಆರಂಭಿಸುತ್ತವೆ. ಆದರೆ ಇವೆಲ್ಲದರ ಮೂಲಕ ಆ ವ್ಯಕ್ತಿಗಳು ಬೆಳೆಯುತ್ತಾ ಗಟ್ಟಿಯಾಗುತ್ತಾ ಧೀರತೆಯನ್ನು ತಳೆಯುವ ಬಗೆಯಲ್ಲಿಯೇ ಚಿತ್ತಾಲರ ಜೀವನದರ್ಶನದ ಹೆಗ್ಗಳಿಕೆಯಿದೆ.

ವಿಜ್ಞಾನದ ವಿದ್ಯಾರ್ಥಿಯಾಗಿ, ರಾಸಾಯನಿಕ ತಂತ್ರವಿಜ್ಞಾನದ ಪೊಲಿಮರ್ ಟೆಕ್ನಾಲಜಿಯಲ್ಲಿ ವಿಶೇಷ ತಜ್ಞರು. ಮುಂಬಯಿ ವಿಶ್ವವಿದ್ಯಾಲಯದ ಪ್ಲಾಸ್ಟಿಕ್ ತಂತ್ರಜ್ಞಾನದ ಬಿ.ಎಸ್‌ಸಿ. ಪದವಿಯಲ್ಲಿ ಮೊದಲನೇ ರ್‍ಯಾಂಕ್, ಚಿನ್ನದ ಪದಕಗಳನ್ನು ಪಡೆದಿದ್ದು, ಮುಂದೆ ತಮ್ಮ ೪೪ನೆಯ ವಯಸ್ಸಿನಲ್ಲಿ ಅಮೇರಿಕೆಯ ಸ್ಟೀವನ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಿಂದ ಸ್ನಾತಕೋತ್ತರ ಪದವಿ [M.E. (Chem)] ಪಡೆದದ್ದು ಅವರ ವಿದ್ಯಾರ್ಥಿಜೀವನದ ಮುಖ್ಯ ಗಳಿಗೆಗಳು. ಬೇಕೆಲ್ಯಾಬ್ ಹೈಲಮ್ ಲಿಮಿಟೆಡ್ ಕಂಪನಿಯಲ್ಲಿ ಹಲವು ವರ್ಷ ಮಾರ್ಕೆಟಿಂಗ್ ವಿಭಾಗದ ಜನರಲ್ ಮ್ಯಾನೇಜರ್ ಆಗಿ, ಮುಂದೆ ಅದೇ ಕಂಪನಿಯ ಎಕ್ಸಿಕ್ಯುಟಿವ್ ಡೈರೆಕ್ಟರರೂ ಆಗಿ ೧೯೮೫ರಲ್ಲಿ ನಿವೃತ್ತಿ ಹೊಂದಿದರು.

ಚಿತ್ತಾಲರ ಒಟ್ಟಾರೆ ಕಥನ ಸಾಹಿತ್ಯವನ್ನು ಹೆಣ್ಣಿನ ಕಣ್ಣನೆಲೆಯಿಂದ ನೋಡುವ

ಯತ್ನ ಮಾಡಿದರೆ, ಒಂದು ವಿಸ್ಮಯ ನಮಗೆ ಎದುರಾಗುತ್ತದೆ. ಶಾಂತಿನಾಥ ದೇಸಾಯಿಯವರಂತೆ ಉಚ್ಚಸ್ತರದ ಬೌದ್ಧಿಕ ಸಾಮರ್ಥ್ಯ, ಸ್ವತಂತ್ರ ಮನೋಧರ್ಮ, ವ್ಯಕ್ತಿಪ್ರಜ್ಞೆ ಗಳಿಸಿದ ಸ್ತ್ರೀಯರು ಇಲ್ಲಿ ಕಾಣಲಾರರು. ಅನಂತಮೂರ್ತಿಯವರ ಸಾಹಿತ್ಯದ ದೇಹವೇ ಆತ್ಮವೂ ಆಗಬಲ್ಲಂಥ ಪ್ರಾಕೃತಿಕ ಐಂದ್ರೀಯಕ ಹೆಣ್ಣುಗಳನ್ನೂ ಕಾಣಲಾರೆವು. ಲಂಕೇಶರು ಕಟ್ಟಿಕೊಡುವ, ಲೇಖಕರನ್ನೂ ಸ್ವತಃ ಪ್ರಶ್ನೆಗೀಡು ಮಾಡಿಬಿಡುವ ಪ್ರಶ್ನಿಸಬಲ್ಲ ಚುರುಕುತನ, ಜೀವಂತಿಕೆ, ಗತಿಶೀಲತೆಯುಳ್ಳ ಸ್ತ್ರೀಸಂಕುಲವೂ ಚಿತ್ತಾಲರಲ್ಲಿಲ್ಲ. ಆದರೆ ಹಳ್ಳಿಯಲ್ಲಿ ಸೂಳೆಯಾಗಿ ಬದುಕುವ, ಸಮಾಜದ ಮಾನದಂಡವನ್ನು ಪೂರ್ತಿ ಒಪ್ಪಿರುವ ಉತ್ತುಮಿ, ಮನವೇಲನ ದುಷ್ಟತನಕ್ಕೆ ಬಲಿಯಾಗುವ ಅತಿಮುಗ್ಧೆಯಾದ ಹದಿಹರೆಯದ 'ಆಬೋಲೀನ', ಹುಲ್ಲಿನ ಹೊರೆ ಹೊರುವ ಬೊಮ್ಮಿ ಮತ್ತು ಪಾರ್ವತಮ್ಮ, ಮತ್ತೆ ಮತ್ತೆ ಬರುವ ನಿರ್ಮಲೆಯರು, ಜಾನಕಿಯರ ಬಹುರೂಪಗಳು, ಸ್ತ್ರೀತ್ವದ ಪ್ರಕೃತಿಯ ಸಂಕೇತವಾದ ದೇವಿಯರು, ಇವರಿಗೆ ಪ್ರತಿಯಾಗಿ ಎದ್ದುತೋರುವ ಅಮ್ಮಂದಿರು ಇತ್ಯಾದಿ. ಇವರೆಲ್ಲರು ಆಯಾ ಕಥೆಗಳ ವಸ್ತು, ಘಟನೆಗಳ ಚೌಕಟ್ಟಿನೊಳಗೆ ಬದುಕಿನ ಅರ್ಥ ಹುಡುಕುವ ಪ್ರಜ್ಞೆಯೊಂದರ ಮೂಲಕ ಪ್ರಕಟಗೊಳ್ಳುತ್ತಾರೆ. ಇವರುಗಳ ಮೂಲಕ ಮಾನವ ಜಗತ್ತಿಗೊಂದು ಮಾದರಿಯೊಂದನ್ನು ಹುಡುಕಿಕೊಳ್ಳಲು ಹೊರಟರೆ, ಯುವ ಜನಾಂಗದ ಪ್ರತಿನಿಧಿಯಾಗಿ, ನಾಶವಾಗುತ್ತಿರುವ ಸಂಸ್ಕೃತಿಯ ಕೊಳಕುತನವನ್ನು ಪ್ರತಿಭಟಿಸುವ ವಿಶಿಷ್ಟ ಸ್ವಾಭಿಮಾನದ ಪ್ರತೀಕವಾಗಿ ಕಾಣುವ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆಯನ್ನು ಉಲ್ಲೇಖಿಸಬಹುದು.

ಹೆಣ್ಣು-ಗಂಡಿನ ಸಂಬಂಧವನ್ನು, ಅದರಲ್ಲೂ ಹೆಣ್ಣು ನಿಸರ್ಗ ಸಹಜವಾಗಿ ಮುಂದುವರಿದ ಸಂಬಂಧಗಳನ್ನು ಸಮಾಜ ಮಡಿವಂತಿಕೆ, ಸಂಕುಚಿತ ಬುದ್ಧಿ, ಕೊಳಕು ಚಿಂತನೆ, ಮಾತು-ವರ್ತನೆಗಳ ಕ್ರೌರ್ಯಗಳಿಂದಲೇ ಬಹುಮಟ್ಟಿಗೆ ಅಸೂಯೆಯಿಂದ ನೋಡುತ್ತದೆ. ಆದರೆ ಚಿತ್ತಾಲರ ಹಲವು ಕತೆಗಳಲ್ಲಿ ಹೆಣ್ಣುಗಳು ಶುದ್ಧ ಹೆಣ್ಣಿನ ದೃಷ್ಟಿಯಿಂದ, ಜೀವನದ ಕುತೂಹಲದಿಂದ ನೋಡಲು ಯತ್ನಿಸುತ್ತಾರೆ. ನಿರ್ಮಲೆಯದೂ ಅದೇ ಉದ್ದೇಶ. ಆದರೆ ಓದಲಿಕ್ಕೆಂದು ಹಳ್ಳಿಬಿಟ್ಟು ಪಟ್ಟಣದ ನೆಂಟರ ಮನೆಯಲ್ಲಿದ್ದ ನಿರ್ಮಲೆಯೆಂಬ ಹುಡುಗಿಯೊಬ್ಬಳು ಫೋಟೋ ಸ್ಟುಡಿಯೋದ ಅಪಾಪೋಲಿ ರಂಗಪ್ಪನೆಂಬುವನ ಜೊತೆ ಒಂದು ಸಂಜೆ ಇದ್ದಳು ಎಂಬ ಸುದ್ದಿಗೆ ಕಾಲು, ಬಾಲ, ತಲೆ, ರೆಕ್ಕೆ – ಪುಕ್ಕಗಳೆಲ್ಲ ಬೆಳೆದು ಕೊನೆಗೆ ನಿರ್ಮಲೆಯ ಆತ್ಮಹತ್ಯೆಯಲ್ಲಿ ಅದು ಪರ್ಯವಸಾನ ಹೊಂದುತ್ತದೆ. ಆದರೆ ಅಪವಾದಕ್ಕೆ ಹೆದರುವ ಹುಡುಗಿ ಅವಳಲ್ಲ. ರಂಗಪ್ಪನ ಜೊತೆ ನಿಜವಾಗಿ ನಡೆದದ್ದೇನು ಎಂಬುದನ್ನು ಕೇಳಿ ತಿಳಿಯಲು ಸಿದ್ಧರೇ ಇಲ್ಲದ ತಂದೆ ವಿಶ್ವನಾಥ ಶಾನುಭಾಗರ ವಂಶಪ್ರತಿಷ್ಠೆಯ ಪೊಳ್ಳು ಹೆಮ್ಮೆ, ತಾಯಿಯ ಸಂಕುಚಿತ ಬುದ್ಧಿಯ ಭೀರುತನ, ಇವಳ ಕೈಹಿಡಿಯುವ ಮೂಲಕ ಇವಳು 'ಏನೇ ತಪ್ಪು ಮಾಡಿದ್ದರೂ' ತಾನು ಕ್ಷಮಿಸಿ, ಕೈಹಿಡಿದು ಉದ್ಧರಿಸಬಯಸುವ ವಾಸುದೇವನ 'ಅಬಲೋದ್ಧಾರಕ' ತನದ ಕುರುಡು ಗರ್ವ, ಸುತ್ತಲಿನ ಸಮಾಜದವರ ಎಲುಬಿಲ್ಲದೆ ಹೊರಳುವ ನಾಲಿಗೆಗಳಿಗೆ ಹೇಸಿಗೆ ಹುಟ್ಟಿ ನಿರ್ಮಲೆ, ಒಮ್ಮಿಂದೊಮ್ಮೆ ರಂಗಪ್ಪನ ಜೊತೆ ಓಡಿಹೋಗುವುದು, ಆತುರದ ಕಾಟಾಚಾರದ ಮದುವೆಗಿಂತ ವಾಸಿ, ಅದರಿಂದ ಈ ಎಲ್ಲರಿಗೂ ಬುದ್ಧಿಕಲಿಸಬಹುದೆಂಬ ವಿಚಿತ್ರ ಆವೇಶದಲ್ಲಿ ಪಲಾಯನದ ಯತ್ನವನ್ನೂ ಮಾಡುತ್ತಾಳೆ. ಅದು ವಿಫಲವಾದಾಗ ಇಡೀ ಜಗತ್ತಿಗೇ ಹೇಸಿ ಪ್ರಾಣಕಳೆದುಕೊಳ್ಳುತ್ತಾಳೆ. ಈ ತೀವ್ರರೂಪದ ಭಾವನಾತ್ಮಕ ಆಯ್ಕೆ ಸುಲಭದ್ದಲ್ಲ. ವ್ಯವಸ್ಥೆ ಅವಳಿಗೆ ಬದುಕಗೊಡಲಿಲ್ಲ. ಹೇಗೆ ಎಂಬುದನ್ನು ಕಥೆ ಧ್ವನಿಸುತ್ತದೆ. ಹಾಗಾಗಿ ನಿರ್ಮಲೆಯ ಆತ್ಮಹತ್ಯೆಗೆ ಪ್ರತಿಭಟನೆಯ ಲಕ್ಷಣ ಉಂಟಾಗುತ್ತದೆ. ಇಂಥ ಕತೆಯೊಳಗಿನ ಆಯ್ಕೆ ಬದುಕಿಗೆ ಲೇಖಕರು ನೀಡುವ ಪರಿಹಾರವೆಂದು ಭ್ರಮಿಸಿ, ಇದನ್ನು ಪ್ರತಿಗಾಮಿತನ ಎಂದು ಸರಳವಾಗಿ ತೀರ್ಮಾನಿಸುವುದಕ್ಕೆ ಆಸ್ಪದವಿಲ್ಲದ ಹಾಗೆ ವ್ಯವಸ್ಥೆಯ ಅಮಾನವೀಯ ಮುಖಗಳನ್ನು ಕಥೆ ತೆರೆದಿಟ್ಟಿರುತ್ತದೆ. ನಿರ್ಮಲೆ ಸಮಸ್ತ ಸಮಾಜದ ನೈತಿಕ ಮಾತ್ರವಲ್ಲ. ಮಾನವೀಯತೆಯ ಅವನತಿಯನ್ನೇ ಪ್ರಶ್ನಿಸುವ ಏಕೈಕ ಕೇಂದ್ರಪ್ರಜ್ಞೆಯಾಗಿಬಿಡುವ ಈ ಬಗೆ ನವ್ಯರಲ್ಲಿ ಅಪರೂಪದ್ದಾಗಿದೆ.

ಸಮಸ್ಯೆಗಳನ್ನೇ ರಂಜಕವಾಗಿಸುವುದು, ಶೋಕಿಲಾಲರ ಹುಸಿ ಪ್ರಗತಿಪರತೆಯನ್ನು ಢಾಳಾಗಿ ಚಿತ್ರಿಸುವುದೆಲ್ಲ ಸಾಧ್ಯವಿದ್ದರೂ ಸಮಸ್ಯೆಯನ್ನು ಬಿಡಿಸುವುದಕ್ಕೇ ಅತ್ಯಂತ ನಿಷ್ಠರಾಗುವ ಕತೆಗಾರರು ಚಿತ್ತಾಲರು. ಆದ ಕಾರಣವೇ ಅವರ ರಚನೆಗಳು ಓದುಗರನ್ನು ಸಂತೃಪ್ತಿಗೆ ಒಯ್ದುಬಿಡದೆ ಯೋಚಿಸುವಂತೆ, ಬಿಡದೆ ಕಾಡುವಂತೆ ಸಂಯೋಜನೆಗೊಂಡಿರುತ್ತವೆ. ಚಿತ್ತಾಲರ ರಚನೆಗಳ ಕಲಾನಿಷ್ಠೆ, ಅವುಗಳಲ್ಲಿ ಬಹು ಆಯಾಮ, ಸಂಕೀರ್ಣ ಧ್ವನಿಗಳನ್ನು ಸೃಷ್ಟಿಸುವುದರಿಂದ ಓದಿದಷ್ಟೂ ಅರ್ಥ ಸಾಂದ್ರತೆ ನಮ್ಮೆದುರು ತೆರೆದುಕೊಳ್ಳಲಾರಂಭಿಸುತ್ತವೆ. ಇಲ್ಲೇ ಚಿತ್ತಾಲರ ಅನನ್ಯತೆಯಿದೆ.

ಬಹುಬಗೆಯ ಚರ್ಚೆ, ವಿಮರ್ಶೆಗಳಿಗೆ ಒಳಗಾಗಿರುವ ಚಿತ್ತಾಲರ 'ಶಿಕಾರಿ' ಕೂಡ ಮುಗ್ಧ, ನಿರಪರಾಧಿ ವ್ಯಕ್ತಿಯನ್ನು ವ್ಯವಸ್ಥೆ ಹೇಗೆ ತನ್ನ ಕಪಿಮುಷ್ಟಿಯಲ್ಲಿ ಸಿಲುಕಿಸಿ ನಿರ್ಜೀವವಾಗುವಂತಹ ಕ್ರೌರ್ಯವನ್ನು ಮೆರೆಸುತ್ತದೆ ಎಂಬುದನ್ನು ಪ್ರಖರವಾಗಿ ಚಿತ್ರಿಸುತ್ತದೆ. 'ಶಿಕಾರಿ'ಯ ಕೇಂದ್ರವ್ಯಕ್ತಿ ನಾಗಪ್ಪನಿಗೆ ಎದುರಾಗುವ ಸಮಸ್ಯೆಗಳು ದಿನನಿತ್ಯದ ಸಾಮಾನ್ಯ ಬದುಕಿನಲ್ಲಿ ಯಾರಿಗೂ ಒದಗಬಹುದಾದಂಥವು. ಹೊರಗಿನ ಯಾವುದೋ ಮೂಲದಿಂದಾಗಲೀ ಪ್ರಭಾವದಿಂದಾಗಲೀ ಹೇರಿಕೊಂಡು ಬರದೆ, ಆ ವ್ಯಕ್ತಿಯ ಬದುಕಿನ ಸಂದರ್ಭದಲ್ಲಿಯೇ ಹುಟ್ಟಿರುವ ಸಮಸ್ಯೆಗಳಿವು. 'ಶಿಕಾರಿ' ಕಾದಂಬರಿಯು ಕಾಫ್ಕಾನ 'ದ ಕ್ಯಾಸಲ್' ಕಾದಂಬರಿಯ ಜೊತೆ ಹೊಂದಿರುವ ಸಾದೃಶ್ಯ ಬಹುವಾಗಿ ಚರ್ಚಿತವೇ. ಆದರೆ ಕಾಫ್ಕಾನ ಪ್ರಭಾವದಿಂದ ಬಿಡಿಸಿಕೊಳ್ಳಲು ಚಿತ್ತಾಲರು ಶ್ರಮಿಸಿರುವ ಬಗೆಯೂ ಅಷ್ಟೇ ಗಮನಾರ್ಹವಾದದ್ದು.

ವ್ಯಕ್ತಿ-ವ್ಯಕ್ತಿಗಳ ಸಂಬಂಧಗಳ ಮಿತಿಗಳು, ಮೋಸ, ತೋರಿಕೆ, ವಿರೋಧಾಭಾಸಗಳನ್ನು ಮನದೊಳಗೇ ವಿಶ್ಲೇಷಿಸಿಕೊಳ್ಳುವ, ಆ ಮೂಲಕ ತನ್ನ ಅರಿವನ್ನು ಬೆಳೆಸಿಕೊಳ್ಳುವ ನಾಗಪ್ಪನ ಈ ಮಾನವೀಯ ಸಾಧ್ಯತೆಯಲ್ಲಿಯೇ ಅವನು ಕಾಫ್ಕಾನ ಕಾದಂಬರಿಯ ನಾಯಕನಿಗಿಂತ ಭಿನ್ನವಾಗುತ್ತಾನೆ. ಬದುಕಿನಲ್ಲಿ ಭದ್ರವೆಂದು ತಾನು ಆತುಕೊಂಡಿದ್ದ ಎಲ್ಲ ಸಂಬಂಧಗಳು ದ್ವೇಷಾಸೂಯೆಗಳಿಂದ, ಕ್ರೂರತನದಿಂದ, ವಂಚಕತನದಿಂದ ಮಲಿನವಾಗಿರುವುದು ನಾಗಪ್ಪನ ಅರಿವಿಗೆ ಬರುವುದು 'ಶಿಕಾರಿ'ಯ ಒಂದು ಆಯಾಮ. ಆದರೆ ಕ್ರೌರ್ಯದ ದರ್ಶನವು ಅವನನ್ನು ದಿಕ್ಕುಗೆಟ್ಟು ಕೂಡುವಂತೆ ಮಾಡದೆ, ಬದುಕಿನಬಗ್ಗೆಯೇ ಹೆಚ್ಚು ಜವಾಬ್ದಾರಿಯುತನನ್ನಾಗಿ ಮಾಡುವುದರಲ್ಲಿಯೇ ಚಿತ್ತಾಲರ ಬರಹದ ಪ್ರತಿಭೆಯ ವೈಶಿಷ್ಟ್ಯವಿದೆ. ಬದುಕನ್ನು ಅತ್ಯಂತ ಕ್ಲಿಷ್ಟಕರ ಸ್ಥಿತಿಯಲ್ಲೂ ಎದುರಿಸುವುದು, ಬದುಕಿಗೇ ಬದ್ಧವಾಗಬೇಕಾದದ್ದು ಜೀವನದ ಮುಂದುವರಿಕೆಗೆ ಅಗತ್ಯವೆಂದು ಹೇಳುವ ಈ ದರ್ಶನವೇ ತುಂಬ ಮುಖ್ಯವಾಗುತ್ತದೆ. ನಿರ್ಮಲೆಯ ಸಾವು ನಾಗಪ್ಪನ ಜೀವನಪರತೆಯ ನಡುವೆ ಚಿತ್ತಾಲರ ಅಭಿವ್ಯಕ್ತಿ ಮಾತ್ರವೇ ಅಲ್ಲ ಅವರ ಜೀವನ ದರ್ಶನದ ಸಮಸ್ತ ಕಲಾತ್ಮಕತೆಯ ಸಾರ್ಥಕ ಪ್ರಗತಿಯಲ್ಲೂ ಹುದುಗಿರುತ್ತದೆ.

'ಪುರುಷೋತ್ತಮ' ಚಿತ್ತಾಲರ ಕಲೆ – ಜೀವನ ದರ್ಶನಗಳು ಉತ್ತುಂಗವನ್ನು ತಲುಪಿರುವ ಮಹತ್ವಪೂರ್ಣ ಕಾದಂಬರಿ. ಹನೇಹಳ್ಳಿಯ ಕುಟುಂಬದೊಳಗಿನ ದಾಯಾದಿ ಮಾತ್ಸರ್ಯದ ಅನರ್ಥ ಪರಿಣಾಮಗಳು ಕಾದಂಬರಿಯ ಒಂದು ಕಥೆಯ ಎಳೆಯಾದರೆ, ಮುಂಬಯಿಯಲ್ಲಿ ಒಂದು ಮನೆಗಾಗಿ ನಡೆವ ಹೋರಾಟ, ಷಡ್ಯಂತ್ರ, ಜೀವಹಿಂಸೆ, ವಿನಾಶದ್ದು ಇನ್ನೊಂದು ಎಳೆ. ಇವೆರಡೂ ಬೆಸೆದುಕೊಳ್ಳುತ್ತ ನಾಲ್ಕು ತಲೆಮಾರುಗಳ, ಮುಕ್ಕಾಲು ಶತಮಾನದ ಚರಿತ್ರೆಯನ್ನು ಬಿತ್ತರಿಸುತ್ತವೆ. ಕಥೆಯ ಪಾತ್ರಗಳ ಸಂಖ್ಯೆಯೂ ಹೆಚ್ಚು ಹಾಗೂ ನಿರೂಪಣೆ ಕಾಲಾನುಕ್ರಮವನ್ನು ಅನುಸರಿಸಿದ್ದಲ್ಲ. ಹನೇಹಳ್ಳಿ – ಮುಂಬಯಿ, ಭೂತ – ವರ್ತಮಾನ – ಭವಿಷ್ಯತ್ – ಹೀಗೆ ಕಾಲ, ದೇಶಗಳು ಒಂದರಿಂದ ಮತ್ತೊಂದಕ್ಕೆ ಜಿಗಿಯುವ ರೀತಿಯಲ್ಲಿ ಸಂಯೋಜಿತವಾಗಿರುತ್ತವೆ. ಸಹಜವಾಗಿಯೇ ತುಂಬ ಸಂಕೀರ್ಣ ಕಥಾಶಿಲ್ಪ ಈ ಕಾದಂಬರಿಯದು. ಆದ್ದರಿಂದ ಅನೇಕ ಸಂಗತಿಗಳು ರಹಸ್ಯಾತ್ಮಕವಾಗಿಯೇ ಉಳಿದುಹೋಗುವಂತೆ ತೋರಿದರೂ ವರ್ತಮಾನದ ತನ್ನ ಜಾಗದಿಂದ ಹನೇಹಳ್ಳಿಯ ತನ್ನ ಮುತ್ತಜ್ಜನ ಡಯರಿಯೊಳಗೆ ದಾಖಲಾಗಿರುವ ಭೂತಕಾಲಕ್ಕೆ ಸರಿಯುವ ಪುರುಷೋತ್ತಮ ಅಂತಿಮವಾಗಿ ಈ ಭೂತದೊಂದಿಗಿನ ತನ್ನ ತಿಕ್ಕಾಟದ ವ್ಯರ್ಥತೆಯನ್ನು ಅರಿವಿಗೆ ತಂದುಕೊಳ್ಳುತ್ತಾನೆ.

ಪುರುಷೋತ್ತಮನ ಬದುಕಿಗೆ 'ವೈಯಕ್ತಿಕ – ಸಾರ್ವಜನಿಕ'ವೆಂಬ ಬಹುದೊಡ್ಡ ಆಧುನಿಕ ಬದುಕಿನ ವಿಭಜನೆಗಳಿಲ್ಲ. ಅಂಥ ವಿಭಕ್ತ ಗಡಿರೇಖೆಗಳ ಅಭಾವವೇ ಕಾದಂಬರಿಯ ಎರಡನೆಯ ಭಾಗದ ವೈಶಿಷ್ಟ್ಯವಾಗಿದೆ. ತನ್ನ ಮನೆಯನ್ನು ಮಾರಲು ಬಯಸದ ಪುರುಷೋತ್ತಮನ ನಿರ್ಧಾರ ಭಾವನಾತ್ಮಕ. ಆದರೆ ನಾಥಾನಿ ಮತ್ತು ಅವನ ಮಿತ್ರರು, ಬಿಲ್ಡರ್‌ಗಳಾಗಿ ಹೊಂದಿರುವ ಷಾಪಿಂಗ್ ಕಾಂಪ್ಲೆಕ್ಸ್ ಕನಸಿಗೆ ಅದು ಅಡ್ಡಿ. ಲಾಭಗಾರಿಕೆಯ ಸ್ವಹಿತಾಸಕ್ತಿಗಳು ಅನೇಕ ತಂತ್ರ ಕುತಂತ್ರಗಳನ್ನು ಸೃಷ್ಟಿಸುತ್ತವೆ. ತೀವ್ರವೇಗದ ಗತಿಯಲ್ಲಿ ಸಾಗುವ ಘಟನಾವಳಿಗಳಲ್ಲಿ ಮಂಜುನಾಥ್,

ರಾಮ್‌ನಾಥಾನಿಗಳ ಭಯಂಕರ ಹತ್ಯೆ, ಸೀತೆ ೨೪ನೆಯ ಮಹಡಿಯಿಂದ ಬಿದ್ದು ಸಾಯುವುದು, ವೆಂಕಟದಾಸನಿಗೆ ಆಘಾತದಿಂದಾಗಿ ಮಾತಿನಶಕ್ತಿ ಕಳೆದು ಹೋಗುವುದು ಮುಂತಾದ ಸಾಮೂಹಿಕ ದುರಂತಗಳ ದೊಡ್ಡ ಸರಣಿ ಸಿದ್ಧವಾಗುತ್ತದೆ. ವ್ಯಕ್ತಿ–ಸಮಷ್ಟಿಗಳ ಹಿತಾಸಕ್ತಿಗಳು ಗೋಜಲು ಗೋಜಲುಗೊಳ್ಳುತ್ತವೆ. ಒಬ್ಬರ ಕನಸುಗಳು ಮತ್ತೊಬ್ಬರದನ್ನು ಘಾತಿಸುತ್ತವೆ. ಪ್ರತಿಯೊಬ್ಬನೂ ಬೇರೆಯವರನ್ನು ತನ್ನಿಚ್ಛೆಗೆ ಅಧೀನಗೊಳಿಸಲು ಶಕ್ತಿಯನ್ನು ಬಳಸುತ್ತಾನೆ. ಈಗಿನ ನಾಗರಿಕ ಬದುಕಿನ ಅತ್ಯಂತ ಸಂಕೀರ್ಣವಾದ ಸಂಘರ್ಷವನ್ನು ಚಿತ್ತಾಲರು ಇಲ್ಲಿ ವ್ಯಾಖ್ಯಾನಿಸುತ್ತಿರುವ ರೀತಿ ತುಂಬ ಮನನೀಯವಾದದ್ದು.

'ಪುರುಷೋತ್ತಮ' ಕಾದಂಬರಿಯ ಹರಹೂ, ಅದರ ಮಹತ್ವಾಕಾಂಕ್ಷೆಯೂ ಚಿತ್ತಾಲರ ಹಿಂದಿನ ಕಾದಂಬರಿಗಳಿಗಿಂತ ವಿಶಾಲವಾಗಿರುವುದಷ್ಟೇ ಅಲ್ಲ; ಹಿಂದಿನ ಕೃತಿಗಳಲ್ಲಿ ಅವರು ಸ್ಪರ್ಶಿಸಿರದಂಥ ಸಾಮಾಜಿಕ ಆಯಾಮಗಳನ್ನು ಗ್ರಹಿಸಲು ಹಿಡಿದುಕೊಟ್ಟು ವಿಶ್ಲೇಷಿಸಲು ಅವರು ಇಲ್ಲಿ ಯತ್ನಿಸಿರುತ್ತಾರೆ. ಉದಾಹರಣೆಗೆ ರಿಯಲ್ ಎಸ್ಟೇಟ್ ಜಗತ್ತು, ಬಿಲ್ಡರ್‌ಗಳ ಭೂಹಗರಣಗಳಿಗಾಗಿ ನಡೆಯುವ ರಾಜಕೀಯ ಷಡ್ಯಂತ್ರಗಳ ಆಳ ಅಗಲಗಳು, ಅದರ ಕ್ರೌರ್ಯದ ಅಗಾಧತೆಯು ನಮಗೆ ಗ್ರಹಿಕೆಗೆ ದಕ್ಕುವಷ್ಟು ಸಹಜವಾಗಿರುವಂತೆ ತೋರುವುದಿಲ್ಲ. ಸಾರ್ವಜನಿಕ ಬದುಕಿನ ಈ ಅವ್ಯವಸ್ಥಿತತೆ, ಘರ್ಷಣೆ, ಒಳಸುಳಿಗಳ ಚಿತ್ರಣ ಹಾಗೂ ಪುರುಷೋತ್ತಮ ತನ್ನ ಪೂರ್ವಿಕರ ಬಗ್ಗೆ ನಡೆಸುವ ಹುಡುಕಾಟ ಇವೆಲ್ಲವೂ ಕಾದಂಬರಿಗೆ ರಹಸ್ಯಮಯತೆ, ಸಸ್ಪೆನ್ಸ್, ಪುರಾಣದ ನಿಗೂಢತೆಗಳ ಛಾಯೆಯನ್ನು ತಂದುಕೊಡುತ್ತವೆ. ಆದರೆ ಇವುಗಳ ಮಗ್ಗುಲಲ್ಲಿ ಪುರುಷೋತ್ತಮನ ಆಂತರಿಕ ಬೆಳವಣಿಗೆ, ನಿರೀಕ್ಷೆಗೂ ಮೀರಿಬಿಡುವ ಅವನ ಪರಿವರ್ತನೆ, ಒಂದು ರೀತಿ ಅಸಹಜತೆ, ಅತೃಪ್ತಿಯ ಭಾವನೆಯನ್ನು ಉಳಿಸುತ್ತವೆ.

ಚಿತ್ತಾಲರ ದೀರ್ಘಕಾಲದ ಬರಹಗಾರಿಕೆಯ ಅನುಭವ ಮತ್ತು ಹೊಸದಕ್ಕಾಗಿ ನಡೆಯುವ ಉತ್ಸಾಹೀ ಪ್ರಯೋಗಶೀಲ ಹುಡುಕಾಟಗಳನ್ನು ಗಮನದಲ್ಲಿಟ್ಟು ಕೊಂಡು ಓದಿದ್ದಾದರೆ 'ಪುರುಷೋತ್ತಮ' ಚಿತ್ತಾಲರ 'ಶಿಕಾರಿ'ಯ ಮಾನಸಿಕ ಖಿನ್ನತೆಯ ಲೋಕಕ್ಕೆ ತುಂಬ ಭಿನ್ನವಾದ ಬಹಿರಂಗ ಬದುಕಿನ, ಅಂತರಂಗದ ತೊಳಲಾಟದ, ಆಚೆಗಿನ ಬದುಕಿನ ರಹಸ್ಯಮಯ ಆಯಾಮಗಳನ್ನೂ ಮುಟ್ಟಬೇಕೆನ್ನುವ ಅಸೀಮ ಕುತೂಹಲದ ಯತ್ನವೆನ್ನಬಹುದು. ಮನುಷ್ಯಚೇತನ ನಿರಂತರವಾಗಿ ಊರ್ಧ್ವಮುಖವಾಗಿ ಚಲಿಸಬೇಕು. ಆ ಚಲನೆಯಲ್ಲೇ ಮಾನವ ಪ್ರಗತಿಯಿದೆ ಎನ್ನುವುದು ಬಹುಶಃ ಈ ಕಾದಂಬರಿ ನೀಡುವ ಜೀವನದರ್ಶನ. ಇದು ಬಹುಶಃ ಚಿತ್ತಾಲರ ಒಟ್ಟಾರೆ ಜೀವನದ ಒಂದು ನೋಟ ಕೂಡ.

**ಡಾ॥ ಬಿ. ಎನ್. ಸುಮಿತ್ರಾಬಾಯಿ**
ಸಂಖ್ಯೆ ೩೫, ೩ನೇ ಅಡ್ಡರಸ್ತೆ, ೮೦ ಅಡಿ ರಸ್ತೆ, ಪ್ರಮೋದ ಲೇಔಟ್
ನಾಯಂಡಹಳ್ಳಿ ರಸ್ತೆ, ಬೆಂಗಳೂರು – ೫೬೦ ೦೩೯

# ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನದಲ್ಲಿ ನೀವೂ ಭಾಗವಹಿಸಿ

ಜನರಲ್ಲಿ ವೈಜ್ಞಾನಿಕ ಮನೋಭಾವವನ್ನು ಮೂಡಿಸುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ವಿಜ್ಞಾನ ತಂತ್ರಜ್ಞಾನದ ಬೆಳವಣಿಗೆಯಿಂದ ದೇಶದಲ್ಲಿ ಮೂಢ ನಂಬಿಕೆಗಳು ತಾನಾಗಿಯೇ ಕಡಿಮೆ ಆಗುತ್ತವೆ ಎಂದು ಕಾದಿದ್ದು ಸುಳ್ಳಾಗಿದೆ.

ಒಂದು ಕಡೆ, ಜನಸಾಮಾನ್ಯರ ಅತೀಂದ್ರಿಯ ನಂಬಿಕೆಗಳನ್ನು 'ಮೂಢನಂಬಿಕೆ' ಎಂದು ಕರೆದು, ಜರೆದು ನಾವು ಜನರನ್ನು ಕಳೆದುಕೊಳ್ಳುತ್ತಿದ್ದೇವೆ; ಇನ್ನೊಂದು ಕಡೆ, ಈ ಮೂಲಕ ಜನರ ಧಾರ್ಮಿಕತೆ, ಅವೈಚಾರಿಕತೆಯ ಶೋಷಕರಿಗೆ ನಾವೇ ನೆರವಾಗುತ್ತಿದ್ದೇವೆ. ಮುಖ್ಯವಾಗಿ ಟಿವಿ ಮಾಧ್ಯಮದಲ್ಲಿ ಜನರ ಮಾನಸಿಕ ಸ್ಥಿರತೆಯನ್ನು ಕೆಡಿಸುವ ಪ್ರಯತ್ನ ಘೋರವಾಗಿ ನಡೆದಿದೆ. ವಿಪರ್ಯಾಸವೆಂದರೆ, ಇದನ್ನು ಕಾನೂನಿನ ಮೂಲಕವೂ ತಡೆಯದಂಥ ಪರಿಸ್ಥಿತಿ ಇದೆ. ಆದ್ದರಿಂದ ವ್ಯಾಪಕ, ಸಕಾರಾತ್ಮಕ ಜನಾಂದೋಲನದ ಮೂಲಕವೇ ಇದನ್ನು ಮುಖಾಮುಖಿ ಎದುರಿಸ ಬೇಕಾಗಿದೆ. ಅದೇ 'ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ'ದ ಉದ್ದೇಶ. ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನವು ಯಾವುದೇ ಧರ್ಮ ಅಥವಾ ಜಾತಿಗೆ ಸಂಬಂಧಿಸಿದ್ದಲ್ಲ; ದೇವರನ್ನು, ಧರ್ಮವನ್ನು ಹೀಗಳೆಯುವುದು ಆಂದೋಲನದ ಉದ್ದೇಶವಲ್ಲ. ಜನರಲ್ಲಿ ವೈಚಾರಿಕತೆಯನ್ನು ಬೆಳೆಸುವುದು ಮೂಲ ಉದ್ದೇಶ.

ಪ್ರಮುಖವಾಗಿ ನವಕರ್ನಾಟಕ ಪ್ರಕಾಶನ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತುಗಳ ಪ್ರೇರಣೆಯಿಂದ ಮೊಳಕೆಯೊಡೆದಿರುವ ಈ ವಿಚಾರವು ಕ್ರಮೇಣ ಸುವ್ಯವಸ್ಥಿತ ಆಂದೋಲನದ ರೂಪವನ್ನು ತಾಳಿದೆ. ಎರಡು ಹಂತಗಳಲ್ಲಿ ಇದನ್ನು ಕಾರ್ಯಚರಣೆಗೆ ತರುವ ಯೋಜನೆಯಿದೆ:

1. ರಾಜ್ಯ ಮಟ್ಟದಲ್ಲಿ, ವಿವಿಧ ವಿಭಾಗಗಳಲ್ಲಿ ವೈಜ್ಞಾನಿಕ ಮನೋವೃತ್ತಿ ಕಾರ್ಯಶಿಬಿರ ಸಂಚಾಲಕರನ್ನು ಸಜ್ಜುಗೊಳಿಸುವ 'ತರಬೇತಿದಾರರ ತರಬೇತಿ ಶಿಬಿರ'ಗಳನ್ನು ನಡೆಸುವುದು; ನಂತರ ಅವರ ಮೂಲಕ ಎಲ್ಲೆಡೆಗಳಲ್ಲಿ,

2. ಒಂದು – ಎರಡು ದಿನಗಳ ಕಾರ್ಯಾನುಭವ, ಪ್ರಯೋಗ ಆಧಾರಿತ ಸಹಭಾಗಿ ಕಾರ್ಯಶಿಬಿರಗಳನ್ನು ನಡೆಸುವುದು.

ಇದಕ್ಕೆ ಪೂರಕವಾಗಿ ಒಂದು ತರಬೇತಿ ಸಂಚಿಯನ್ನು ಉಚಿತವಾಗಿ ಪೂರೈಸಲು ನವಕರ್ನಾಟಕ ಪ್ರಕಾಶನ ಮುಂದೆ ಬಂದಿದೆ. ಈ ಸಂಚಿಯಲ್ಲಿ: ನಾಲ್ಕು ಉಪನ್ಯಾಸಗಳನ್ನು ಒಳಗೊಂಡ ಒಂದು ಪಠ್ಯ, ಅದರಲ್ಲಿರುವ ಉಪನ್ಯಾಸಗಳ ಮಂಡನೆಗಾಗಿ ಪಿಪಿಟಿ ಪ್ರೆಸೆಂಟೇಷನ್‌ಗಳು ಮತ್ತು ಒಂದು ತರಬೇತಿ ಕೈಪಿಡಿ, ಪೂರಕ ವಿಡಿಯೋ ಇರುತ್ತವೆ. ಪಠ್ಯದಲ್ಲಿ, **1. ವೈಜ್ಞಾನಿಕ ಮನೋವೃತ್ತಿ; 2. ಮಹಿಳೆ ಮತ್ತು ವೈಜ್ಞಾನಿಕ ಮನೋವೃತ್ತಿ; 3. ಮಾಧ್ಯಮಗಳಲ್ಲಿ ಅತೀಂದ್ರಿಯ ನಂಬಿಕೆ ಪ್ರದೂಷಣೆ ಮತ್ತು ಕಾನೂನು ಹಾಗೂ 4. ಮೂಢನಂಬಿಕೆ ತಡೆಗಟ್ಟುವ ವಿಚಾರ** – ಈ ಉಪನ್ಯಾಸಗಳಿರುತ್ತವೆ.

## ತಮ್ಮಿಂದ ಬಯಸುವುದೇನು?

ನೀವೂ ಈ ಆಂದೋಲನದಲ್ಲಿ ಕೈಜೋಡಿಸಿ ಎಂಬುದೇ ನಮ್ಮ ನೇರ ಮನವಿ. ಎಂ. ಅಬ್ದುಲ್ ರೆಹಮಾನ್ ಪಾಷಾರವರು ಸಂಚಾಲಕರಾಗಿರುವ ಈ ಆಂದೋಲನ ದಲ್ಲಿ ಈಗಾಗಲೇ ನಾಡಿನ ಹಲವಾರು ಪ್ರಗತಿಪರ ಚಿಂತಕರು ಒಳಗೊಂಡಿದ್ದಾರೆ.

ಈ ಆಂದೋಲನವನ್ನು ಕಟ್ಟಿ ಬೆಳೆಸುವುದಕ್ಕಾಗಿ ನಿಮ್ಮಿಂದ, ನಿಮ್ಮ ಸಂಸ್ಥೆಯಿಂದ ಎರಡು ಬಗೆಯ ನೆರವು ಅಗತ್ಯವಾಗಿದೆ –

**1. ಕಾರ್ಯಶಿಬಿರ ಸಂಚಾಲಕರು** : 'ಕಾರ್ಯಶಿಬಿರ ಸಂಚಾಲಕ'ರಾಗಿ ತರಬೇತಿಯನ್ನು ಪಡೆಯಲು ಆಸಕ್ತಿ, ಅರ್ಹತೆ ಇರುವವರ ಹೆಸರುಗಳನ್ನು ನಿಮ್ಮ ನಿಮ್ಮ ಪ್ರದೇಶದಿಂದ ಸೂಚಿಸುವುದು, ನಿಮ್ಮ ಹೆಸರನ್ನೂ ಸೂಚಿಸಬಹುದು. ಇವರು ವಿಭಾಗ ಮಟ್ಟದ 3 ದಿನಗಳ ಶಿಬಿರಗಳಲ್ಲಿ ಸಜ್ಜುಗೊಂಡು, 'ತರಬೇತಿ ಸಂಚಿ'ಯನ್ನು ಪಡೆದು, ಮುಂದೆ ತಮ್ಮ ತಮ್ಮ ಪ್ರದೇಶಗಳಲ್ಲಿ 2 ದಿನಗಳ ಕಾರ್ಯಶಿಬಿರಗಳನ್ನು ನಡೆಸುವರು. ಇಂಥ ವ್ಯಕ್ತಿಗಳ ಹೆಸರು, ವಿಳಾಸ, ಸಂಪರ್ಕವಿವರ, ವಿದ್ಯಾರ್ಹತೆ, ಕಾರ್ಯಾನುಭವ ಇತ್ಯಾದಿ ವಿವರಗಳನ್ನು ಸಂಚಾಲಕರಿಗೆ ಕಳಿಸಬಹುದು.

**೨. ಪೋಷಕ ಸಂಸ್ಥೆಗಳು** : ರಾಜ್ಯದಲ್ಲಿ ವಿವಿಧ ವಿಭಾಗಗಳಲ್ಲಿ ನಡೆಸಲಾಗುವ ಮೂರು ದಿನಗಳ 'ಸಂಚಾಲಕರ ಕಾರ್ಯಶಿಬಿರ'ಗಳನ್ನು, ಮತ್ತು ಮುಂದೆ ವಿವಿಧ ವರ್ಗದ ಜನರಿಗಾಗಿ ನಡೆಸುವ ಎರಡು ದಿನಗಳ ವೈಜ್ಞಾನಿಕ ಮನೋವೃತ್ತಿ ಕಾರ್ಯಶಿಬಿರಗಳ ಸಂಘಟನೆಯನ್ನು ತಮ್ಮ ಖರ್ಚಿನಲ್ಲಿ ವಹಿಸಿಕೊಂಡು ನೆರವಾಗಬಯಸುವ ಸಂಸ್ಥೆಗಳ ವಿವರಗಳನ್ನು ಸಂಚಾಲಕರಿಗೆ ತಿಳಿಸಬಹುದು.

ಇದನ್ನು ಒಂದು ನಿಜವಾದ ಜನಾಂದೋಲನವನ್ನಾಗಿ ಕಟ್ಟುವ ಆಲೋಚನೆ ಇರುವುದರಿಂದ ನಿಮ್ಮ ಎಲ್ಲ ಬಗೆಯ ನೆರವು, ಸಲಹೆ – ಸೂಚನೆಗಳು ನಮಗೆ ಉಪಯುಕ್ತ. ಈ ಆಂದೋಲನದಲ್ಲಿ ನೀವು ನಿಮ್ಮ ಸ್ನೇಹಿತರೊಂದಿಗೆ ಭಾಗವಹಿಸಿ.

ಸಂಚಾಲಕ : **ಎಂ. ಅಬ್ದುಲ್ ರೆಹಮಾನ್ ಪಾಷ**
೮೧/೩೭-೩, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೫೬೦ ೦೧೦
ಫೋನ್ : ೦೮೦-೨೩೩೮ ೯೮೮೮; ಮೊ : ೯೮೪೫೨ ೯೯೬೨೧ ಇಅಂಚೆ : pasha1950@gmail.com

# ಮಂಗಳವಾರ ಮಧ್ಯಾಹ್ನದ ಲಘು ನಿದ್ರೆ

**ಈ ಕಥೆಯು ನವಕರ್ನಾಟಕ ಪ್ರಕಾಶನದ ವಿಶ್ವಕಥಾಕೋಶದ ೨೪ನೆಯ ಸಂಪುಟ "ಕಿವುಡು ವನದೇವತೆ"ಯಲ್ಲಿ ಪ್ರಕಟವಾಗಿದ್ದು ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್‌ರ ನಿಧನದ ಈ ಸಂದರ್ಭದಲ್ಲಿ ಅವರ ಗೌರವಾರ್ಥ ಪ್ರಕಟಿಸಲಾಗಿದೆ.**

ಕಂಪಿಸುವ ಮರುಳುಗಲ್ಲುಗಳ ಸುರಂಗದಿಂದ ನುಗ್ಗಿ ಹೊರಬಂದ ಟ್ರೈನ್ ಕೊನೆ ಇಲ್ಲದ, ಒಂದೇ ಥರ ಕಾಣುವ ಬಾಳೆಯ ತೋಟಗಳನ್ನು ಹಾಯ್ದು ಮುಂದೋಡತೊಡಗಿತು. ಗಾಳಿ ತೇವಭರಿತವಾಯಿತು. ಸಮುದ್ರ ತಡಿಯ ಮಂದಾನಿಲ ದೂರವಾಯಿತು. ಕಂಪಾರ್ಟ್‌ಮೆಂಟಿನ ಕಿಟಕಿಯ ಮೂಲಕ ಉಸಿರುಕಟ್ಟಿಸುವಂಥ ಹೊಗೆಯ ರಾಶಿಯೊಂದು ಭಗ್ಗನೆ ಒಳಗೆ ನುಗ್ಗಿತು. ರೈಲುದಾರಿಗೆ ಸಮಾನಾಂತರವಾಗಿದ್ದ ಸಣ್ಣ ಬಂಡಿ ಜಾಡಿನಲ್ಲಿ ಬಾಳೆಯ ಗೊನೆಗಳನ್ನು ಹೇರಿದ್ದ ಎತ್ತಿನ ಗಾಡಿಗಳಿದ್ದವು. ರಸ್ತೆಯಿಂದಾಚೆಗೆ ಕೃಷಿ ಮಾಡದ ಭಾಗಗಳಲ್ಲಿ ಅಲ್ಲೊಂದು ಇಲ್ಲೊಂದರಂತೆ, ವಿದ್ಯುತ್ ಪಂಖಗಳಿದ್ದ ಕಚೇರಿಗಳಿದ್ದವು, ಕೆಂಪು ಇಟ್ಟಿಗೆಯ ಕಟ್ಟಡಗಳಿದ್ದವು. ಧೂಳು ತುಂಬಿದ ತಾಳೆಯ ಮರಗಳ ಮತ್ತು ಗುಲಾಬಿ ಪೊದೆಗಳ ನಡುವೆ ಮನೆಗಳಿದ್ದವು. ಅವುಗಳ ಬಿಸಿಲುಮಚ್ಚಿನಲ್ಲಿ ಕುರ್ಚಿಗಳು ಹಾಗೂ ಬಿಳಿ ಬಣ್ಣದ ಚಿಕ್ಕ ಮೇಜುಗಳೂ ಇದ್ದವು. ಆಗ ಬೆಳಗಿನ ಹನ್ನೊಂದು ಗಂಟೆ. ಸೆಖೆ ಇನ್ನೂ ಆರಂಭವಾಗಿರಲಿಲ್ಲ.

"ಕಿಟಕಿ ಮುಚ್ಚು. ಇಲ್ಲದಿದ್ದರೆ ನಿನ್ನ ತಲೆ ತುಂಬ ಹೊಗೆಮಸಿ ತುಂಬುತ್ತೆ" ಎಂದಳು ಹೆಂಗಸು.

ಹುಡುಗಿ ಪ್ರಯತ್ನಿಸಿದಳು. ಆದರೆ ಚೌಕಟ್ಟಿಗೆ ತುಕ್ಕು ಹಿಡಿದಿದ್ದರಿಂದ ಕಿಟಕಿಯ ಗಾಜನ್ನು ಮುಚ್ಚಲಾಗಲಿಲ್ಲ.

ಮೂರನೆಯ ದರ್ಜೆಯ ಒಂಟಿ ಬೋಗಿಯಲ್ಲಿ ಅವರಿಬ್ಬರೇ ಪ್ರಯಾಣಿಕರು. ಟ್ರೈನಿನ ಹೊಗೆ ಕಿಟಕಿಯ ಮೂಲಕ ಬರಲಾರಂಭಿಸಿದ್ದರಿಂದ ಹುಡುಗಿ ಕಿಟಕಿ ಬಿಟ್ಟು ಎದ್ದಳು. ತಿನಿಸುಗಳಿಂದ ಕೂಡಿದ್ದ ಒಂದು ಪ್ಲಾಸ್ಟಿಕ್ ಚೀಲ ಮತ್ತು ವೃತ್ತಪತ್ರಿಕೆಯಲ್ಲಿ ಸುತ್ತಿದ್ದ ಒಂದು ಹೂವಿನ ಗುಚ್ಛ – ಇವಿಷ್ಟೇ ಅವರ ವಸ್ತುಗಳು. ಹುಡುಗಿ ಅವನ್ನು ಬೇರೆಡೆ ಇಟ್ಟಳು. ಅವಳು ಕಿಟಕಿಯಿಂದ ದೂರವಾಗಿ ಎದುರು ಜಾಗದಲ್ಲಿ ತಾಯಿಯ ಕಡೆಗೆ ಮುಖ ಮಾಡಿ ಕುಳಿತಳು. ಅವರಿಬ್ಬರೂ ಜೀರ್ಣವಾದ ದುಃಖಸೂಚಕ ಬಟ್ಟೆಗಳನ್ನು ತೊಟ್ಟಿದ್ದರು.

ಹುಡುಗಿಗೆ ಹನ್ನೆರಡು ವರ್ಷ ವಯಸ್ಸು. ಅದೇ ಅವಳ ಮೊದಲ ಟ್ರೈನ್ ಪ್ರಯಾಣ. ಕಣ್ಣರೆಪ್ಪೆಗಳಲ್ಲಿನ ನೀಲಿನಾಳಗಳು, ಕುಳ್ಳಾದ ಮೃದುವಾದ ತೊಪ್ಪೆ ದೇಹ ಮತ್ತು ಗುತ್ತನಾದ ನಿಲುವಂಗಿಯಂತಿದ್ದ ಉಡುಪಿನಿಂದಾಗಿ ಆ ಹೆಂಗಸು, ಹುಡುಗಿಯ ತಾಯಿ ಅನ್ನಿಸಿಕೊಳ್ಳುವುದಕ್ಕಿಂತ ಹೆಚ್ಚು ಮುಪ್ಪಾಗಿದ್ದಳು. ಅವಳು ಸೀಟಿನ ಹಿಂಭಾಗಕ್ಕೆ ನೆಟ್ಟಗೆ ಒರಗಿಕೊಂಡು ಕೂತಿದ್ದಳು. ಅವಳ ತೊಡೆಯ ಮೇಲಿದ್ದ ಚರ್ಮದ ಕೈಚೀಲ ಅಲ್ಲಲ್ಲಿ ಕಿತ್ತುಹೋಗಲಾರಂಭಿಸಿತ್ತು. ಅದನ್ನು




ತುಂತುರು ಮಳೆಯ ಶಬ್ದವನ್ನೂ ಮೀರಿ, ಯಾರೋ ಮುಂಬಾಗಿಲನ್ನು ಹೊರಗಡೆಯಿಂದ ಬಲಪ್ರಯೋಗ ಮಾಡಿ ತೆರೆಯಲು ಪ್ರಯತ್ನಿಸುತ್ತಿರುವ ಸದ್ದು ಆ ಹೊತ್ತಿನಲ್ಲಿ ಅವಳಿಗೆ ಕೇಳಿಸಿತು. ಅವಳು ಮೇಲೆದ್ದು ಗೋಡೆ ಬೀರುವಿನಲ್ಲಿದ್ದ ಒಂದು ಪುರಾತನ ರಿವಾಲ್ವರ್‌ಗಾಗಿ ತಡಕಾಡಿದಳು. ಅದನ್ನು ಕರ್ನಲ್ ಆವ್ರೇಲಿಯಾನೋ ಬ್ವೇಂದಿಯಾನ ಕಾಲದಿಂದ ಯಾರೂ ಉಪಯೋಗಿಸಿರಲಿಲ್ಲ. ಅದನ್ನು ತೆಗೆದುಕೊಂಡವಳೇ ಆಕೆ ದೀಪಗಳನ್ನು ಹಾಕದೆ ಪಡಸಾಲೆಗೆ ಹೋದಳು. ಬೀಗದ ಬಳಿಯಿಂದ ಬರುತ್ತಿದ್ದ ಶಬ್ದಕ್ಕಿಂತ ಹೆಚ್ಚಾಗಿ ಇಪ್ಪತ್ತೆಂಟು ವರ್ಷದ ಏಕಾಂಗಿತನ ತನ್ನಲ್ಲಿ ತುಂಬಿದ್ದ ಭಯವೇ ಅವಳಿಗೆ ಬಾಗಿಲಿನತ್ತ ದಾರಿ ತೋರಿಸಿತು. ಬಾಗಿಲು ಯಾವ ಕಡೆಗಿದೆ ಎಂದಷ್ಟೇ ಅಲ್ಲ, ಬೀಗ ಎಷ್ಟು ಎತ್ತರದಲ್ಲಿದೆ ಎಂದೂ ಊಹೆಯಿಂದಲೇ ಅವಳು ತೀರ್ಮಾನಿಸಿದಳು.



ಮೂಲ : **ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್**

ಎರಡೂ ಕೈಗಳಿಂದ ಅವಳು ಹಿಡಿದುಕೊಂಡಿದ್ದಳು. ಬಡತನಕ್ಕೆ ಹೊಂದಿಕೊಂಡಿದ್ದ ಹೆಣ್ಣಿನ ಪ್ರಾಮಾಣಿಕ ಪ್ರಶಾಂತಿ ಅವಳ ಮುಖದಲ್ಲಿ ನೆಲಸಿತ್ತು.

ಹನ್ನೆರಡು ಗಂಟೆಯ ಹೊತ್ತಿಗೆ ಧಗೆ ಪ್ರಾರಂಭವಾಯಿತು. ನೆರೆಯಲ್ಲಿ ಪಟ್ಟಣವಿಲ್ಲದ ನಿಲ್ದಾಣವೊಂದರ ಬಳಿ ನೀರು ಸಂಗ್ರಹಿಸಲು ಟ್ರೈನು ಹತ್ತು ನಿಮಿಷ ನಿಂತಿತು. ಹೊರಗೆ ತೋಟಗಳ ರಹಸ್ಯಮಯ ಮೌನದಲ್ಲಿ ನೆರಳುಗಳು ಗೆರೆಕೊರೆದಂತೆ ಕಾಣುತ್ತಿದ್ದವು. ಆದರೆ ಬೋಗಿಯೊಳಗೆ ತುಂಬಿಕೊಂಡಿದ್ದ ಸ್ತಬ್ಧ ಗಾಳಿ ಹದಮಾಡದ ಚರ್ಮದ ವಾಸನೆ ಬೀರುತ್ತಿತ್ತು. ಟ್ರೈನ್ ಮತ್ತೆ ವೇಗವಾಗಿ ಓಡಲಿಲ್ಲ. ಒಂದೇ ಥರ ಇದ್ದ ಎರಡು ಪಟ್ಟಣಗಳಲ್ಲಿ ಅದು ನಿಂತಿತು. ಅಲ್ಲಿನ ಮರದ ಮನೆಗಳಿಗೆ ಉಜ್ವಲ ವರ್ಣಗಳನ್ನು ತೊಡೆದಿದ್ದರು. ಹೆಂಗಸು ತೂಕಡಿಸುತ್ತಾ ನಿದ್ದೆಮಾಡಿಬಿಟ್ಟಳು. ಹುಡುಗಿ ತನ್ನ ಬೂಟುಗಳನ್ನು ಕಳಚಿದಳು. ಅನಂತರ ಶೌಚಕೋಣೆಗೆ ಹೋಗಿ ಹೂಗುಚ್ಛವನ್ನು ನೀರಿನಲ್ಲಿಟ್ಟಳು.

ಅವಳು ತನ್ನ ಜಾಗಕ್ಕೆ ಹಿಂತಿರುಗಿದಾಗ ತಾಯಿ ಊಟ ಮಾಡಲು ಕಾದಿದ್ದಳು. ಅವಳು ಮಗಳಿಗೆ ಒಂದಿಷ್ಟು ಚೀಸ್, ಅರ್ಧ ತುಂಡು ರೊಟ್ಟಿ ಹಾಗೂ ಒಂದು ಸೀರೊಟ್ಟಿಯನ್ನು ಕೊಟ್ಟಳು. ತಾನು ಕೂಡ ಪ್ಲಾಸ್ಟಿಕ್ ಚೀಲದಿಂದ ಅಷ್ಟೇ ಆಹಾರವನ್ನು ತೆಗೆದುಕೊಂಡಳು. ಅವರು ತಿನ್ನುತ್ತಿರುವಾಗ ಟ್ರೈನ್ ಒಂದು ಕಬ್ಬಿಣದ ಸೇತುವೆಯ ಮೇಲೆ ನಿಧಾನವಾಗಿ ಸಾಗಿ ಹೋಗಿ, ಹಿಂದೆ ಕಂಡಂಥ ಪಟ್ಟಣವೊಂದನ್ನು ದಾಟಿತು. ಒಂದೇ ವ್ಯತ್ಯಾಸವೆಂದರೆ ಈ ಪಟ್ಟಣದ ಚೌಕದಲ್ಲಿ ಜನಗಳ ಗುಂಪೊಂದಿತ್ತು. ಪ್ರಖರ ಸೂರ್ಯನ ಬಿಸಿಲಲ್ಲಿ ವಾದ್ಯಮೇಳವೊಂದು ಲವಲವಿಕೆಯ ರಾಗವೊಂದನ್ನು ನುಡಿಸುತ್ತಿತ್ತು. ಪಟ್ಟಣದ ಇನ್ನೊಂದು ಪಕ್ಕದಲ್ಲಿ ಬಾಳೆಯ ತೋಟಗಳಿದ್ದುವು. ಆಚೆ ಬಯಲು. ಅನಾವೃಷ್ಟಿಯಿಂದಾಗಿ ಬಯಲಿನ ನೆಲ ಒಣಗಿ ಒಡೆದುಹೋಗಿತ್ತು.

ಹೆಂಗಸು ತಿನ್ನುವುದನ್ನು ನಿಲ್ಲಿಸಿದಳು.

"ಷೂಸ್ ಹಾಕ್ಕೋ," ಎಂದಳು.

ಹುಡುಗಿ ಹೊರಗೆ ನೋಡಿದಳು. ನಿರ್ಜನವಾದ ಬಯಲಿನ ವಿನಾ ಬೇರೇನೂ ಕಾಣಿಸಲಿಲ್ಲ. ಟ್ರೈನ್ ಮತ್ತೆ ವೇಗವನ್ನು ರೂಢಿಸಿಕೊಳ್ಳುತ್ತಿತ್ತು. ಆದರೂ ಅವಳು ಸೀ ರೊಟ್ಟಿಯ ಕೊನೆಯ ತುಂಡನ್ನು ಚೀಲದೊಳಕ್ಕೆ ಹಾಕಿ, ಬೇಗ ಬೇಗ ಬೂಟುಗಳನ್ನು ಹಾಕಿಕೊಂಡಳು. ಹೆಂಗಸು ಅವಳಿಗೊಂದು ಬಾಚಣಿಗೆ ಕೊಟ್ಟು,

"ತಲೆ ಬಾಚಿಕೊ" ಎಂದಳು.

ಹುಡುಗಿ ತಲೆ ಬಾಚಿಕೊಳ್ಳುತ್ತಿರುವಾಗ ಟ್ರೈನ್ ಶಿಳ್ಳೆ ಹಾಕಲಾರಂಭಿಸಿತು. ಹೆಂಗಸು ತನ್ನ ಕೊರಳಿನ ಬೆವರನ್ನು ಒರೆಸಿಕೊಂಡಳು. ಮುಖದ ಮೇಲೆ ಜಿನುಗಿದ್ದ ಜಿಡ್ಡನ್ನೂ ಬೆರಳುಗಳಿಂದ ಒರೆಸಿದಳು. ಹುಡುಗಿ ಬಾಚಿಕೊಳ್ಳುವುದನ್ನು ನಿಲ್ಲಿಸುವ ಹೊತ್ತಿಗೆ ಟ್ರೈನು ಪಟ್ಟಣವೊಂದರ ಹೊರವಲಯದ ಮನೆಗಳನ್ನು ದಾಟಿಕೊಂಡು ಹೋಗುತ್ತಿತ್ತು. ಈ ಪಟ್ಟಣ ಹಿಂದಿನ ಪಟ್ಟಣಗಳಿಗಿಂತ ದೊಡ್ಡದಾಗಿದ್ದರೂ ಅವುಗಳಿಗಿಂತ ಹೆಚ್ಚು ಮಂಕಾಗಿದ್ದಂತೆ ಕಂಡಿತು.

"ಏನಾದ್ರು ಮಾಡೋದಾದ್ರೆ ಈಗ್ಲೇ ಮಾಡಿಬಿಡು. ಮುಂದೆ ಬಾಯಾರಿಕೆಯಿಂದ ಸಾಯೋ ಹಾಗಾದ್ರೂ ಏನೂ ಕುಡೀಬೇಡ. ಎಲ್ಲದಕ್ಕಿಂತ ಮುಖ್ಯವಾಗಿ ಅಳೋಹಾಗಿಲ್ಲ," ಎಂದಳು ಹೆಂಗಸು.

ಹುಡುಗಿ ತಲೆದೂಗಿದಳು. ಟ್ರೈನಿನ ಶಿಳ್ಳೆ ಮತ್ತು ಹಳೆಯ ಬೋಗಿಗಳ ಗಡಗಡ ಸದ್ದಿನೊಡನೆ ಬಿಸಿಗಾಳಿ ಒಳನುಗ್ಗಿತು. ಹೆಂಗಸು ಉಳಿದ ಆಹಾರವನ್ನು ಪ್ಲಾಸ್ಟಿಕ್ ಚೀಲದೊಳಗೆ ಹಾಕಿ ಅದನ್ನು ಮಡಿಸಿ ಕೈಚೀಲದೊಳಗೆ ಇಟ್ಟಳು. ಒಂದು ಕ್ಷಣ ಆಗಸ್ಟ್ ತಿಂಗಳ ಆ ಮಂಗಳವಾರದ ಉಜ್ವಲ ಹಗಲಿನಲ್ಲಿ ನಗರದ ಪೂರ್ಣ ಚಿತ್ರ ಕಿಟಿಕಿಯಲ್ಲಿ ಕಂಡಿತು. ಹುಡುಗಿ ನೀರಿಳಿಯುತ್ತಿದ್ದ ನೆನೆದ ವೃತ್ತಿಪತ್ರಿಕೆಯಿಂದ ಹೂವನ್ನು ಸುತ್ತಿ ಕಿಟಿಕಿಯಿಂದ ಸ್ವಲ್ಪ ದೂರ ಸರಿದು ತಾಯಿಯನ್ನು ದಿಟ್ಟಿಸಿದಳು. ಪ್ರತಿಯಾಗಿ ತಾಯಿ ಅವಳನ್ನು ಹಿತವಾಗಿ ನೋಡಿದಳು. ಟ್ರೈನ್ ಶಿಳ್ಳೆ ಹಾಕುತ್ತಾ ತನ್ನ ವೇಗವನ್ನು ಕಡಮೆ ಮಾಡಿಕೊಳ್ಳಲಾರಂಭಿಸಿತು. ಮುಂದಿನ ಕ್ಷಣದಲ್ಲಿ ಅದು ನಿಂತಿತು.

ನಿಲ್ದಾಣದಲ್ಲಿ ಯಾರೂ ಇರಲಿಲ್ಲ. ಬಾದಾಮಿ ಮರಗಳ ನೆರಳಿನಲ್ಲಿ ಮುಳುಗಿದ್ದ ಆಚೆಕಡೆಯ ಕಿರುದಾರಿಯಲ್ಲಿ ದಳ್ಳಾಳಿಗಳ ಅಂಗಡಿ ಮಾತ್ರ ತೆರೆದಿತ್ತು. ಪಟ್ಟಣ ಧಗೆಯಲ್ಲಿ ತೇಲುತ್ತಿತ್ತು. ಹೆಂಗಸು ಮತ್ತು ಹುಡುಗಿ ಟ್ರೈನಿನಿಂದ ಇಳಿದು ನಿಲ್ದಾಣವನ್ನು ದಾಟಿದರು. ನೆಲಕ್ಕೆ ಹಾಸಿದ್ದ ಹಂಚುಗಳ ನಡುವೆ ಹುಲ್ಲು ಬೆಳೆದು ಅವನ್ನು ಮಗುಚಿಹಾಕಿದ್ದವು. ಅದನ್ನು ದಾಟಿಕೊಂಡು ಅವರು ರಸ್ತೆಯ ನೆರಳಿಗೆ ಹೋದರು.

ಆಗಲೇ ಎರಡು ಗಂಟೆಯ ಸುಮಾರು. ಆ ಸಮಯದಲ್ಲಿ ತೂಕಡಿಕೆಯ ಭಾರದಲ್ಲಿ ಇಡೀ ಊರೇ ಮಧ್ಯಾಹ್ನದ ಲಘು ನಿದ್ರೆಯಲ್ಲಿತ್ತು. ಅಂಗಡಿಗಳು, ಕಚೇರಿಗಳು, ಸಾರ್ವಜನಿಕ ಶಾಲೆಗಳು, ಎಲ್ಲ ಹನ್ನೊಂದು ಗಂಟೆಗೆ ಮುಚ್ಚಿದ್ದವು. ನಾಲ್ಕು ಗಂಟೆಗೆ ಸ್ವಲ್ಪ ಮೊದಲು, ಟ್ರೈನು ಮರಳಿ ಬರುವ ಸಮಯಕ್ಕೆ ಅವುಗಳನ್ನು ಮತ್ತೆ ತೆರೆಯುತ್ತಿದ್ದರು. ನಿಲ್ದಾಣದ ಆಚೆಕಡೆ ಇದ್ದ ಹೋಟೆಲ್, ಅದರ ಬಾರ್ ಮತ್ತು ದಳ್ಳಾಳಿ ಅಂಗಡಿ, ಚೌಕದ ಒಂದು ಪಾರ್ಶ್ವದಲ್ಲಿದ್ದ ತಂತಿ ಕಚೇರಿ ಮಾತ್ರ ತೆರೆದಿದ್ದವು. ಮನೆಗಳಲ್ಲಿ ಹೆಚ್ಚಿನವು ಬಾಳೆ ಕಂಪೆನಿ ರೂಢಿಗೆ ತಂದ ಮಾದರಿಯವು. ಬಾಗಿಲುಗಳನ್ನು ಒಳಗಿಂದ ಬೀಗ ಹಾಕಿ ಮುಚ್ಚಿದ್ದರು. ಕಿಟಿಕಿಯ ಪರದೆಗಳನ್ನು ಇಳಿಬಿಟ್ಟಿದ್ದರು. ಕೆಲವು ಮನೆಗಳೊಳಗೆ ಎಂಥ ಧಗೆ ಇತ್ತೆಂದರೆ ನಿವಾಸಿಗಳು ಹೊರಗೆ ಅಂಗಳದಲ್ಲಿ ಕುಳಿತುಕೊಂಡು ಊಟ ಮಾಡುತ್ತಿದ್ದರು. ಉಳಿದವರು ಬಾದಾಮಿ ಮರಗಳ ನೆರಳಿನಲ್ಲಿ ಕುರ್ಚಿಗಳನ್ನು ಗೋಡೆಗೆ ಆನಿಸಿ ಬೀದಿಯಲ್ಲೇ ಮಧ್ಯಾಹ್ನದ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು.



ಬಾದಾಮಿ ಮರಗಳ ನೆರಳಿನ ಆಶ್ರಯದಲ್ಲೇ ನಡೆಯುತ್ತಾ ಹೆಂಗಸು ಮತ್ತು ಹುಡುಗಿ ಮಧ್ಯಾಹ್ನದ ಲಘು ನಿದ್ರೆಗೆ ಅಡಚಣೆ ಉಂಟುಮಾಡದೆ ಪಟ್ಟಣವನ್ನು ಪ್ರವೇಶಿಸಿದರು. ಅವರು ನೇರವಾಗಿ ಪಾದ್ರಿಯ ಮನೆಗೆ ಹೋದರು. ಹೆಂಗಸು ಬಾಗಿಲಿನಲ್ಲಿದ್ದ ಲೋಹದ ತೂತು ಕಿಂಡಿಯನ್ನು ಉಗುರಿನಿಂದ ಕೆರೆದು ಒಂದು ಕ್ಷಣ ಕಾದು ಮತ್ತೆ ಕೆರೆದಳು. ಒಳಗೆ ವಿದ್ಯುತ್ ಪಂಖವೊಂದು ಗೊಂಯ್ ಎನ್ನುತ್ತಿತ್ತು. ಒಳಗಿನ ಹೆಜ್ಜೆಯ ಸದ್ದು ಅವರಿಗೆ ಕೇಳಿಸಲಿಲ್ಲ. ಬಾಗಿಲು ಮೆಲ್ಲನೆ ಕಿರುಗುಟ್ಟಿದ್ದು ಅವರಿಗೆ ಮಂದವಾಗಿ ಕೇಳಿಸಿತು. ಹಿಂದೆಯೇ ತೂತುಕಿಂಡಿಯ ಪಕ್ಕದಿಂದ ಒಂದು ಜಾಗರೂಕ ಧ್ವನಿ ಕೇಳಿಸಿತು :

"ಯಾರದು ?" ಹೆಂಗಸು ತೂತುಕಿಂಡಿಯ ಮೂಲಕ ನೋಡಲು ಪ್ರಯತ್ನಿಸುತ್ತಾ, ಎಂದಳು :

"ಪಾದ್ರಿಗಳನ್ನು ಕಾಣಬೇಕಾಗಿತ್ತು."

"ಅವರು ನಿದ್ದೆ ಮಾಡ್ತಿದಾರೆ."

"ತುರ್ತಾಗಿ ನೋಡಬೇಕಾಗಿತ್ತು," ಎಂದು ಹೆಂಗಸು ಆಗ್ರಹಪಡಿಸಿದಳು.

ಅವಳ ಧ್ವನಿಯಲ್ಲಿ ದೃಢ ನಿರ್ಧಾರವಿತ್ತು.

ಬಾಗಿಲು ಸದ್ದಿಲ್ಲದಂತೆ ಇನ್ನಷ್ಟು ತೆರೆಯಿತು. ಧಡೂತಿಯಾದ, ವಯಸ್ಸಾದ ಮಹಿಳೆಯೊಬ್ಬಳು ಕಾಣಿಸಿಕೊಂಡಳು. ಅವಳ ಮೈ ಬಿಳಿಚಿಕೊಂಡಿತ್ತು. ಕೂದಲ ಬಣ್ಣ ಕಬ್ಬಿಣದಂತಿತ್ತು. ಅವಳು ಹಾಕಿಕೊಂಡಿದ್ದ ದಪ್ಪಗಾಜಿನ ಕನ್ನಡಕದಲ್ಲಿ ಅವಳ ಕಣ್ಣುಗಳು ತೀರಾ ಚಿಕ್ಕವಾಗಿ ಕಾಣುತ್ತಿದ್ದವು.

"ಒಳಗೆ ಬನ್ನಿ," ಎನ್ನುತ್ತಾ ಅವಳು ಬಾಗಿಲನ್ನು ಪೂರ್ತಿ ತೆರೆದಳು.

ಹೂಗಳ ಹಳೆಯ ಕಂಪಿನಿಂದ ತುಂಬಿದ್ದ ಕೊಠಡಿಯೊಂದನ್ನು ಅವರು ಪ್ರವೇಶಿಸಿದರು. ಮನೆಯಾಕೆ ಅವರನ್ನು ಒಂದು ಮರದ ಬೆಂಚಿನ ಬಳಿಗೆ ಕರೆದುಕೊಂಡು ಹೋಗಿ ಕುಳಿತುಕೊಳ್ಳುವಂತೆ ಸನ್ನೆ ಮಾಡಿದಳು. ಹುಡುಗಿ ಕುಳಿತಳು. ಆದರೆ ತಾಯಿ ಎರಡೂ ಕೈಗಳಿಂದ ಕೈಚೀಲವನ್ನು ಅವಚಿಕೊಂಡು ಯಾವುದೋ ಧ್ಯಾನದಲ್ಲಿ ನಿಂತೇ ಇದ್ದಳು. ವಿದ್ಯುತ್ ಪಂಖದ ವಿನಾ ಬೇರಾವ ಸದ್ದೂ ಕೇಳಿಸುತ್ತಿರಲಿಲ್ಲ.

ಮನೆಯಾಕೆ ಕೊಠಡಿಯ ಆಚೆ ತುದಿಯ ಬಾಗಿಲಲ್ಲಿ ಕಾಣಿಸಿಕೊಂಡು ಅತಿ ಮೆಲ್ಲಗೆ ಹೇಳಿದಳು: "ಮೂರು ಗಂಟೆಯಾದಮೇಲೆ ಬರಬೇಕಂತೆ. ಐದು ನಿಮಿಷದ ಹಿಂದಷ್ಟೇ ಅವರು ಮಲಗಿದರು."

"ಟ್ರೈನು ಮೂರೂವರೆಗೆ ಬಿಡ್ತದೆ," ಎಂದಳು ಹೆಂಗಸು.

ಅದು ಸಂಕ್ಷಿಪ್ತವಾದ, ಆತ್ಮವಿಶ್ವಾಸದಿಂದ ಕೂಡಿದ ಉತ್ತರವಾಗಿತ್ತು. ಆದರೆ ಅವಳ ಧ್ವನಿ ಮೆಲುವಾಗಿ ಮೃದುವಾಗಿತ್ತು. ಮನೆಯಾಕೆ ಮೊದಲ ಬಾರಿಗೆ ನಕ್ಕು,

"ಸರಿ" ಎಂದಳು.

ಆಚೆಯ ಬಾಗಿಲು ಮತ್ತೆ ಮುಚ್ಚಿಕೊಂಡಮೇಲೆ ಹೆಂಗಸು ತನ್ನ ಮಗಳ ಪಕ್ಕದಲ್ಲಿ ಕುಳಿತುಕೊಂಡಳು. ಆ ಚಿಕ್ಕ ನಿರೀಕ್ಷಣಾ ಕೋಣೆ ಬಡವಾಗಿದ್ದರೂ ಲಕ್ಷಣವಾಗಿ ಸ್ವಚ್ಛವಾಗಿತ್ತು. ಕೋಣೆಯನ್ನು ವಿಭಾಗಿಸಿದ ಮರದ ಕಟಾಂಜನದ ಆ ಕಡೆ ಸಾದಾ ರೀತಿಯ ಒಂದು ಬರೆಯುವ ಮೇಜಿತ್ತು. ಅದರ ಮೇಲೆ ಒಂದು ಮೇಣಗಪಟವನ್ನು ಹಾಸಿ ಒಂದು ಹೂದಾನಿಯನ್ನಿಟ್ಟಿದ್ದರು. ಹೂದಾನಿಯ ಪಕ್ಕದಲ್ಲಿ ಒಂದು ಪುರಾತನ ಬೆರಳಚ್ಚಿನ ಯಂತ್ರವಿತ್ತು. ಆಚೆ ಕಡೆ ಪ್ಯಾರಿಷ್‌ನ ದಸ್ತಾವೇಜುಗಳಿದ್ದವು. ಅವಿವಾಹಿತ ಹೆಂಗಸೊಬ್ಬಳು ಆ ಕಚೇರಿಯನ್ನು ವ್ಯವಸ್ಥಿತವಾಗಿಟ್ಟಿದ್ದಳು ಎಂದು ನೋಡಿದ ಕೂಡಲೇ ತಿಳಿಯುತ್ತಿತ್ತು.

ಆಚೆ ಕೊನೆಯ ಬಾಗಿಲು ತೆರೆದುಕೊಂಡಿತು. ಈ ಸಲ ತಮ್ಮ ಕನ್ನಡಕದ ಗಾಜನ್ನು ಕರವಸ್ತ್ರದಿಂದ ಒರೆಸುತ್ತಾ ಪಾದ್ರಿಯೇ ಬಂದ. ಕನ್ನಡಕವನ್ನು ಆತ ಹಾಕಿಕೊಂಡ ಮೇಲೆ ಮಾತ್ರವೇ ಅವನು ಬಾಗಿಲು ತೆರೆದಾಕೆಯ ಸೋದರ ಎಂದು ಅವರಿಗೆ ಗೊತ್ತಾಯಿತು.

"ನಿಮಗೆ ಏನು ಸಹಾಯ ಮಾಡಲಿ ?" ಎಂದ ಆತ.

"ಸ್ಮಶಾನದ ಬೀಗದ ಕೈ" ಎಂದಳು ಹೆಂಗಸು.

ಹುಡುಗಿ ಹೂವನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದಳು. ಬೆಂಚಿನ ಕೆಳಗೆ ಅವಳ ಪಾದಗಳು ಒಂದರ ಮೇಲೊಂದಿದ್ದವು. ಪಾದ್ರಿ ಅವಳ ಕಡೆ ನೋಡಿದ, ಅನಂತರ ಹೆಂಗಸನ್ನು ದಿಟ್ಟಿಸಿದ. ಆಮೇಲೆ ಕಿಟಕಿಯ ತಂತಿ ಬಲೆಯ ಮೂಲಕ ಮೋಡವಿಲ್ಲದ ಥಳಥಳಿಸುವ ಆಕಾಶವನ್ನು ನೋಡಿ ಹೇಳಿದ :

"ಈ ಉರಿಬಿಸಿಲಲ್ಲೇ ! ಸ್ವಲ್ಪ ಬಿಸಿಲು ಇಳಿಯೋವರೆಗೆ ಕಾಯಬಹುದಾಗಿತ್ತಲ್ಲ."

ಹೆಂಗಸು ಮೌನವಾಗಿ ತಲೆ ಅಲ್ಲಾಡಿಸಿದಳು. ಪಾದ್ರಿ ಕಟಾಂಜನದ ಆ ಕಡೆ ಪಕ್ಕಕ್ಕೆ ಹೋಗಿ, ಮೇಣಗಪಟದಿಂದ ಸುತ್ತಿದ ಒಂದು ಟಿಪ್ಪಣಿ ಪುಸ್ತಕವನ್ನೂ ಒಂದು ಮರದ ಲೇಖನಿಯನ್ನೂ ಮಸಿದೌತಿಯನ್ನೂ ಬೀರುವಿನಿಂದ ತೆಗೆದುಕೊಂಡು ಮೇಜಿನ ಮುಂದೆ ಕುಳಿತ. ಅವನ ತಲೆಯಲ್ಲಿ ಕೂದಲು ಇಲ್ಲದ್ದಕ್ಕೆ ಪರಿಹಾರವೋ ಎನ್ನುವಂತೆ ಕೈಮೇಲೆ ಸಮೃದ್ಧ ಕೂದಲಿತ್ತು.

"ಯಾವ ಗೋರಿಗೆ ನೀವು ಭೇಟಿ ಕೊಡ್ತೀರಿ ?" ಎಂದ ಪಾದ್ರಿ.

"ಕಾರ್ಲೋಸ್ ಸೇಂತೇನೊ ಗೋರಿಗೆ" ಎಂದಳು ಹೆಂಗಸು.

"ಯಾರು ?"

"ಕಾರ್ಲೋಸ್ ಸೇಂತೇನೊ" ಪುನರುಚ್ಚರಿಸಿದಳು ಆಕೆ.

ಆದರೂ ಪಾದ್ರಿಗೆ ಇನ್ನೂ ಅರ್ಥವಾಗಲಿಲ್ಲ.

"ಕಳೆದ ವಾರ ಇಲ್ಲಿ ಕೊಲೆಯಾದ ಕಳ್ಳ ಅವನು. ನಾನು ಅವನ ತಾಯಿ," ಎಂದಳು ಹೆಂಗಸು, ಹಿಂದಿನ ಧ್ವನಿಯಲ್ಲೇ.

ಪಾದ್ರಿ ಪರೀಕ್ಷಕ ನೋಟದಿಂದ ಅವಳನ್ನು ನೋಡಿದ. ಅವಳು ಆತ್ಮಸಂಯಮದಿಂದ ಅವನನ್ನು ದಿಟ್ಟಿಸಿದಳು. ಪಾದ್ರಿ ನಾಚಿಕೊಂಡ. ಆತ ತಲೆತಗ್ಗಿಸಿ ಬರೆಯಲಾರಂಭಿಸಿದ. ಹಾಳೆಯಲ್ಲಿ ಬರೆಯುತ್ತಾ ಪಾದ್ರಿ ಅವಳ ಗುರುತನ್ನು ಕೇಳಿದ. ಅದಕ್ಕೆ ಅವಳು ಸ್ವಲ್ಪವೂ ಹಿಂತೆಗೆಯದೆ, ಓದುತ್ತಿರುವಳೋ ಎನ್ನುವಂತೆ ಕರಾರುವಾಕ್ಕಾಗಿ ಎಲ್ಲ ವಿವರಗಳಿಂದಲೂ ಕೂಡಿದ ಉತ್ತರ ಕೊಟ್ಟಳು. ಪಾದ್ರಿ ಬೆವರಲಾರಂಭಿಸಿದ. ಹುಡುಗಿ ಎಡಗಾಲಿನ ಬೂಟಿನ ಕೊಂಡಿಯನ್ನು ಕಳಚಿ ಹಿಮ್ಮಡಿಯನ್ನು ಹೊರಗೆಳೆದು ಬೆಂಚಿನ ಪಟ್ಟಿಯ ಮೇಲಿಟ್ಟಳು. ಬಲಗಡೆಯದನ್ನೂ ಹಾಗೇ ಮಾಡಿದಳು.

ಅದೆಲ್ಲ ಪ್ರಾರಂಭವಾದದ್ದು ಕಳೆದ ಸೋಮವಾರ ಬೆಳಗಿನ ಜಾವ ಮೂರು ಗಂಟೆಯಲ್ಲಿ, ಈ ಸ್ಥಳದಿಂದ ಕೆಲವೇ ಮನೆಗಳ ಆಚೆ. ಅಲ್ಲಿ ರೆಬೆಕ್ಕಾ ಎಂಬ ವಿಧವೆ ಎಲ್ಲ ಬಗೆಯ ಚೂರು ಪಾರುಗಳಿಂದ ತುಂಬಿಕೊಂಡಿದ್ದ ಒಂದು ಮನೆಯಲ್ಲಿ ಒಂಟಿಯಾಗಿ ವಾಸಮಾಡುತ್ತಿದ್ದಳು. ತುಂತುರು ಮಳೆಯ ಶಬ್ದವನ್ನೂ ಮೀರಿ,




ನೀ ನಿದ್ದ ಗಳಿಗೆ
ಗೋಡೆಗೂ ಮಾತು
ಅದೇನೋ ಒಂಥರಾ
ಕಚಗುಳಿಯ ಅನುಭವ

ನಾನು – ನೀನು ದಾರಿ ಬಿಟ್ಟ ದಿನ
ನೆಲದ ಮಣ್ಣು ಬಿಸಿಯ ತಾಪ
ಉಂಡಿತ್ತು; ಗುಲಾಬಿ ತುಟಿಗೂ
ಮಧು ಮೆತ್ತಿಕೊಂಡಿತ್ತು...

ಅಂಗಾತ ಮಲಗಿದ ಹಸಿ ಭೂಮಿಗೂ
ಬೀಜ ಬೀಳುವದೇ ತಡ, ಹೊಸ
ಜೀವಕೆ ನಾಂದಿ ಬರೆಯುತ್ತದೆ...

ಬಸಿರಾದ ಮೋಡಕೆ
ಹೆರಿಗೆಯ ತವಕ
ಹನಿ – ಹನಿಗಳಲ್ಲಿ ಅಳುವಿನ ದನಿ
ಭೂಮಿ ಸಂತೈಸಿದ ಹೊತ್ತಿಗೆ
ಮಗು ಮುಗುಳ್ನಕ್ಕಿತು.

ಎ. ಶಾ. ಬಡಿಗೇರ
ಭಾಗ್ಯನಗರ, ಕೊಪ್ಪಳ – ೫೮೩ ೨೩೮

ಯಾರೋ ಮುಂಬಾಗಿಲನ್ನು ಹೊರಗಡೆಯಿಂದ ಬಲಪ್ರಯೋಗ ಮಾಡಿ ತೆರೆಯಲು ಪ್ರಯತ್ನಿಸುತ್ತಿರುವ ಸದ್ದು ಆ ಹೊತ್ತಿನಲ್ಲಿ ಅವಳಿಗೆ ಕೇಳಿಸಿತು. ಅವಳು ಮೇಲೆದ್ದು ಗೋಡೆ ಬೀರುವಿನಲ್ಲಿದ್ದ ಒಂದು ಪುರಾತನ ರಿವಾಲ್ವರ್‌ಗಾಗಿ ತಡಕಾಡಿದಳು. ಅದನ್ನು ಕರ್ನಲ್ ಆವ್ರೇಲಿಯಾನೋ ಬ್ವೇಂದಿಯಾನ ಕಾಲದಿಂದ ಯಾರೂ ಉಪಯೋಗಿಸಿರಲಿಲ್ಲ. ಅದನ್ನು ತೆಗೆದುಕೊಂಡವಳೇ ಆಕೆ ದೀಪಗಳನ್ನು ಹಾಕದೆ ಪಡಸಾಲೆಗೆ ಹೋದಳು. ಬೀಗದ ಬಳಿಯಿಂದ ಬರುತ್ತಿದ್ದ ಶಬ್ದಕ್ಕಿಂತ ಹೆಚ್ಚಾಗಿ ಇಪ್ಪತ್ತೆಂಟು ವರ್ಷದ ಏಕಾಂಗಿತನ ತನ್ನಲ್ಲಿ ತುಂಬಿದ್ದ ಭಯವೇ ಅವಳಿಗೆ ಬಾಗಿಲಿನತ್ತ ದಾರಿ ತೋರಿಸಿತು. ಬಾಗಿಲು ಯಾವ ಕಡೆಗಿದೆ ಎಂದಷ್ಟೇ ಅಲ್ಲ, ಬೀಗ ಎಷ್ಟು ಎತ್ತರದಲ್ಲಿದೆ ಎಂದೂ ಊಹೆಯಿಂದಲೇ ಅವಳು ತೀರ್ಮಾನಿಸಿದಳು. ಅನಂತರ ಗುರಿ ಇಟ್ಟು ರಿವಾಲ್ವರನ್ನು ಎರಡೂ ಕೈಗಳಿಂದ ಭದ್ರವಾಗಿ ಹಿಡಿದುಕೊಂಡು, ಕಣ್ಣುಮುಚ್ಚಿ ಕುದುರೆ ಎಳೆದಳು. ಅದೇ ತನ್ನ ಜೀವಮಾನದಲ್ಲಿ ಅವಳು ಹಾರಿಸಿದ ಮೊದಲ ಗುಂಡು. ಸ್ಫೋಟವಾದ ಬಳಿಕ ಒಂದೆರಡು ಕ್ಷಣಗಳವರೆಗೆ ತಗಡಿನ ಛಾವಣಿಯ ಮೇಲೆ ಬೀಳುತ್ತಿದ್ದ ಸೋನೆ ಮಳೆಯ ಸದ್ದಲ್ಲದೆ ಬೇರೇನೂ ಅವಳಿಗೆ ಕೇಳಿಸಲಿಲ್ಲ. ಆಮೇಲೆ ಸಿಮೆಂಟ್ ನೆಲದ ಮೇಲೆ ಲೋಹದ ವಸ್ತುವೇನೋ ಬಿದ್ದ ಸದ್ದು, ಅನಂತರ ಹಿತವಾದ ಆದರೆ ತೀರಾ ಬಳಲಿದ ಮೆಲುಧ್ವನಿಯಲ್ಲಿ "ಅಯ್ಯೋ, ಅಮ್ಮಾ..." ಎಂಬ ಶಬ್ದ ಕೇಳಿಸಿತು. ಬೆಳಗ್ಗೆ ಮನೆಯ ಮುಂದೆ ಅವನು ಸತ್ತು ಬಿದ್ದಿದ್ದು ಕಂಡಿತು. ಅವನ ಮೂಗು ಛಿದ್ರ ಛಿದ್ರವಾಗಿತ್ತು. ಆತ ಬಣ್ಣ ಬಣ್ಣದ ಪಟ್ಟೆಯ ಫ್ಲಾನೆಲ್ ಅಂಗಿ, ಸಾಧಾರಣ ಪ್ಯಾಂಟ್ಸ್ ತೊಟ್ಟಿದ್ದ. ಬೆಲ್ಟ್ ಬದಲು ಒಂದು ಹಗ್ಗವನ್ನು ಕಟ್ಟಿದ್ದ. ಬರಿಗಾಲು. ಪಟ್ಟಣದಲ್ಲಿ ಯಾರಿಗೂ ಅವನು ಯಾರೆಂದು ಗೊತ್ತಿರಲಿಲ್ಲ.

"ಹಾಗಾದ್ರೆ ಅವನ ಹೆಸರು ಕಾರ್ಲೋಸ್ ಸೇಂತೇನೋ" ಎಂದು ಗುಣುಗುಣಿಸಿದ ಪಾದ್ರಿ, ಬರೆಯುವುದನ್ನು ಮುಗಿಸುತ್ತಾ.

"ಸೇಂತೇನೋ ಅಯಾಲ" ಎಂದಳು ಹೆಂಗಸು. "ಅವನು ನನ್ನ ಒಬ್ಬನೇ ಮಗ."

ಪಾದ್ರಿ ಮತ್ತೆ ಬೀರುವಿನ ಬಳಿಗೆ ಹೋದ. ಅದರ ಬಾಗಿಲ ಒಳ ಭಾಗದಲ್ಲಿ ತುಕ್ಕು ಹಿಡಿದ ಎರಡು ಬೀಗದ ಕೈಗಳನ್ನು ನೇತುಹಾಕಿದ್ದರು. ಅವು ಸಂತ ಪೀಟರನ ಬೀಗದ ಕೈಗಳಾಗಿರಬೇಕೆಂದು (ಸ್ವರ್ಗ ದ್ವಾರದ ಬೀಗದ ಕೈಗಳು ಸಂತ ಪೀಟರನ ವಶದಲ್ಲಿವೆ ಎಂಬುದು ಕ್ರೈಸ್ತರ ನಂಬಿಕೆ) ಹುಡುಗಿ ಭಾವಿಸಿದಳು. ಹುಡುಗಿಯಾಗಿದ್ದಾಗ ಅವಳ ತಾಯಿಯೂ ಹಾಗೇ ಯೋಚಿಸಿದ್ದಳು. ಯಾಕೆ, ಸ್ವತಃ ಪಾದ್ರಿಯೇ ಒಂದು ಕಾಲದಲ್ಲಿ ಹಾಗೇ ಊಹಿಸಿದ್ದಿರಬೇಕು. ಪಾದ್ರಿ ಅವನ್ನು ತೆಗೆದುಕೊಂಡು, ಕಟಾಂಜನದ ಮೇಲೆ ಇರಿಸಿದ್ದ ತೆರೆದ ಟಿಪ್ಪಣಿ ಪುಸ್ತಕದ ಮೇಲಿಟ್ಟು ತಾನು ಆಗಷ್ಟೇ ಬರೆದಿದ್ದ ಸ್ಥಳದಲ್ಲಿ ತೋರುಬೆರಳು ಇಡುತ್ತಾ ಹೆಂಗಸಿನ ಕಡೆ ನೋಡಿ ಹೇಳಿದ:

"ಇಲ್ಲಿ ಸಹಿ ಮಾಡು."

ಕೈಚೀಲವನ್ನು ಕಂಕುಳಲ್ಲಿಟ್ಟುಕೊಂಡು ಹೆಂಗಸು



ತನ್ನ ಹೆಸರನ್ನು ಗೀಚಿದಳು. ಹುಡುಗಿ ಹೂವುಗಳನ್ನು ಎತ್ತಿಕೊಂಡು ಕಾಲೆಳೆಯುತ್ತಾ ಕಟಾಂಜನದ ಬಳಿಗೆ ಬಂದು ತನ್ನ ತಾಯಿಯನ್ನೇ ತದೇಕಚಿತ್ತದಿಂದ ನೋಡಿದಳು.

ಪಾದ್ರಿ ನಿಟ್ಟುಸಿರಿಟ್ಟ.

"ಅವನನ್ನು ಸರಿಯಾದ ದಾರಿಯಲ್ಲಿ ತರೋದಕ್ಕೆ ನೀನೆಂದೂ ಪ್ರಯತ್ನ ಮಾಡಲಿಲ್ಲವೆ ?"

ಸಹಿ ಹಾಕಿದ್ದು ಮುಗಿಸಿದ ಮೇಲೆ ಹೆಂಗಸು ಉತ್ತರಿಸಿದಳು:

"ಅವನು ಬಹಳ ಒಳ್ಳೆ ಮನುಷ್ಯನಾಗಿದ್ದ."

ಪಾದ್ರಿ ಮೊದಲು ಹೆಂಗಸನ್ನೂ ಅನಂತರ ಹುಡುಗಿಯನ್ನೂ ನಿಟ್ಟಿಸಿದ. ಅವರು ಅಳಲು ಪ್ರಾರಂಭಿಸಿಲ್ಲವೆಂದು ಮನವರಿಕೆಯಾಗಿ ಪಾದ್ರಿಯಲ್ಲಿ ಒಂದು ಬಗೆಯ ಸಾತ್ವಿಕ ಆಶ್ಚರ್ಯ ತುಂಬಿತು. ಹೆಂಗಸು ಅದೇ ಧ್ವನಿಯಲ್ಲಿ ಮುಂದುವರಿಸಿದಳು:

"ತಿನ್ನಲು ಗತಿಯಿಲ್ಲದವರಿಂದ ಯಾವಾಗಲೂ ಏನನ್ನೂ ಕದಿಯಬೇಡ ಅಂತ ಅವನಿಗೆ ನಾನು ಹೇಳಿದ್ದೆ. ಅವನು ನನ್ನ ಮಾತನ್ನು ಮನ್ನಿಸಿದ್ದ. ಬೇರೆ ವಿಷಯ ಹೇಳಬೇಕು ಅಂದರೆ, ಅವನು ಹಿಂದೆ ಬಾಕ್ಸಿಂಗ್ ಆಡುತ್ತಿದ್ದ ಕಾಲದಲ್ಲಿ ಚೆನ್ನಾಗಿ ಹೊಡಿಸಿಕೊಂಡು ಬಂದು ಸುಸ್ತಾಗಿ ಮೂರು ದಿನ ಹಾಸಿಗೆ ಹಿಡೀತಿದ್ದ."

"ಅವನ ಹಲ್ಲುಗಳನ್ನೆಲ್ಲಾ ಕೀಳಿಸಬೇಕಾಯ್ತು" ಎಂದು ನಡುವೆ ಬಾಯಿ ಹಾಕಿದಳು ಹುಡುಗಿ.

ಅದನ್ನು ಅನುಮೋದಿಸುತ್ತ ಹೆಂಗಸೆಂದಳು:

"ಹೌದು ಹಾಗಾಯ್ತು. ಆ ದಿನಗಳಲ್ಲಿ ನಾನು ಬಾಯಲ್ಲಿಟ್ಟುಕೊಳ್ಳುತ್ತಿದ್ದ ಪ್ರತಿ ತುತ್ತೂ ನನ್ನ ಮಗ ಶನಿವಾರ ರಾತ್ರಿಗಳಲ್ಲಿ ತಿನ್ನುತ್ತಿದ್ದ ಹೊಡೆತಗಳ ರುಚಿಯನ್ನು ನೆನಪಿಗೆ ತರುತ್ತಿತ್ತು."

"ದೈವಚಿತ್ತ ಊಹೆಗೆ ನಿಲುಕದ್ದು," ಎಂದ ಪಾದ್ರಿ.

ಆದರೆ ಆ ಮಾತನ್ನು ಆತ ದೃಢ ವಿಶ್ವಾಸದಿಂದ ಹೇಳಲಿಲ್ಲ. ಅದಕ್ಕೆ ಒಂದು ಕಾರಣವೆಂದರೆ ಅನುಭವ ಅವನನ್ನು ಸಂದೇಹವಾದಿಯಾಗಿಸಿತ್ತು. ಇನ್ನೊಂದು ಕಾರಣ ಸೆಖೆ. ಸೂರ್ಯಾಘಾತದಿಂದ ತಪ್ಪಿಸಿಕೊಳ್ಳಲು ತಲೆಯ ಮೇಲೆ ಏನಾದರೂ ಹಾಕಿಕೊಂಡು ಹೋಗ ಬೇಕೆಂದು ಅವರಿಗೆ ಅವನು ಸಲಹೆ ಕೊಟ್ಟ. ಬಳಿಕ ಆಕಳಿಸುತ್ತಾ, ಸಂಪೂರ್ಣವಾಗಿ ನಿದ್ದೆಯ ಭಾರದಿಂದ ತೂಗುತ್ತಿದ್ದ ಆತ, ಕಾರ್ಲೋಸ್ ಸೇಂತೇನೋ ಗೋರಿಯನ್ನು ಹುಡುಕುವುದು ಹೇಗೆಂದು ಸೂಚನೆ ನೀಡಿದ. ಅಲ್ಲದೆ, ಅವರು ಮರಳಿ ಬಂದಾಗ ಬಾಗಿಲು ತಟ್ಟಬೇಕಾಗಿಲ್ಲ; ಬೀಗದ ಕೈಯನ್ನು ಬಾಗಿಲ ಕೆಳಗೆ ತೂರಿಸಬೇಕು; ಅವರಿಗೆ ಸಾಧ್ಯವಾದರೆ ಇಗರ್ಜಿಗೆ ಕಾಣಿಕೆ ಸಲ್ಲಿಸಬಹುದು ಎಂದೂ ತಿಳಿಸಿದ. ಹೆಂಗಸು ಅವನ ಸೂಚನೆಗಳನ್ನೆಲ್ಲ ತದೇಕಚಿತ್ತಳಾಗಿ ಕೇಳಿದಳು. ಆದರೆ ನಸುನಗದೆ ಅವನಿಗೆ ಧನ್ಯವಾದ ಅರ್ಪಿಸಿದಳು.

ಅವರು ಹೊರ ಹೋಗುವಂತೆ ಪಾದ್ರಿ ಮುಂಬಾಗಿಲನ್ನು ತೆರೆಯುವುದಕ್ಕೆ ಮೊದಲೇ, ಅದರ ತೂತುಕಿಂಡಿಯ ಮೇಲೆ ಮೂಗನ್ನು ಒತ್ತಿ ಯಾರೋ ಒಳಗಡೆ ನೋಡುತ್ತಿರುವುದು ಅವನ ಗಮನಕ್ಕೆ ಬಂತು. ಹೊರಗಡೆ ಮಕ್ಕಳ ಗುಂಪೊಂದು ಇತ್ತು. ಬಾಗಿಲನ್ನು ಪೂರ್ತಿ ತೆರೆದಾಗ ಮಕ್ಕಳು ಚದುರಿದರು. ಸಾಮಾನ್ಯವಾಗಿ ಅಷ್ಟು ಹೊತ್ತಿನಲ್ಲಿ ರಸ್ತೆಯಲ್ಲಿ ಯಾರೂ ಇರುತ್ತಿರಲಿಲ್ಲ. ಈಗ ಮಕ್ಕಳಷ್ಟೇ ಅಲ್ಲ. ಬಾದಾಮಿ ಮರಗಳ ಕೆಳಗೆ ಗುಂಪು ಗುಂಪಾಗಿ ಜನ ಜಮಾಯಿಸಿದ್ದರು. ಧಗೆಯಲ್ಲಿ ದುಮುದುಮಿಸುತ್ತಿದ್ದ ರಸ್ತೆಯನ್ನು ಉದ್ದಕ್ಕೂ ನೋಡಿ ಪಾದ್ರಿ ಅರ್ಥಮಾಡಿ ಕೊಂಡ. ಆತ ಮತ್ತೆ ಮೆಲ್ಲನೆ ಬಾಗಿಲು ಮುಚ್ಚಿದ.

"ಒಂದು ನಿಮಿಷ ತಾಳಿ" ಎಂದು ಹೆಂಗಸಿನ ಕಡೆ ನೋಡದೆಯೇ ಅವನೆಂದ.

ಅವನ ಸೋದರಿ ಒಳಬಾಗಿಲ ಬಳಿ ಕಾಣಿಸಿ ಕೊಂಡಳು. ಆಕೆ ತನ್ನ ರಾತ್ರಿಯ ನಿಲುವಂಗಿಯ ಮೇಲೆ ಕಪ್ಪು ಮೇಲಂಗಿಯನ್ನು ತೊಟ್ಟಿದ್ದಳು. ಅವಳ ತಲೆಗೂದಲು ಭುಜದ ಮೇಲೆ ಇಳಿದಿತ್ತು. ಅವಳು ಮೌನವಾಗಿ ಪಾದ್ರಿಯನ್ನು ನೋಡಿದಳು.

"ಏನದು ?" ಪಾದ್ರಿ ಕೇಳಿದ.

"ಜನಗಳು ನೋಡಿಬಿಟ್ಟಿದ್ದಾರೆ," ಎಂದು ಗೊಣಗಿದಳು ಅವನ ಸೋದರಿ.

"ನೀವು ಹಿಂದಿನ ಬಾಗಿಲ ಮುಖಾಂತರ ಹೊರಗೆ ಹೋಗೋದು ವಾಸಿ," ಎಂದ ಪಾದ್ರಿ.

"ಅಲ್ಲೂ ಅದೇ ಕಥೆ: ಎಲ್ಲರೂ ಕಿಟಿಕಿಗಳ ಬಳಿ ನಿಂತು ಇಣುಕಿ ನೋಡ್ತಿದ್ದಾರೆ" ಎಂದಳು ಸೋದರಿ.

ಹೆಂಗಸಿಗೆ ಅಲ್ಲಿಯವರೆಗೂ ಅದು ಅರ್ಥ ವಾಗಿರಲಿಲ್ಲ ಎನ್ನುವಂತೆ ತೋರಿತು. ತೂತುಕಿಂಡಿಯ ಮೂಲಕ ಅವಳು ರಸ್ತೆಯನ್ನು ನೋಡಲು ಪ್ರಯತ್ನಿಸಿದಳು. ಅನಂತರ ಅವಳು ಹುಡುಗಿಯಿಂದ ಹೂವಿನ ಗುಚ್ಛವನ್ನೂ ಇಸಿದುಕೊಂಡು ಬಾಗಿಲ ಕಡೆಗೆ ಹೊರಟಳು. ಹುಡುಗಿ ಅವಳನ್ನು ಅನುಸರಿಸಿದಳು.

"ಬಿಸಿಲು ಇಳಿಯುವವರೆಗೂ ತಡೀರಿ" ಎಂದ ಪಾದ್ರಿ.

"ಬಿಸಿಲಲ್ಲಿ ನೀವು ಕರಗಿ ಹೋಗ್ತೀರಿ; ನಿಲ್ಲಿ ಛತ್ರಿ ಕೊಡ್ತೇನೆ" ಎಂದಳು ಪಾದ್ರಿಯ ಸೋದರಿ, ತನ್ನ ಜಾಗದಿಂದ ಕದಲದೆ.

"ಉಪಕಾರವಾಯ್ತು ; ಪರವಾಗಿಲ್ಲ ಹೀಗೇ ಹೋಗ್ತೇವೆ" ಎಂದು ಉತ್ತರಿಸಿದಳು ಹೆಂಗಸು. ಅವಳು ಹುಡುಗಿಯ ಕೈ ಹಿಡಿದುಕೊಂಡು ಬೀದಿಗೆ ಇಳಿದಳು.

ಅನುವಾದ : **ಈಶ್ವರಚಂದ್ರ**

ನಾನು ಓದಿದ ಪುಸ್ತಕ

ಕೃತಿಯ ಹೆಸರು : ಬಾಳೆಯ ಕಂಬ (ಕಥಾ ಸಂಕಲನ)
ಲೇಖಕರು : ಡಾ॥ ಬಸು ಬೇವಿನಗಿಡದ
ಪ್ರಕಾಶಕರು : ಚೈತ್ರ ಪ್ರಕಾಶನ, ಬನಶಂಕರಿ ನಗರ ಕೆಲಗೇರಿ ರಸ್ತೆ ಧಾರವಾಡ – ೫೮೦ ೦೦೮
ಪುಟಗಳು : ೧೩೪
ಬೆಲೆ : ರೂ. ೧೦೦/–




# ಗ್ರಾಮೀಣ ಬದುಕನ್ನು ಚಿತ್ರಿಸುವ 'ಬಾಳೆಯ ಕಂಬ'

ಗ್ರಾಮೀಣ ಬದುಕು ಕಳೆದುಹೋಗುವ ಆತಂಕವನ್ನು ಜಾಗತೀಕರಣ ಮತ್ತು ಬಂಡವಾಳಶಾಹಿ ಜಗತ್ತಿನಲ್ಲಿ ಎದುರಿಸುತ್ತಿರುವಾಗಲೇ ನಮ್ಮ ಗ್ರಾಮಗಳು ಜೀವಂತಿಕೆಗಾಗಿ ಸೆಣಸುತ್ತಿರುವ ರೀತಿ ಮತ್ತು ಅಲ್ಲಿನ ಹೆಂಗಸರಲ್ಲಿನ ಕೆಚ್ಚುತನ, ತಾಯ್ತನ ಎದ್ದು ಕಾಣುವಂತಹದ್ದು. ಧಾರವಾಡ, ಬೆಳಗಾವಿ ಜಿಲ್ಲೆಗಳ ಗ್ರಾಮಗಳ ಭಾಷೆಯ ಜೊತೆ ಅಲ್ಲಿನ ಜನಜೀವನವನ್ನು ಸರಳವಾಗಿ, ಸತ್ವಯುತವಾಗಿ ಕತೆಗಳಲ್ಲಿ ಹಿಡಿದಿಡುವ ಯತ್ನವನ್ನು ನಮ್ಮ ನಾಡಿನ ಹೆಸರಾಂತ ಕತೆಗಾರರಲ್ಲಿ ಒಬ್ಬರಾದ ಡಾ॥ ಬಸು ಬೇವಿನಗಿಡದ ಮಾಡಿದ್ದಾರೆ. ಮೊಗಳ್ಳಿ ಗಣೇಶ್, ಅಮರೇಶ್ ನುಗಡೋಣಿ ಅವರಂತೆ ಬೇವಿನಗಿಡದ ಕನ್ನಡದ ಮುಖ್ಯವಾಹಿನಿಯ ಕತೆಗಾರರಲ್ಲಿ ಒಬ್ಬರು. ಜಾಗತೀಕರಣಕ್ಕೆ ತುತ್ತಾಗಿರುವ ಹಳ್ಳಿ ಬದುಕಿನ ಪಲ್ಲಟ, ಗ್ರಾಮೀಣ ಮಹಿಳೆಯರು ಜಾಗತೀಕರಣಕ್ಕೆ ಮುಖಾಮುಖಿಯಾಗಿ ಸೆಣೆಸುವ ರೀತಿಯನ್ನು ಅವರ 'ಬಾಳೆಯ ಕಂಬ' ಕಥಾ ಸಂಕಲನದಲ್ಲಿ ಕಾಣಬಹುದು.

'ತಾಯವ್ವ' ಸಂಕಲನದ ನಂತರ ಬಂದಿರುವ 'ಬಾಳೆಯ ಕಂಬ' ಗ್ರಾಮೀಣ ಬದುಕಿನ ಚಿತ್ರಣಗಳನ್ನು ಕಣ್ಮುಂದೆ ತಂದು ನಿಲ್ಲಿಸುತ್ತದೆ. ಕತೆಗಾರ ಮಾಸ್ತಿ ಅವರ ತಣ್ಣನೆಯ ಶೈಲಿಯ ಮೂಲಕ ಮಾನವೀಯತೆಯನ್ನು ಕಟ್ಟುವ ಕಥನ ಕಲೆ ಬಸು ಅವರಿಗೆ ಒಲಿದಿದೆ. 'ಬಾಳೆಯ ಕಂಬ' ಕಥಾ ಸಂಕಲನದಲ್ಲಿ ಗ್ರಾಮೀಣ ಮಹಿಳೆಯರಲ್ಲಿನ ತಾಯ್ತನ, ಬದುಕು ಕಟ್ಟಲು ಅವರು ಹೆಣಗುವ ರೀತಿ, ತಣ್ಣನೆಯ ಪ್ರತಿಭಟನೆಯನ್ನು ಕತೆಗಳಲ್ಲಿ ದಾಖಲಿಸುವ ರೀತಿ ಅನನ್ಯವಾದುದು. ಗ್ರಾಮಗಳಲ್ಲಿನ ಭೂಮಿಯ ಪ್ರಶ್ನೆ ಕಥೆಗಾರರನ್ನು ಕಾಡಿರುವ ಬಗೆಯೇ ನನ್ನನ್ನು ಬಹುವಾಗಿ ಕಾಡಿದ್ದು. ಜಾಗತೀಕರಣ ಗ್ರಾಮಗಳ ಜೊತೆ, ಗ್ರಾಮ ತೊರೆಯುವ ಮನಸ್ಸುಗಳನ್ನು ಆಕ್ರಮಿಸುವ ರೀತಿ ಮತ್ತು ಬದುಕಿನ ಪಲ್ಲಟಗಳನ್ನು ಬಹುತೇಕ ಅವರ ಕತೆಗಳಲ್ಲಿ ಕಾಣಬಹುದು. ಅಭಿವೃದ್ಧಿಯ ಮಾದರಿಗಳು ರೈತರ ಮನಸ್ಸನ್ನು ಆಕ್ರಮಿಸುವ ಬಗೆ ಸಹ ಕತೆಗಳಲ್ಲಿ ದಾಖಲಾಗಿದೆ. ಗ್ರಾಮ ಭಾರತ ಜಾಗತೀಕರಣಕ್ಕೆ ಮುಖಾಮುಖಿಯಾಗುತ್ತಲೇ ಅದರ ಸವಾಲುಗಳನ್ನು ಎದುರಿಸಲು ಸಜ್ಜಾಗುತ್ತಿದೆ ಎಂಬ ಧ್ವನಿಯೂ ಇದೆ. ಬದುಕಿನ ಸೋಲುಗಳ ನಡುವೆಯೂ ಗ್ರಾಮಗಳಲ್ಲಿನ ಸ್ತ್ರೀಯರು ಬದುಕಲು ಬಯಸುವ, ಭೂಮಿಯನ್ನು ಉಳಿಸಿಕೊಳ್ಳಲು ಮಾಡುವ ಪ್ರಯತ್ನಗಳು ಓದುಗರನ್ನು ಚಿಂತನೆಗೆ ಹಚ್ಚುತ್ತವೆ.

'ಬಾಳೆಯ ಕಂಬ' ಕತೆಯಲ್ಲಿ ಗ್ರಾಮೀಣ ಹೆಣ್ಣು 'ಕಮಲ'ಳ ವರ್ಣನೆ ಮತ್ತು ಅತ್ತೆ–ಸೊಸೆ ನಡುವಿನ ಭಿನ್ನಮತ, ಅಣ್ಣತಮ್ಮಂದಿರ ನಡುವೆ ಜಗಳ ಬಂದು ಹೊಲ ಆಸ್ತಿಯನ್ನು ಪಾಲು ಮಾಡಿಕೊಳ್ಳುವ ವಿವರಗಳು ಗ್ರಾಮೀಣ ಭಾಷೆಯಲ್ಲಿ ಸಶಕ್ತವಾಗಿ ಬಂದಿವೆ. ಸ್ತ್ರೀ ಕೇಂದ್ರಿತ ಕತೆ ಇದು. ಕೊನೆಯಲ್ಲಿ ಅತ್ತೆ–ಸೊಸೆ ಒಂದಾಗುವುದು ಗ್ರಾಮೀಣರ ಬದುಕಿನ ಭಾಗದಂತಿದೆ. 'ಅಯ್ಯ ಶಿವನ, ಇದ ಈಗ ಮಲಕೊಂಡಿದ್ನಿ. ಎಷ್ಟ ಲಗೂ ಬೆಳಕಾತ! ಎಂದು ಕೊಂಡಳು' ಎಂದು ಆರಂಭವಾಗುವ ಕತೆ...ಆಕೆಯ ಪ್ರತಿಭಟನೆಯನ್ನು ಹೀಗೆ ದಾಖಲಿಸುತ್ತದೆ; ಸುಮ್ಮನೆ ನೋಡುತ್ತಿದ್ದ ಕಮಲವ್ವ ಏನು ತಿಳಿಯಿತೋ ಏನೊ ನಾಗಂದಿಗೆಯ ಮೇಲೆ ಕೈಹಾಕಿ ಕುಡುಗೋಲು ತೆಗೆದುಕೊಂಡು ಎಮ್ಮೆಯ ಹತ್ತಿರ ಬಂದಳು. 'ನನ್ನ ಎಮ್ಮೀನ ಯಾರಾದ್ರೂ ಮುಟ್ಟಿದ್ರ ಅವರ ಕೈ ಕತ್ತರಿಸ್ತೀನಿ' ಎಂದು ಗಂಡನ ಮತ್ತು ದಲ್ಲಾಳಿಯ ಮುಖಗಳನ್ನು ತಾತ್ಸಾರದಿಂದ ನೋಡಿದಳು. ಜೀವನಾಧಾರವಾಗಿರುವ ಎಮ್ಮೆಯನ್ನು ಮಾರಲು ಗಂಡ ಪ್ರಯತ್ನಿಸಿದಾಗ ಆಕೆ ತಿರುಗಿ ಬೀಳುವ ಸನ್ನಿವೇಶವೇ ಗ್ರಾಮೀಣ ಮಹಿಳೆಯರ ಸಾತ್ವಿಕ ಸಿಟ್ಟಿಗೆ ರೂಪಕವಾಗಿ ನಿಲ್ಲುತ್ತದೆ. ಈ ಕತೆಯಲ್ಲಿ ಸಹ ಭೂಮಿಯನ್ನು ಪಾಲು ಮಾಡಿಕೊಳ್ಳುವ ಚಿತ್ರಣ ಗ್ರಾಮೀಣರ ಬದುಕು ಸಡಿಲಾಗುತ್ತಿರುವುದನ್ನು, ಅವಿಭಕ್ತ ಕುಟುಂಬಗಳು ಹೋಳಾಗುತ್ತಿರುವುದನ್ನು ಹೇಳುತ್ತವೆ.

'ಮಿಕ್ಕು ಮೀರಿ ಹೋಹನ...' ಕತೆ ಜಮೀನ್ದಾರಿ ಊರಗೌಡ ಅಡಿವೆಪ್ಪನ ಕ್ರೌರ್ಯದ ಚಿತ್ರಣವಿದೆ. ಭಯಾನಕ ಕನಸಿನೊಂದಿಗೆ ಕತೆ ಆರಂಭವಾಗುತ್ತದೆ. ಕೊಲೆಗೈಯಲು ಬರುವ ಕನಸು, ತಪ್ಪಿಸಿಕೊಳ್ಳಲು ಹೋಗುವ ಮಲಕಾಜಿ ಬಾವಿಗೆ ಬಿದ್ದಂತೆ, ಗೌಡ ಬೀಸಿದ ಕೊಡಲಿ ತಪ್ಪಿ ಪಕ್ಕವೇ ಬಿದ್ದಂತೆ ... ಹೀಗೆ ಪ್ರಾರಂಭವಾಗುವ ಕತೆ. ಮಲಕ್ಯಾನ ಅಪ್ಪ ಊರಗೌಡ ಬಳಿ ಹಿಂಬಾಲಕನಾಗಿದ್ದವ. ತಾಯಿಯನ್ನು ಕಾಡುತ್ತಿದ್ದ ರೀತಿ ಗ್ರಾಮೀಣ ಹೆಣ್ಣು ಮಕ್ಕಳ ಶೋಷಣೆಯ, ದೌರ್ಜನ್ಯದ ತೀವ್ರತೆಯನ್ನು ಹಿಡಿದಿಡುತ್ತದೆ. ಆಕೆಯ ಶೀಲವನ್ನೇ ಶಂಕಿಸಿದ ಗಂಡನಿಗೆ ಗುಂಡಕಲ್ಲಿನಿಂದ ಮೊಣಕಾಲಿಗೆ ಹೊಡೆವ ವಿವರವೂ ಇದೆ. ಆದರೆ ಆಕೆ ಬಾವಿಗೆ ಜಿಗಿದು ಆತ್ಮಹತ್ಯೆಗೆ ಶರಣಾಗುವ ದುರಂತವೂ ಇದೆ. ದೊಡ್ಡವ್ವನ ಬಳಿ ಬೆಳೆವ ಮಲಕಾಜಿ ಮುಂದೆ ಕಾಲಚಕ್ರದಲ್ಲಿ ನೌಕರಿ ಹಿಡಿಯುವುದು, ಊರ ಗೌಡ ಅಡಿವೆಪ್ಪ ಕೊಲೆ ಪ್ರಕರಣವೊಂದರಲ್ಲಿ ಜೈಲು ಸೇರುವುದು, ಆತನ ಭೂಮಿಯನ್ನು ಮಲಕಾಜಿ ಬೇರೆಯವರ ಮೂಲಕ ಹಿಡಿದು ಅದನ್ನು ತನ್ನದನ್ನಾಗಿಸಿ ಕೊಳ್ಳುವ ಪ್ರಕ್ರಿಯೆ ಹಾಗೂ ಅಡಿವೆಪ್ಪನ ಮಗಳು ಕಮಲಳನ್ನು ಪ್ರೀತಿಸಿ ತನ್ನವಳನ್ನಾಗಿಸಿಕೊಳ್ಳುವ ಮೂಲಕ ಕತೆ ಮುಕ್ತಾಯವಾಗುತ್ತದೆ. ಹೊಸ ಆಶಯವನ್ನು ಕತೆಗಾರ ಇಲ್ಲಿ ಹೇಳುವ ಮೂಲಕ ಸಂಘರ್ಷವೊಂದನ್ನು ವಾಸ್ತವ ನೆಲೆಯಲ್ಲಿ ದಾಖಲಿಸುತ್ತಾರೆ.

ಹೆಣ್ಣಿನ ತಾಯ್ತನದ ಚಿತ್ರಣಕ್ಕೆ ಸಾಕ್ಷಿಯಾಗಿ ನಿಲ್ಲುವ ಮತ್ತು ಮನ ಕಲಕುವ ಕತೆ 'ನುಡಿಯಲಾರದ ಗಿಲಗಿಂಚಿ'. ಯಮನವ್ವ ಕಥಾನಾಯಕಿ. ಕಳೆದು ಹೋದ ತಮ್ಮನಿಗಾಗಿ ಆಕೆ ಹುಡುಕುವ ಪರಿ ಓದುಗನನ್ನು ಒಂದು ಕ್ಷಣ ಕಲಕಿ ಬಿಡುತ್ತದೆ. ತೀರಾ ಹತ್ತಿರದವರು ಇದ್ದಕ್ಕಿದ್ದಂತೆ ಕಾಣೆಯಾದರೆ ಅದರ ಯಾತನೆ ಅವರಿಗೇ ಗೊತ್ತು. ಮಾನಸಿಕ ಆಘಾತವನ್ನು ಗಾಢವಾಗಿ ವಿವರಿಸುವ ಕತೆ ಇದು. ಗಂಡ ಮತ್ತೊಬ್ಬಳನ್ನು ಮದುವೆಯಾದಾಗಲೂ ಯಮನವ್ವ ತೋರುವ ಸಹನೆ, ಸಾಮಾಜಿಕ ಬದುಕಿನಲ್ಲಿ ಆಕೆ ತೋರುವ ದಿಟ್ಟತನ, ಬಸ್‌ನಲ್ಲಿ ಆಕೆ ಯಾರೋ ಕೈ ತಾಗಿಸಿದ್ದಕ್ಕೆ ತೋರುವ ಪ್ರತಿಭಟನೆ

**ನಾಗರಾಜ್ ಹರಪನಹಳ್ಳಿ**

ಎಲ್ಲವೂ ಪರಿಣಾಮಕಾರಿ. ಯಮನವ್ವಳನ್ನು ಮಾನವೀಯವಾಗಿ ಕಾಣುವ ರಂಗಣ್ಣ ಮಾಸ್ತರ ಮತ್ತು ಮನಗುಂಡಿಯ ಬಸವಲಿಂಗ ಸ್ವಾಮಿ ಸಹ ಸಮಾಜದಲ್ಲಿನ ಮಾನವೀಯ ಮುಖಗಳಾಗಿ ನಿಲ್ಲುವುದು ಕತೆಗಾರನ ದೃಷ್ಟಿಕೋನವನ್ನು ಓದುಗನಿಗೆ ಪರಿಚಯಿಸುತ್ತವೆ.

ಭೂಮಿ ಪ್ರಶ್ನೆ ಕತೆಗಾರನನ್ನು ಕಾಡಿದ ವಸ್ತು. 'ಮರದೊಳಗಿನ ಕಿಚ್ಚು' ಕತೆ ಗಮನಿಸಿ. ಗ್ರಾಮದಿಂದ ಬಂದ ಡಾ॥ ಮಡಿವಾಳಪ್ಪ ಹಂಚಿನಮನಿ ಹುಬ್ಬಳ್ಳಿಯಲ್ಲಿ ನೆಲೆ ನಿಂತಿದ್ದಾರೆ. ಗ್ರಾಮದಲ್ಲಿನ ಆಸ್ತಿಯ ಪಾಲನ್ನು ಪಡೆಯುವ ಹಂಬಲ ಹಂಚಿನಾಳರ ಪತ್ನಿ ಕಮಲ ಅವರದ್ದು. ಗ್ರಾಮ–ನಗರ ಮನಸ್ಸಿನ ಹೊಯ್ದಾಟ, ಚೇರ್‌ಮನ್ ಹನುಮಂತಪ್ಪನ ದಬ್ಬಾಳಿಕೆ, ಕೊಲೆಪಾತಕತನ, ಹೊಲವನ್ನು ಮಾರುವ ಹಂತದಲ್ಲಿ ಮಲ ತಮ್ಮನಿಗೆ ಬಿಟ್ಟುಕೊಡಬೇಕೆಂದು ಬರುವ ಮಾತು. ಇದನ್ನು ನಿರಾಕರಿಸುವಾಗಲೇ ಮಗ ನವೀನ ಕಾಣೆಯಾಗುವುದು ಕತೆಯ ಅಚಾನಕ್ ತಿರುವಾಗಿದೆ. ಕರುಳ ಕುಡಿ ಕಾಣೆಯಾಯಿತು ಎಂದು ಕೊಲೆಯನ್ನು ಸೂಚ್ಯವಾಗಿ ಹೇಳುವ ಕತೆಗಾರನನ್ನು ಗ್ರಾಮೀಣ ಪರಿಸರದ ದ್ವೇಷದ ಬಗ್ಗೆ ಸಹ ದಾಖಲಿಸುತ್ತಾರೆ. 'ಆಗಂತುಕ' ಕತೆ ಸಹ ಅಜ್ಜಿಯೊಬ್ಬಳ ಮೂಲಕ ಹೆಣ್ಣಿನ ಗಟ್ಟಿತನವನ್ನು ಹೇಳುವ ವಿಶಿಷ್ಟ ಕತೆ. 'ಗಂಡಸರಿಗೆ ಒಟ್ಟ ಹೆಣ್ಣ ಕಾಡತೈತಿ ಇಲ್ಲಾ ಹಣ ಕಾಡತೈತಿ' ಹೀಗೆ ಬದುಕಿನ ತಾತ್ವಿಕತೆಯನ್ನು ಇಲ್ಲಿ ಕಾಣಬಹುದು. ಇಲ್ಲಿ ಬರುವ ಯಲ್ಲಮ್ಮ ಗಟ್ಟಿ ಹೆಣ್ಣುಗಳ ಸಂಕೇತವಾಗುತ್ತಾಳೆ.

ಜಾಗತೀಕರಣ ಬದುಕನ್ನು ಕಸಿದುಕೊಳ್ಳುವ ಚಿತ್ರ 'ಬೆಳಕಿನ ಚಿಗುರ ಚಿವುಟಿ' ಕತೆಯಲ್ಲಿದೆ. ರಸ್ತೆ ಅಗಲೀಕರಣದ ನೆಪದಲ್ಲಿ ರೈತರ ಭೂಮಿಯನ್ನು ಕಸಿದುಕೊಳ್ಳುವ ಕತೆ ಇದು. ಜನಪ್ರತಿನಿಧಿಯೊಬ್ಬನ ಭಂಡತನ ಮತ್ತು ಆಡುವ ಆಟಗಳು, ಹೂಡುವ ತಂತ್ರಗಳು, ಅಜ್ಜಿಯೋರ್ವಳು ಭೂಮಿ ಬಿಟ್ಟುಕೊಡದೇ ಉಪವಾಸ ಕೂಡುವ ಜಿಗುಟುತನ ಇಲ್ಲಿ ಚಿತ್ರಿತವಾಗಿದೆ. ಗೊಬ್ಬರಗುಂಪಿ ಗ್ರಾಮದಲ್ಲಿ ನಡೆವ ಕತೆ ಹುಬ್ಬಳ್ಳಿ–ರೋಣ ರಸ್ತೆ ಅಭಿವೃದ್ಧಿಗಾಗಿ ರೈತರು ಕೊಳ್ಳುಬಾಕ ಸಂಸ್ಕೃತಿಗೆ ಬಲಿಯಾಗುವ ದಾರುಣ ಕತೆಯಾಗಿದೆ. ಸಾಲೀಮನಿ ಬಸಮ್ಮ ನಮ್ಮ ಗ್ರಾಮ ಹೆಂಗಸರ ಸಾಕ್ಷಿಪ್ರಜ್ಞೆಯಾಗಿ ಬರುತ್ತಾಳೆ. ಆದರೆ ಇಲ್ಲಿ ಸಹ ಕತೆಯ ಕೊನೆಗೆ ಆಕೆಯ ಮೊಮ್ಮಗ ಮಂಜುನಾಥ ಬುಲ್ಡೋಜರ್‌ಗೆ ಸಿಕ್ಕಿ ಸಾವನ್ನಪ್ಪುವ ದುರಂತ ಓದುಗನನ್ನು ಅಲ್ಲಾಡಿಸಿಬಿಡುತ್ತದೆ. ನೆಲದ ನೋವು ಗ್ರಾಮೀಣ ಭಾಷೆಯಲ್ಲಿ ಕತೆಗಾರನ ಶಕ್ತಿಯಾಗಿ ಕಾಣಸಿಗುತ್ತದೆ.

'ಬಾಳೆಯ ಕಂಬ' ಸಂಕಲನದ ಪ್ರಬಲ ಕತೆಗಳಲ್ಲಿ 'ಬಿಸಿಲುಗುದುರೆಯ ಬಿಸುಪು' ಸಹ ಒಂದು. ಇಲ್ಲಿ ಸಹ ಕಥಾನಾಯಕಿ ಹೆಣ್ಣು. ಪಾರ್ವತಿ ಗಂಡ ಕಲ್ಲಪ್ಪನ ಆರೋಪದಲ್ಲೆ ಬೇಸತ್ತು, ಉರಿಯ ಕೊಳ್ಳಿಯನ್ನು ಆತನ ಬಾಯಿಗೆ ಯಟ್ಟಿದ ದಿಟ್ಟೆ. ಪ್ರತಿಭಟನೆಯ ತೀವ್ರತೆ ಅನ್ನಬಹುದಾದ ಘಟನೆ ಈ ಕತೆಯಲ್ಲಿದೆ. ಆದರೆ ಅದೇ ಪಾರ್ವತಿ ಆತ್ಮಹತ್ಯೆಗೆ ಶರಣಾಗುವುದು ಇದೆ. ಗ್ರಾಮಪರಿಸರದಲ್ಲಿ ಸಾವು, ಅದರ ಸುತ್ತ ನಡೆವ ಘಟನೆಗಳು, ಗ್ರಾಮೀಣ ಜನರು ಸಾವು ಸಂಭವಿಸಿದಾಗ ದುಃಖ ತೋರುವ ಬಗೆ... ಸಾಲು ಸಾಲು ವಿವರಗಳು ಇಲ್ಲಿವೆ. ಈ ಸಂಕಲನದಲ್ಲಿ ತುಂಬ ಇಷ್ಟವಾದ ಕತೆಯೂ ಹೌದು. ಕುಣಿ, ಸುಡಗಾಡಗಟ್ಟಿ, ಹಲಗೆ ಬಡಿತ, ವಚನ ಪದ ಹೀಗೆ ನಾನಾ ರೀತಿಯಲ್ಲಿ ಈ ಕತೆ ಹಬ್ಬಿದೆ. ಸಂಬಂಧಗಳು, ತಾಯಿ ಮತ್ತು ಮಗಳ ಪ್ರೀತಿ, ಗಂಡ–ಹೆಂಡತಿ ಪ್ರೀತಿ, ತಾಯಿ ಮಕ್ಕಳ ಪ್ರೀತಿ, ಗಂಡನ ಮನೆ ತೊರೆದು ಬರುವ ಪಾರ್ವತಿ, ದಿಟ್ಟ ಬದುಕು ಎಲ್ಲ ವಿವರಗಳು ಕತೆಗಾರ ಕಥೆ ಹೇಳುವ ಸಶಕ್ತ ಅಭಿವ್ಯಕ್ತಿ ಇಲ್ಲಿದೆ.

ಈ ಕತೆಯಲ್ಲಿನ ಭಾಷಾ ಪ್ರಯೋಗಕ್ಕೆ ಒಂದು ಉದಾಹರಣೆ, ಅವನ ಬೈಗುಳ, ರಂಪಾಟ ಕೇಳಿ ಕೇಳಿ ಸಾಕಾದ ಪಾರ್ವತಿ ಸದ್ದಿಲ್ಲದಂತೆ ಬಾಗಿಲು ತೆರೆದಳು. ಕೈ ಹಿಂದೆ ಏನೊ ಅಡಗಿಸಿಟ್ಟುಕೊಂಡಿದ್ದಳು. 'ನಿಂದ ಸಾಲ ತೀರಿಸಬೇಕೇನೋ ? ನಮ್ಮ ಮಾನ, ಮರ್ಯಾದಿ ಕಳ್ಯಾಕ ಯಾವ ಇದಿಯಾಗಿ ಬಂದಿಯೋ ? ನಾ ಯಾಂವನ ಹಂತೇಲಿ ಹೋಗಿದ್ನಿ ಹೇಳು ? ಬಾ, ತೋರಿಸ ಬಾ' ಎಂದು ಛಾವಣಿ ಹಾರಿ ಹೋಗುವಂತೆ ಕೂಗಿದಳು. ಇಷ್ಟೊತ್ತಿನಲ್ಲಿ ಯಾವುದೋ ದೆವ್ವ ಮಾತನಾಡುತ್ತಿದೆಯೇನೋ ಎಂಬಂತೆ ಕಲ್ಲಪ್ಪ ಧ್ವನಿ ಬಂದತ್ತ ತಿರುಗಿದ. ಹೆಂಡತಿ ನಿಂತಿದ್ದಳು. ಕುದಿಯುತ್ತಿದ್ದ ಅವಳ ರೌದ್ರ ಮುಖ ನೋಡಿಯೆ ಅವನು ಬೆವೆತುಬಿಟ್ಟ. 'ಏನಿಲ್ಲ, ಏನಿಲ್ಲ' ಎಂದು ಅವನು ಅನ್ನುತ್ತಿದ್ದರೂ ಪಾರೋತಿ ಕೈಯಲ್ಲಿ ಹಿಡಿದಿದ್ದ ನಿಗಿನಿಗಿ ಕೆಂಡದ ಕಟ್ಟಿಗೆಯನ್ನು ಅವನ ಬಾಯಲ್ಲಿ ತುರುಕಿದಳು. ಅವನ ಬಾಯಿಯಿಂದ ಮತ್ತೊಂದು ಅರ್ಥ ಹೊತ್ತ ಶಬ್ದ ಬರಲಿಲ್ಲ. ಭಯಾನಕವಾಗಿ ಚೀರುತ್ತ ಅವನು ಹೊರಟುಹೋದ. ಅವತ್ತು ಹೋದ ಕಲ್ಲಪ್ಪ ಮತ್ತೆ ಜಕಬಾಳ ಗ್ರಾಮಕ್ಕೆ ಬಂದರೂ ಪಾರ್ವತಿಗೆ ಕಾಣಿಸಿಕೊಳ್ಳಲಿಲ್ಲ. ಅಣ್ಣನ ಮಗ ಪ್ರಕಾಶನಿಗೆ ಕಂಡಿದ್ದರೂ ಅದನ್ನು ಅತ್ತೆ ಪಾರ್ವತಿಗೆ ಹೇಳುವ ಹೊತ್ತಿಗೆ ಆಕೆ ನೇಣುಹಾಕಿಕೊಂಡಿರುತ್ತಾಳೆ. ಪಾರ್ವತಿ ಸತ್ತ ಮೇಲೆ ಗ್ರಾಮಕ್ಕೆ ಬರುವ ಕಲ್ಲಪ್ಪ ಊರಿನವರಿಗೆ ಮತ್ತೊಂದು ಅಚ್ಚರಿಯಾಗಿ ಕಾಣುತ್ತಾನೆ. ಎಲ್ಲರೂ ಕುಣಿಗೆ ಮಣ್ಣು ಹಾಕಿದ ಮೇಲೆ ಆತನೂ ತನ್ನ ಹಿಡಿಯಿಂದ ಹಿಡಿಮಣ್ಣು ಹಾಕಿದ್ದು ಗದ್ದಲದಲ್ಲಿ ಯಾರಿಗೂ ಕಾಣಿಸಲಿಲ್ಲ ಎಂಬಲ್ಲಿಗೆ ಕಥೆ ಮುಗಿಯುತ್ತದೆ. ಆದರೆ ಈ ಸಂಕಲನದಲ್ಲಿ ಕಾಡುವ ಕತೆಯಾಗಿ ನಮ್ಮಲ್ಲಿ ಉಳಿಯುತ್ತದೆ.

ಶ್ರಮಜೀವಿಗಳನ್ನು ಕತೆಗಾರ ಗಮನಿಸಿರುವ ರೀತಿ ಸಹ ಅದ್ಭುತವಾದುದು. 'ನಡೆಯೊಂದು ಪರಿ' ಕತೆ ಬೆಳೆಯುವ ರೀತಿಯನ್ನು ಗಮನಿಸಿ. ಕಟ್ಟಡ ಕಾರ್ಮಿಕರ ಜೀವನ, ಅವರ ಬದುಕಿನ ಪ್ರೀತಿ, ಹಾಸ್ಯ, ಅಕ್ರಮ ಸಂಬಂಧಗಳು, ಅಶ್ಲೀಲ ಭಾಷೆ ಎಲ್ಲವೂ ಕಥಾನಕದಲ್ಲಿದೆ. ಉಮ್ಮವ್ವ ಮತ್ತು ಆನಂದ ನಡುವಿನ ಸಂಬಂಧ; ಹೊಸ ಮನೆ ಕಟ್ಟಿಸುತ್ತಿರುವ ಕಲ್ಪನಾಳ ಮನದಲ್ಲಿ ಹುಟ್ಟುವ ಪ್ರಶ್ನೆಗಳು ಸಹ ನಗರೀಕರಣ ಬದುಕಿನ ಚಿತ್ರಣವನ್ನು ತೆರೆದಿಡುತ್ತವೆ.

ಈ ಸಂಕಲನದಲ್ಲಿ ನಗರಕೇಂದ್ರಿತ ಕತೆಯಾಗಿ 'ಹರಿವ ಹಾವಿಗಂಜೆ' ಹಾಗೂ 'ಮನ ಕರಗದವರಲ್ಲಿ' ಚಿತ್ರಣವಾಗಿವೆ. ಹರಿವ ಹಾವಿಗಂಜೆ ಕತೆಯಲ್ಲಿ ಗೀತಾ ಎಂಬ ಹುಡುಗಿ ರೇಡಿಯೊ, ಟಿ.ವಿ. ರಿಪೇರಿ ಮಾಡುತ್ತಿದ್ದ ಉದಯನ ಜೊತೆ ಮುಂಬಯಿಗೆ ಓಡಿಹೋಗುವ ಕತೆ ಇದು. ಪ್ರೇಮ ವೈಫಲ್ಯದ ನಂತರ ಆಕೆ ಧಾರವಾಡಕ್ಕೆ ಮರಳಿ ಬಂದು ಯಾವುದೋ ಮೊಬೈಲ್ ಶಾಪ್‌ನಲ್ಲಿ ಕೆಲಸಕ್ಕೆ ಸೇರಿಕೊಳ್ಳುವ ಮತ್ತು ಕಥಾ ನಿರೂಪಕ ಬರೆದ ಪ್ರೇಮ ಪತ್ರವನ್ನು ಮರಳಿ ಕೊಡುವ ಕತೆ ಸೊಗಸಾದ ನೆನಪಾಗಿ ಚಿತ್ರಿತವಾಗಿದೆ. ನಗರ ಬದುಕಿನ ಪಲ್ಲಟವನ್ನು ಹೇಳುತ್ತದೆ. ಮನಕರಗದವರು ಕತೆಯ ಸುಜಾತ ಸಹ ಅಣ್ಣನ ಸಾವಿನಿಂದ ಆಘಾತಕ್ಕೆ ಒಳಗಾದ ಕ್ಷಣದಿಂದ ಕತೆ ಪ್ರಾರಂಭವಾಗುತ್ತದೆ. ನಗರಕೇಂದ್ರಿತ ಕತೆ ಇದು. ಎಂಜಿನಿಯರಿಂಗ್ ಕಲಿತ ಹುಡುಗಿ ಉದ್ಯೋಗಕ್ಕಾಗಿ ಬೆಂಗಳೂರಿನಲ್ಲಿದ್ದಾಗ ಅಂತರ್ಜಾತಿ ಹುಡುಗನೊಂದಿಗೆ ವಿವಾಹವಾಗುವ ಕತೆ ಮತ್ತು ಕುಟುಂಬ ಆಕೆಯನ್ನು ಕಾಣುವ ಬಗೆ ಹಾಗೂ ಕಲಿಯಲು ವಿಫಲವಾದ ಆಕೆಯ ಅಣ್ಣ ಸಾವಿಗೆ ಶರಣಾಗುವ ದುರಂತ ಅಂತ್ಯದ ಕತೆ ಇದು.

ಗ್ರಾಮ ನಗರಗಳ ನಡುವಿನ ಕೊಂಡಿಯಾಗಿ ಚಿತ್ರಿತವಾಗುವ, ನಗರ ಮತ್ತು ಗ್ರಾಮಗಳ ಸಂಕಟವನ್ನು ವಿವರಿಸುವ ಕತೆ 'ಚುರುಮುರಿಯ ಪರಿಮಳ.' ಈ ಕತೆಯ ನಾಯಕಿ ಹನುಮವ್ವ ಬದುಕಿನ ಹಿಡಿ ಪ್ರೀತಿಗೆ ಹೋರಾಡುವುದು, ಬಸ್ ಕಂಡಕ್ಟರ್ ಸುರೇಶ್ ಅಜ್ಜಿ ಹನುಮವ್ವಳ ಬಗ್ಗೆ ತೋರುವ ವಾತ್ಸಲ್ಯ, ಹನುಮಜ್ಜಿ ಮಗ ಚಂದ್ರು ಗ್ರಾಮದಲ್ಲಿನ ಹೊಲ ಮಾರಿ ಪ್ಯಾಟ್ಯಾಗ ಅಂಗಡಿ ಮಾಡೋಣ ಅನ್ನುವ ದುರಾಸೆಯ ಮಾತು, ಹೊರಳುದಾರಿಯಲ್ಲಿರುವ ಯುವ ಜನಾಂಗ ಮತ್ತು ಅವನತಿಯ ಅಂಚಿನಲ್ಲಿರುವ ಗ್ರಾಮದ ಅಜ್ಜಿ ಮತ್ತು ಆಕೆಯ ಬದುಕಿನ ಆಧಾರವಾಗಿದ್ದ ಸಣ್ಣದಾದ ಚುರುಮುರಿ ಅಂಗಡಿ ಅವನತಿಯ ಸಂಕೇತದಂತಿದೆ. ನಗರೀಕೃತ ಬದುಕಿನ ಆಕರ್ಷಣೆ ಮತ್ತು ಬಂಡವಾಳಶಾಹಿ ಜಗತ್ತು ಗ್ರಾಮವನ್ನು, ಗ್ರಾಮಜೀವಿಗಳ ಬದುಕನ್ನು ಇಂಚಿಂಚಾಗಿ ನುಂಗುವ ನಾನಾ ಪರಿಗಳು ಇಲ್ಲಿ ಕಾಣುತ್ತವೆ.

ಬಸು ಅವರ ಕತೆಗಳಲ್ಲಿ ಹೆಣ್ಣು, ಮಣ್ಣು ಸೇರಿದಂತೆ ಮನುಷ್ಯ ಬದುಕಿನ ನಾನಾ ಆಯಾಮಗಳು ಹೆಚ್ಚಾಗಿ ಕಾಣಿಸಿಕೊಂಡಿವೆ. 'ಬಾಳೆಯ ಕಂಬ'ದ ಕಮಲವ್ವ, 'ಆಗಂತುಕ' ಕತೆಯ ಯಲ್ಲವ್ವ, 'ಬಿಸಿಲುಗುದುರೆಯ ಬಿಸುಪು' ಕತೆಯ ಪಾರ್ವತಿ, 'ಮನಕರಗದವರಲ್ಲಿ' ಕತೆಯ ಸುಜಾತ, 'ಚುರುಮುರಿಯ ಪರಿಮಳ'ದ ಹನುಮವ್ವ, 'ಬೆಳಕಿನ ಚಿಗುರ ಚಿವುಟಿ' ಕತೆಯ ಸಾಲೀಮನಿ ಬಸಮ್ಮ ಗಂಡಸರಿಗೆ ಮುಖಾಮುಖಿಯಾಗಿ ನಿಲ್ಲುವ ರೀತಿ ಕನ್ನಡ ಕಥಾ ಪ್ರಪಂಚದಲ್ಲಿ ಅನನ್ಯವಾದುದು.

ಬಸು ಬೇವಿನಗಿಡದ ಕನ್ನಡ ಸಶಕ್ತ ಕತೆಗಾರರು. ಗ್ರಾಮೀಣ ಕತೆಗಳ ಏಕತಾನತೆ ಇದೆ ಎಂದು ಅನ್ನಿಸಿದರೂ ಮರೆಯಾಗುತ್ತಿರುವ ಭಾರತದ ಹಳ್ಳಿಗಳನ್ನು ಅವರ ಕತೆಗಳಲ್ಲಿ ಕಾಣಬಹುದು ಎಂಬ ಆತ್ಮ ಗೌರವ ಮತ್ತು ಅಭಿಮಾನ ನಮ್ಮಲ್ಲಿ ಉಳಿಯದಿರಲಾರದು.

**ನಾಗರಾಜ್ ಹರಪನಹಳ್ಳಿ**
ನ್ಯೂ ಕೆ.ಹೆಚ್.ಬಿ. ಕಾಲೋನಿ, ಕಾರವಾರ

ಕು. ಸ. ಮಧುಸೂದನ್

# ತನ್ನ ಮೂಲೋದ್ದೇಶವನ್ನು ಮರೆತ ಟೆಲಿವಿಷನ್!

ಟೆಲಿವಿಷನ್ ಮಾಧ್ಯಮ ಇವತ್ತು ಒಂದು ಸೃಜನಶೀಲ ಮಾಧ್ಯಮವಾಗಿಯೋ ಕಲಾಪ್ರಕಾರವಾಗಿಯೋ ಉಳಿದಿಲ್ಲ. ಜೊತೆಗೆ, ಜನತೆಗೆ ಶಿಕ್ಷಣದ ಜೊತೆ ಮಾಹಿತಿಯನ್ನು ಒದಗಿಸುವ ಮಾಧ್ಯಮವಾಗಿಯೂ ಇಲ್ಲ. ಬದಲಿಗೆ, ಅದು ಬಂಡವಾಳಶಾಹಿಯ ಎಲ್ಲೆಯನ್ನು ವಿಸ್ತರಿಸಬಲ್ಲ ನಮ್ಮ ಸೈನಿಕನಂತೆ ಕೆಲಸ ಮಾಡುತ್ತಿದೆ. ಎಲ್ಲಿಯವರೆಗೂ ನಾವು ಮುಕ್ತ ಆರ್ಥಿಕ ನೀತಿಯ ಜಾಡಿನಲ್ಲಿ ನಡೆಯುತ್ತ, ನಮ್ಮ ಜನಸಮುದಾಯವನ್ನು ಕೇವಲ ಒಂದು ಮಾರುಕಟ್ಟೆಯನ್ನಾಗಿ ನೋಡುತ್ತ, ಜನರನ್ನು ಗ್ರಾಹಕರು ಮಾತ್ರವೆಂಬ ದೃಷ್ಟಿಯಲ್ಲಿ ನೋಡುತ್ತೇವೆಯೋ ಅಲ್ಲಿಯವರೆಗೂ ಟೆಲಿವಿಷನ್ ನಮ್ಮ ಮೇಲೆ ಆರ್ಥಿಕ-ಸಾಂಸ್ಕೃತಿಕ ದಾಳಿಯನ್ನು ನಡೆಸುತ್ತಲೇ ಇರುತ್ತದೆ.

ಟೆಲಿವಿಷನ್ ಭಾರತಕ್ಕೆ ಕಾಲಿಟ್ಟು ಅರ್ಧ ಶತಮಾನಗಳಿಗೂ ಹೆಚ್ಚು ಕಾಲವಾಯಿತು. ಪ್ರಾರಂಭದಲ್ಲಿ ಶಿಕ್ಷಣ-ಮಾಹಿತಿ ಎಂಬ ಧ್ಯೇಯವನ್ನಿಟ್ಟುಕೊಂಡು ದೇಶದೊಳಕ್ಕೆ ಕಾಲಿಟ್ಟ ಟೆಲಿವಿಷನ್‌ನ ಇವತ್ತಿನ ರೂಪವನ್ನು, ಬದಲಾಗಿರುವ ಅದರ ಧ್ಯೇಯವನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವುದು ನನ್ನೀ ಪುಟ್ಟ ಲೇಖನದ ಉದ್ದೇಶವೆಂದು ಮೊದಲಿಗೆ ಸ್ಪಷ್ಟಪಡಿಸಲಿಚ್ಛಿಸುತ್ತೇನೆ.

ಇವತ್ತು ಟೆಲಿವಿಷನ್ ಒಂದು ಸೃಜನಶೀಲ ಮಾಧ್ಯಮವಾಗಿಯಾಗಲಿ, ಸಂವಹನ ಮಾಧ್ಯಮವಾಗಿಯಾಗಲಿ ಉಳಿದಿಲ್ಲ. ಬದಲಿಗೆ ಅದೊಂದು ಅಪಾರ ಲಾಭ ತರುವಂತಹ, ತನ್ನ ಸಾಂಸ್ಕೃತಿಕ ಐಡೆಂಟಿಟಿಗಳನ್ನೆಲ್ಲ ಕಳೆದುಕೊಂಡ ಒಂದು ಉದ್ಯಮವಾಗಿ ಬೆಳೆದು ನಿಂತಿದೆ. ಹೀಗೆ ಒಂದು ಕಲಾ ಪ್ರಕಾರವಾಗಿ ರೇಡಿಯೋವನ್ನು ಹಿಂದಿಕ್ಕಿ ಬೆಳೆಯುತ್ತ ಬಂದ ಟೆಲಿವಿಷನ್ ಏಕಾಏಕಿಯಾಗಿ ಬದಲಾಗಲಿಲ್ಲ. ಬದಲಿಗೆ, ನಮ್ಮ ದೇಶದ ಆರ್ಥಿಕ ನೀತಿಗಳು ಜಾಗತಿಕ ಹಿತಾಸಕ್ತಿಗಳಿಗನುಗುಣವಾಗಿ ಬದಲಾಗುತ್ತಾ ಹೋದಂತೆ ಅದೂ ಸಹ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಹೋಯಿತು. ಹೀಗೆ ಬದಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಟೆಲಿವಿಷನ್‌ನ ಆಶಯಗಳು ಬದಲಾಗಿದ್ದರ ಹಿಂದಿನ ಕಾರಣಗಳನ್ನು ಒಂದೊಂದಾಗಿ ವಿವರಿಸಲು ನಾನಿಲ್ಲಿ ಪ್ರಯತ್ನಿಸಿದ್ದೇನೆ.

ನಾನು ಮೊದಲೇ ಹೇಳಿದಂತೆ ಟೆಲಿವಿಷನ್ ಭಾರತಕ್ಕೆ ಬಂದಿದ್ದು ಗ್ರಾಮೀಣ ಭಾಗದ ಜನರ ಶಿಕ್ಷಣ ಮತ್ತು ಮಾಹಿತಿಯ ಕಾರಣವನ್ನಿಟ್ಟುಕೊಂಡು. ಸರಕಾರದ ಮಿತಿಯೊಳಗೆ ಕಾರ್ಯ ನಿರ್ವಹಿಸುತ್ತಿದ್ದ ದೂರದರ್ಶನ ತನ್ನ ಮೂಲ ಆಶಯಗಳಿಗೆ ಧಕ್ಕೆಯುಂಟಾಗದಂತೆ ಕಾರ್ಯ ನಿರ್ವಹಿಸುತ್ತಿತ್ತು.

ಆದರೆ ತೊಂಭತ್ತರ ದಶಕದಲ್ಲಿ ಅಂದಿನ ಪ್ರಧಾನ ಮಂತ್ರಿಗಳಾದ ಶ್ರೀ ಪಿ. ವಿ. ನರಸಿಂಹರಾಯರ ಸಂಪುಟದಲ್ಲಿ ವಿತ್ತ ಮಂತ್ರಿಗಳಾಗಿದ್ದ ಮತ್ತು ಇಂದಿನ ಪ್ರಧಾನಿಗಳಾಗಿರುವ ಶ್ರೀ ಮನಮೋಹನ್ ಸಿಂಗ್ ಅವರು ಜಾಗತಿಕ ಅನಿವಾರ್ಯವೆಂಬ ಕಾರಣ ನೀಡಿ ಜಾರಿಗೆ ತಂದ ಮುಕ್ತ ಆರ್ಥಿಕ ನೀತಿ ಬೇರೆಲ್ಲ ಕ್ಷೇತ್ರಗಳಂತೆ ಮಾಧ್ಯಮ ಕ್ಷೇತ್ರದಲ್ಲಿಯೂ ಖಾಸಗೀಕರಣದ ಪ್ರಕ್ರಿಯೆಗೆ ಚಾಲನೆ ನೀಡಿತು. ಹೀಗಾಗಿ ತೊಂಭತ್ತರ ದಶಕದ ಪ್ರಾರಂಭದಲ್ಲಿದ್ದ ಎರಡೋ-ಮೂರೋ ವಾಹಿನಿಗಳ ಸ್ಥಾನದಲ್ಲಿ ಇವತ್ತು ನಾನೂರಕ್ಕೂ ಅಧಿಕ ಖಾಸಗಿ ವಾಹಿನಿಗಳು ಕಾರ್ಯ ನಿರ್ವಹಿಸುತ್ತಿವೆ ಮತ್ತು ಅವುಗಳ ಸಂಖ್ಯೆ ಇನ್ನೂ ಹೆಚ್ಚಾಗುವ ಎಲ್ಲ ಸಾಧ್ಯತೆಗಳು ಕಂಡುಬರುತ್ತಿವೆ.

ಇವತ್ತು ನಮ್ಮ ದೇಶದಲ್ಲಿ ನಾನೂರಕ್ಕೂ ಅಧಿಕ ವಾಹಿನಿಗಳು ಕಾರ್ಯ ನಿರ್ವಹಿಸುತ್ತಿವೆ ಮತ್ತು ಪ್ರಾದೇಶಿಕ ಭಾಷೆಗಳಲ್ಲಿಯೂ ವಾರ್ತಾ ವಾಹಿನಿಗಳೂ ಅಣಬೆಗಳಂತೆ ಹುಟ್ಟುತ್ತಲೇ ಇವೆ. ಈ ದಿನಮಾನಗಳಲ್ಲಿ ಹೆಚ್ಚಾದ ಉಪಗ್ರಹಗಳ ಸಂಖ್ಯೆ ಸಹ ವಾಹಿನಿಗಳ ಹೆಚ್ಚುವಿಕೆಗೆ ಕಾರಣವಾಯಿತು. ಜೊತೆಗೆ ಜಾಗತೀಕರಣದ ಮೂಲ ಆಶಯವಾದ 'ಇಡೀ ವಿಶ್ವವೇ ಒಂದು ಮಾರುಕಟ್ಟೆ' ಎಂಬ ಕಲ್ಪನೆಯ ಆಧಾರದಲ್ಲಿ ಬೆಳೆದು ನಿಂತ ಬಹುರಾಷ್ಟ್ರೀಯ ಕಾರ್ಪೊರೇಟ್ ವಲಯ ತನ್ನ ಮಾರುಕಟ್ಟೆಯ ವಿಸ್ತರಣೆಗೆ ಟೆಲಿವಿಷನ್ ಮಾಧ್ಯಮವನ್ನು ಬಳಸಿಕೊಳ್ಳುವ ಹುನ್ನಾರ ಹೆಣೆಯಿತು. ಖಾಸಗಿ ವಾಹಿನಿಗಳು



ತಮ್ಮನ್ನು ಉಳಿಸಿಕೊಳ್ಳಲು ಬೇಕಾದ ಆದಾಯವನ್ನು ಇಂತಹ ಕಾರ್ಪೊರೇಟ್ ಉದ್ಯಮಗಳು ನೀಡುವ ಜಾಹೀರಾತುಗಳ ಮೂಲಕ ಪಡೆಯುವುದರ ಕಾರಣದಿಂದಾಗಿ ಅವು ಬಂಡವಾಳಶಾಹಿ ಉದ್ಯಮಗಳ ಹಿತಾಸಕ್ತಿಗಳನ್ನು ಕಾಪಾಡುವ ದಿಸೆಯಲ್ಲಿ ಕಾರ್ಯ ನಿರ್ವಹಿಸತೊಡಗಿದವು. ಇದರ ಬಗ್ಗೆ ಇನ್ನಷ್ಟು ವಿಶದವಾಗಿ ನೋಡೋಣ :

ಮೊದಲೇ ಹೇಳಿದಂತೆ ಮುಕ್ತ ಆರ್ಥಿಕ ನೀತಿಯ ಪ್ರಭಾವದಿಂದ ಹಿಂದೆಂದಿಗಿಂತಲೂ ಅಧಿಕ ಸಂಖ್ಯೆಯಲ್ಲಿ ಭಾರತಕ್ಕೆ ಕಾಲಿಟ್ಟ ಕಾರ್ಪೊರೇಟ್ ಉದ್ಯಮ ಸಂಸ್ಕೃತಿ ವೇಗ ಪಡೆದುಕೊಳ್ಳತೊಡಗಿತು. ಕಾರ್ಪೊರೇಟ್ ಉದ್ದಿಮೆಗಳು ತಮ್ಮ ವ್ಯಾಪಾರವನ್ನು ವೃದ್ಧಿಸಿಕೊಳ್ಳಲು ಗ್ರಾಹಕರ ಮನೆ ಬಾಗಿಲಿಗೆ ತಲುಪುವ ಸುಲಭ ದಾರಿಯ ಹುಡುಕಾಟ ದಲ್ಲಿದ್ದಾಗಲೇ ಅವುಗಳಿಗೆ ಟೆಲಿವಿಷನ್ ಒಂದು ಪ್ರಭಾವಿ ಮಾಧ್ಯಮವೆಂಬ ಆಯುಧ ದೊರೆತಿದ್ದು. ಮುದ್ರಣ ಮಾಧ್ಯಮಕ್ಕಿಂತ ಪರಿಣಾಮಕಾರಿಯಾಗಿರುವ ದೃಶ್ಯ ಮಾಧ್ಯಮದ ಮೂಲಕ ದೇಶದ ಅನಕ್ಷರಸ್ಥ ಜನರನ್ನೂ ಟೆಲಿವಿಷನ್ ಮೂಲಕ ತಲುಪಬಹುದೆಂಬ ಸತ್ಯ ಗೊತ್ತಾದ ಕೂಡಲೇ ಬಂಡವಾಳಶಾಹಿಗಳು ಅಪಾರ ಹಣವನ್ನು ಟಿ.ವಿ. ಜಾಹೀರಾತಿನ ಮೇಲೆ ಹೂಡತೊಡಗಿದವು. ಆ ವೇಳೆಗಾಗಲೇ ಕ್ರಿಕೆಟ್ ಒಂದು ಜನಪ್ರಿಯ ಕ್ರೀಡೆಯಾಗಿ ಬೆಳೆದು ನಿಂತು ಮನೆ–ಮನೆಗೂ ಟೆಲಿವಿಷನ್ ಸೆಟ್ಟುಗಳು ತಲುಪಿದ್ದವು. ಇಂತಹದೊಂದು ಅವಕಾಶವನ್ನು ತಮ್ಮ ಅನುಕೂಲಕ್ಕೆ ಬಳಸಿಕೊಂಡ ಕಾರ್ಪೊರೇಟ್ ವಲಯ ವಾಹಿನಿಗಳ ಪ್ರತಿಯೊಂದು ಕಾರ್ಯಕ್ರಮದ ಪ್ರಸಾರಕ್ಕೂ ಜಾಹೀರಾತು ನೀಡುವ ಮೂಲಕ ಪ್ರಾಯೋಜತ್ವ ವಹಿಸತೊಡಗಿತು. ತಮ್ಮ ಅಸ್ತಿತ್ವಕ್ಕೆ ಕಾರ್ಪೊರೇಟ್ ಕಂಪನಿಗಳ ಮರ್ಜಿಯನ್ನು ಹಿಡಿಯಬೇಕಾದ ಕಟುಸತ್ಯವನ್ನು ಅರ್ಥಮಾಡಿಕೊಂಡ ವಾಹಿನಿಗಳು ಮೊದಲಿಗೆ ಕಾರ್ಯಕ್ರಮಗಳನ್ನು ರೂಪಿಸಿ ಜಾಹೀರಾತುದಾರರನ್ನು ಹುಡುಕುವ ಬದಲು, ತಮಗೆ ದೊರೆಯುವ ಜಾಹೀರಾತುಗಳನ್ನು ನೀಡುವ ಕಂಪನಿಗಳ ಆಕಾಂಕ್ಷೆಗಳಿಗನುಗುಣವಾಗಿ ತಮ್ಮ ಕಾರ್ಯಕ್ರಮಗಳನ್ನು ರೂಪಿಸತೊಡಗಿದವು. ಹೀಗೆ ಜಾಹೀರಾತುಗಳು ತರುವ ಲಾಭದ ಆಸೆಯಿಂದ ವಾಹಿನಿಗಳು ಟಿ.ವಿ.ಯ ಮೂಲ ಧ್ಯೇಯಘೋಷವಾದ ಶಿಕ್ಷಣ–ಮಾಹಿತಿಯನ್ನು ಪಕ್ಕಕ್ಕೆ ತಳ್ಳಿಹಾಕಿ ಕೇವಲ ಮನೋರಂಜನೆ ನೀಡುವ ಏಕಮೇವ ನೀತಿಯನ್ನು ಪಾಲಿಸುತ್ತ ಬರುತ್ತಿವೆ.

ಇದರಲ್ಲಿ ಅಚ್ಚರಿಪಡುವಂಥದ್ದೇನೂ ಇಲ್ಲ. ಯಾಕೆಂದರೆ ಇತಿಹಾಸದ ಪುಟಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ, ಎಲ್ಲ ಕಾಲಕ್ಕೂ ಪಟ್ಟಭದ್ರ ಹಿತಾಸಕ್ತಿಗಳು ತಮ್ಮನ್ನು ಬೆಳೆಸಿ ಉಳಿಸಿಕೊಳ್ಳಲು ಲಭ್ಯವಿರುವ ಎಲ್ಲ ಮಾಧ್ಯಮಗಳನ್ನು ಬಳಸಿ ಕೊಂಡಿರುವುದನ್ನು ನಾವು ಗಮನಿಸಬಹುದು. ಹಿಂದೆಯೂ ರೇಡಿಯೋ ಮತ್ತು ಮುದ್ರಣ ಮಾಧ್ಯಮವನ್ನು ಈ ರೀತಿಯಾಗಿ ಬಳಸಿಕೊಂಡು



ಬೆಳೆದ ಬಲಾಢ್ಯ ಶಕ್ತಿಗಳು ಇದಕ್ಕೆ ಉದಾಹರಣೆಗಳು.

ಆದರೆ, ದುರಂತವೆಂದರೆ ಇವತ್ತು ಕಾರ್ಪೊರೇಟ್ ಕಂಪನಿಗಳು ಟಿ.ವಿ. ಮಾಧ್ಯಮವನ್ನು ಬಳಸಿಕೊಂಡು ಈ ದೇಶದ ಆರ್ಥಿಕ ನೀತಿಯನ್ನು ರೂಪಿಸುವ ಮಟ್ಟಕ್ಕೆ ಬೆಳೆದು ನಿಂತಿವೆ. ಇದಕ್ಕೂ ಒಂದು ಕಾರಣವಿದೆ.

ಟೆಲಿವಿಷನ್ ಮಾಧ್ಯಮದ ಪ್ರಭಾವ ಮತ್ತು ಅದು ಜನರ ಮೇಲೆ ಬೀರಬಹುದಾದ ಪರಿಣಾಮಗಳ ಬಗ್ಗೆ ಅರ್ಥಮಾಡಿಕೊಂಡ ಬಂಡವಾಳಶಾಹಿಗಳು ಹೊಸ ತಂತ್ರವೊಂದನ್ನು ರೂಪಿಸಿಕೊಂಡರು. ಅದೆಂದರೆ, ಬೇರೆ ವಾಹಿನಿಗಳಿಗೆ ಜಾಹೀರಾತು ನೀಡುವ ಬದಲು ತಾವುಗಳೇ ಸ್ವತಃ ವಾಹಿನಿಗಳನ್ನು ಪ್ರಾರಂಭಿಸುವುದು. ಹೀಗೆ ತಾವೇ ವಾಹಿನಿಗಳನ್ನು ಶುರುಮಾಡಿ ತಮಗೆ ಮತ್ತು ತಮ್ಮ ಉತ್ಪಾದನೆಗಳ ಮಾರಾಟಗಳಿಗನು ಕೂಲವಾಗುವಂತಹ ಕಾರ್ಯಕ್ರಮಗಳನ್ನು ರೂಪಿಸಿ ಪ್ರಸಾರ ಮಾಡುವುದರಿಂದ ಇತರೆ ವಾಹಿನಿಗಳ ಮರ್ಜಿಗಾಗಿ ಕಾಯುವ ಅಗತ್ಯವಿಲ್ಲದಿರುವುದನ್ನು ಮನಗೊಂಡ ಕಾರ್ಪೊರೇಟ್ ಕಂಪನಿಗಳು ಈ ದಿಸೆಯಲ್ಲಿ ಕಾರ್ಯೋನ್ಮುಖವಾದವು. ಕೆಲವು ಉದ್ಯಮಿಗಳು ನೇರವಾಗಿ ವಾಹಿನಿಗಳನ್ನು ಪ್ರಾರಂಭಿಸಿದರೆ, ಇನ್ನು ಕೆಲವು ಖಾಸಗಿ ವಾಹಿನಿಗಳ ಪರೋಕ್ಷ ಪಾಲುದಾರರಾಗುವ ಮೂಲಕ ಒಟ್ಟು ಖಾಸಗಿ ವಾಹಿನಿಗಳ ಮೇಲೆ ಹಿಡಿತ ಸಾಧಿಸಿವೆ. ಹೀಗಾಗಿ ಇವತ್ತು ಬಹುತೇಕ ಆಂಗ್ಲ ಭಾಷೆಯ ಸುದ್ದಿ ವಾಹಿನಿಗಳು ಖಾಸಗಿ ಬಂಡವಾಳಶಾಹಿಗಳ ಹಿಡಿತದಲ್ಲಿವೆ.

ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿರುವ ಕಾರ್ಪೊರೇಟ್ ಕಂಪನಿಗಳು ದೇಶದ ಆರ್ಥಿಕ ನೀತಿಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ರಚಿಸಿಕೊಳ್ಳಲು ತಮಗೆ ಬೇಕಾದ ರಾಜಕೀಯ ಪಕ್ಷಗಳಿಗೆ ಪರೋಕ್ಷ ಬೆಂಬಲ ಘೋಷಿಸಿ ಅವುಗಳ ಪರವಾಗಿ ಕಾರ್ಯಕ್ರಮಗಳನ್ನು ರೂಪಿಸಿ ಪ್ರಸಾರ ಮಾಡುತ್ತಿವೆ.

ಇವೆಲ್ಲದರ ಜೊತೆಗೆ ನಮ್ಮ ಬಹಳಷ್ಟು ಪ್ರಾದೇಶಿಕ ಪಕ್ಷಗಳು ತಮ್ಮದೇ ವಾಹಿನಿಗಳನ್ನು ಪ್ರಸಾರ ಮಾಡಿ ತಮ್ಮ ನಾಯಕರುಗಳ ಇಮೇಜು ವೃದ್ಧಿಸುವ ಕಾರ್ಯದಲ್ಲಿ ನಿರತವಾಗಿವೆ. ಆಂಧ್ರ ಮತ್ತು ತಮಿಳುನಾಡಿನಲ್ಲಿ ಶುರುವಾದ ಇಂತಹ ಪ್ರಯತ್ನಗಳು ಇವತ್ತು ದೇಶದಾದ್ಯಂತ ಹಬ್ಬುತ್ತಿವೆ.

ಇವತ್ತು ಭಾಜಪದ ಮೋದಿಯನ್ನು ಈ ದೇಶದ ಐಕಾನ್ ಎಂದು ಬಿಂಬಿಸುತ್ತಿರುವ ಮಾಧ್ಯಮಗಳ ನಡವಳಿಕೆಗಳ ಹಿಂದೆ ಅವುಗಳ ಸ್ವಂತ ಹಿತಾಸಕ್ತಿ ಕೆಲಸ ಮಾಡುತ್ತಿದೆಯೆಂಬುದೇ ಇದಕ್ಕೆ ಸೂಕ್ತ ಉದಾಹರಣೆಯಾಗಬಲ್ಲುದು.

ಹೀಗೆ ಟೆಲಿವಿಷನ್ ಮಾಧ್ಯಮ ಇವತ್ತು ಒಂದು ಸೃಜನಶೀಲ ಮಾಧ್ಯಮವಾಗಿಯೋ ಇಲ್ಲ ಕಲಾಪ್ರಕಾರವಾಗಿಯೋ ಉಳಿದಿಲ್ಲ. ಜೊತೆಗೆ, ಜನತೆಗೆ ಶಿಕ್ಷಣದ ಜೊತೆ ಮಾಹಿತಿಯನ್ನು ಒದಗಿಸುವ ಮಾಧ್ಯಮವಾಗಿಯೂ ಉಳಿದಿಲ್ಲ. ಬದಲಿಗೆ, ಅದು ಬಂಡವಾಳಶಾಹಿಯ ಎಲ್ಲೆಯನ್ನು ವಿಸ್ತರಿಸಬಲ್ಲ ನಮ್ರ ಸೈನಿಕನಂತೆ ಕೆಲಸ ಮಾಡುತ್ತಿದೆ. ಎಲ್ಲಿಯವರೆಗೂ ನಾವು ಮುಕ್ತ ಆರ್ಥಿಕ ನೀತಿಯ ಜಾಡಿನಲ್ಲಿ ನಡೆಯುತ್ತ, ನಮ್ಮ ಜನಸಮುದಾಯವನ್ನು ಕೇವಲ ಒಂದು ಮಾರುಕಟ್ಟೆಯನ್ನಾಗಿ ನೋಡುತ್ತ, ಜನರನ್ನು ಗ್ರಾಹಕರು ಮಾತ್ರವೆಂಬ ದೃಷ್ಟಿಯಲ್ಲಿ ನೋಡುತ್ತೇವೆಯೋ ಅಲ್ಲಿಯವರೆಗೂ ಟೆಲಿವಿಷನ್ ನಮ್ಮ ಮೇಲೆ ಆರ್ಥಿಕ – ಸಾಂಸ್ಕೃತಿಕ ದಾಳಿಯನ್ನು ನಡೆಸುತ್ತಲೇ ಇರುತ್ತದೆ.

**ಕು. ಸ. ಮಧುಸೂದನ್**
ವಿಜಯಾ ಬ್ಯಾಂಕ್ ಮಹಡಿ
ರಂಗೇನಹಳ್ಳಿ – ೫೭೭ ೧೮೪, ಚಿಕ್ಕಮಗಳೂರು ಜಿಲ್ಲೆ

ನಾನು ವಿಕಾಸವಾದವನ್ನು ಮೆಚ್ಚುವುದಕ್ಕೆ ಹಲವು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದದ್ದು ನಮ್ಮ ಶರೀರದ ಸುತ್ತಳತೆ! ಅಚ್ಚರಿಯಾಯಿತೆ...? ಹೌದು ನೂರಕ್ಕೆ ತೊಂಬತ್ತೈದು ಜನರು ವಯಸ್ಸಿನೊಂದಿಗೆ ತಮ್ಮ ಶರೀರದ ಸುತ್ತಳತೆ ಗಣನೀಯವಾಗಿ ವಿಕಾಸವಾಗಿರುವುದನ್ನು ಕಂಡು ಹೌಹಾರುತ್ತಾರೆ! ಈ ವಿಕಾಸ ಕೆಲವರಿಗೆ ಶರೀರದ ಮಧ್ಯಭಾಗದಲ್ಲಿ, ಅಂದರೆ ಸರಳವಾಗಿ ಹೇಳಬೇಕೆಂದರೆ, ಹೊಟ್ಟೆಯ ಭಾಗದಲ್ಲಾದರೆ ಇನ್ನು ಕೆಲವರಲ್ಲಿ ಈ ವಿಕಾಸ ಸರ್ವ ಅಂಗಗಳಿಗೂ ವ್ಯಾಪಿಸಿರುತ್ತದೆ. ಈ ಶರೀರ ವಿಕಾಸ ಕೆಲವರಲ್ಲಿ ಮಿತಿಯಲ್ಲಿದ್ದರೆ, ಕೆಲವರಲ್ಲಿ ಅದು ಮಿತಿಮೀರಿರುತ್ತದೆ. ಶರೀರದ ಬದಲಿಗೆ ಬುದ್ಧಿ ವಿಕಾಸವಾದರೆ ಎಲ್ಲರೂ ಹೊಗಳುವುದರಲ್ಲಿ ಅಚ್ಚರಿಯಿಲ್ಲ. ಅಂಥವರು ಜ್ಞಾನಿಗಳಾಗುತ್ತಾರೆ - ತಮ್ಮ ವಿಕಾಸದ ಬಗೆಗೆ ಹೆಮ್ಮೆಯಿಂದಿರುತ್ತಾರೆ. ಆದರೆ ಶರೀರ ವಿಕಾಸ ಅಂತಹುದಲ್ಲ. ಅದು ಮನುಷ್ಯರಲ್ಲಿ ಖಿನ್ನತೆಯನ್ನು ಉಂಟುಮಾಡುತ್ತದೆ. ವಿಕಾಸಗೊಂಡ ಶರೀರವನ್ನು ಗೇಲಿಮಾಡಲು ಶುರು ಮಾಡುತ್ತಾರೆ. ಪುರುಷರನ್ನು 'ಧಡಿಯ, ಟೊಣಪ, ಡುಮ್ಮ' ಮುಂತಾದ ಹೆಸರುಗಳಿಂದ ಕರೆಯಲು ಶುರು ಮಾಡುತ್ತಾರೆ. ಇದೇ ರೀತಿ ಸ್ತ್ರೀಯರನ್ನೂ ಕರೆಯತೊಡಗುತ್ತಾರೆ-ಇದೇನು ವಿಶೇಷವಲ್ಲ. ಇದು ಕಿರಿಕಿರಿಯನ್ನುಂಟುಮಾಡುತ್ತದೆ; ಜಗಳಕ್ಕೆ ಪ್ರೇರಣೆ ನೀಡುತ್ತದೆ.



# ವಿಕಾಸವಾದ!



ವಿಜ್ಞಾನಕ್ಕೂ ನನಗೂ ಅಂತಹ ಹೇಳುವಂಥ ಸಂಬಂಧವಿಲ್ಲ. ಆಗೀಗ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುವ ವಿಜ್ಞಾನದ ತುಣುಕು ಸುದ್ದಿಗಳನ್ನು – ಅವು ಸಣ್ಣವಾಗಿದ್ದರೆ ಮಾತ್ರ – ಬಿಟ್ಟು ಗಂಭೀರವಾಗಿ ನಾನು ವಿಜ್ಞಾನವನ್ನು ಅಧ್ಯಯನ ಮಾಡಿದ್ದೇ ಇಲ್ಲ! ಇನ್ನು ವ್ಯಾಸಂಗ ಮಾಡುವಾಗ ವಿಧಿಯಿಲ್ಲದೆ ವಿಜ್ಞಾನವನ್ನು ಓದಿ ತಕ್ಕಷ್ಟು ಅಂಕ ಗಳಿಸಿ ಭುಜ ತಟ್ಟಿಸಿಕೊಳ್ಳದಿದ್ದರೂ ದೊಣ್ಣೆ ಸೇವೆಯಿಂದ ತಪ್ಪಿಸಿಕೊಂಡಿದ್ದೆ! ಏನಿದು ದೊಣ್ಣೆ ಸೇವೆ ಎಂದು ಇಂದಿನವರಿಗೆ ಅಚ್ಚರಿಯಾಗಬಹುದು. ನನ್ನ ತಲೆಮಾರಿನ ತಂದೆ – ತಾಯಿಯರು ಗಂಭೀರವಾಗಿ ಓದದ ತಮ್ಮ ಮಕ್ಕಳಿಗೆ ಕರುಣಿಸುತ್ತಿದ್ದ ಬಹುಮಾನವೇ ದೊಣ್ಣೆ ಸೇವೆ, ಇಲ್ಲಾ ಕಪಾಳ ಮೋಕ್ಷ! ಈಗಿನವರು ಬಿಡಿ, ಮಕ್ಕಳನ್ನು ಗದರಿಸುವುದೇ ಇಲ್ಲ! ಇನ್ನು ಶಿಕ್ಷೆ ಕೊಡುವುದಂತೂ ದೂರವೇ! ತಪ್ಪು ಮಾಡಿದ ಮಕ್ಕಳನ್ನು ಶಿಕ್ಷಿಸುವ ತಂದೆ – ತಾಯಿಯರನ್ನು ನಾನು ಇತ್ತೀಚೆಗೆ ಕಂಡೇ ಇಲ್ಲ! ಇಂದಿನ ತಂದೆ – ತಾಯಿಯರಿಗೆ ಹೀಗೆ ಗದರುವಿಕೆ ಮತ್ತು ಶಿಕ್ಷೆಯ ಮೂಲಕ ಮಕ್ಕಳನ್ನು ತಿದ್ದಿ ಸರಿದಾರಿಗೆ ತರಬೇಕೆನ್ನುವುದು ಗೊತ್ತೇ ಇಲ್ಲವೇನೋ ಎಂಬ ಅನುಮಾನ ಹಲವು ಸಲ ಬರುತ್ತದೆ. ಈಗಿನ ತಂದೆ – ತಾಯಿಯರು ಹಿರಿಯರ ಅನುಭವದ ಮಾತಿಗಿಂತ ಅಂತರ್ಜಾಲದಲ್ಲಿನ ಸುದ್ದಿಯನ್ನೇ ಹೆಚ್ಚು ನಂಬುತ್ತಾರೆ. ಬುದ್ಧಿವಾದ ಹೇಳಲು ಬಂದ ಹಿರಿಯರನ್ನೇ ತಮ್ಮ ಇಂಟರ್ನೆಟ್ ಸುದ್ದಿಯ ಬಲದಿಂದ 'ಪರಿ'ಗೆ ತಳ್ಳಿಬಿಡುತ್ತಾರೆ. ಹಿರಿಯರಿಗೂ ತಮ್ಮ ಅನುಭವವೇ ಸುಳ್ಳೇನೋ ಎಂಬ ಅನುಮಾನ ಕಾಡಲು ಪ್ರಾರಂಭವಾಗಿಬಿಡುತ್ತದೆ!

ನಮ್ಮ ಮನೆಗೆ ಬರುವ ಬಂಧುಗಳು ಮಕ್ಕಳನ್ನೂ ಅವರ ತಂದೆ – ತಾಯಿಯರನ್ನೂ ನಾನು ಸೂಕ್ಷ್ಮವಾಗಿ ಮತ್ತು ಸ್ಥೂಲವಾಗಿ ಗಮನಿಸಿದ್ದೇನೆ. ಅವರುಗಳ ಬಾಯಲ್ಲಿ ಶಿಕ್ಷೆ ಎನ್ನುವುದನ್ನು ನಾನು ಇದುವರೆಗೂ ಕೇಳಿಯೇ ಇಲ್ಲ! ತಮ್ಮ ಮನೆಯಲ್ಲಿ ಸ್ವೇಚ್ಛೆಯಾಗಿರುವಂತೆ ಅಪರಿಚಿತರ ಮನೆಯಲ್ಲಿಯೂ ಮಕ್ಕಳು ವರ್ತಿಸುವುದನ್ನು ನೋಡಿ ಬೆಚ್ಚಿಬಿದ್ದಿದ್ದೇನೆ. ತಮಗೆ ಕೈಗೆ ಸಿಕ್ಕ ವಸ್ತುಗಳನ್ನು ಬಳಸುವುದು. ಅವನ್ನು ಬೀಳಿಸುವುದು, ಹಾಳುಮಾಡುವುದು ಮುಂತಾದುವನ್ನು ಮಾಡುತ್ತಿದ್ದರೂ ತಮಗೆ ಸಂಬಂಧವೇ ಇಲ್ಲದಂತೆ ತಂದೆ – ತಾಯಿಯರು ವರ್ತಿಸುವರು. ಕನಿಷ್ಠ ಗದರುವುದನ್ನಾದರೂ ನಾನು ಕಂಡಿಲ್ಲ! ಇನ್ನು ಸಾರ್ವಜನಿಕ ಸ್ಥಳಗಳಲ್ಲಿ, ಮಾಲ್‌ಗಳಲ್ಲಿ ಈ ಮಕ್ಕಳ ವರ್ತನೆ ನನ್ನ ತಲೆಮಾರಿನವರಿಗೆ ಅಚ್ಚರಿ ಎನ್ನಿಸುತ್ತದೆ. ನಾವು ಮಕ್ಕಳಾಗಿದ್ದಾಗ ಬಂಧುಗಳ ಮನೆಗೆ ಹೋಗುವಾಗ ನಮಗೆ ಅಲ್ಲಿ ಪಾಲಿಸಬೇಕಾದ ನಿಯಮಾವಳಿಗಳನ್ನು ಕನಿಷ್ಠ ಎರಡು ಬಾರಿಯಾದರೂ ಮನನ ಮಾಡಿಸದೆ ನಮ್ಮನ್ನು ಕರೆದೊಯ್ಯುತ್ತಿರಲಿಲ್ಲ. ಅಪರಿಚಿತ ಜಾಗಗಳಲ್ಲಿ ತಪ್ಪು ಮಾಡಿದಾಗ ಏಟುಗಳು ಬೀಳುತ್ತಿದ್ದುದು ಸರ್ವೇಸಾಮಾನ್ಯ. ಈಗಿನ ತಂದೆ – ತಾಯಿಯರು

**ಎಸ್. ಜಿ. ಶಿವಶಂಕರ್**

ಬೇಟೆಯಾಡಿತು ಪ್ರಾಣಿ
ಆಹಾರಕ್ಕಾಗಿ
ಬೇಟೆಯಾಡಿದ ಮನುಜ
ವಿಹಾರಕ್ಕಾಗಿ

**ರವಿಶಂಕರ ಒಡ್ಡಂಬೆಟ್ಟು**
ಮಂಗಳೂರು – ೧೫

ಮಿತ ಕುಟುಂಬ ನಿಯಮ ಪಾಲಿಸುತ್ತಾರೆ. ಬಹುತೇಕರು ಒಂದೇ ಮಗುವನ್ನು ಹೊಂದಿರುತ್ತಾರೆ ! ಅದಕ್ಕೇನು ಕಾರಣ ಎನ್ನುವುದರ ಬಗೆಗೆ ಹೆಚ್ಚಿಗೆ ವಿಶ್ಲೇಷಿಸಲು ಹೋಗುವುದಿಲ್ಲ. ಅದರ ಗೋಜಿಗೆ ಹೋದರೆ ಅದೇ ಒಂದು ದೀರ್ಘ ವಿಷಯವಾದೀತು !

ಡಾರ್ವಿನ್ ಮಹಾಶಯನ ವಿಕಾಸವಾದಕ್ಕೆ ಪುಷ್ಟಿ ಕೊಡುವಂತೆ ಇತ್ತೀಚೆಗೆ ಹಲವಾರು ಹೊಸ ವಿದ್ಯಮಾನಗಳು ಗೋಚರಿಸಿವೆ. ಅವುಗಳಲ್ಲಿ ಮುಖ್ಯವಾದದ್ದು ಮೊದಲಿಗೆ ವಿಜ್ಞಾನಿಗಳು ಒಂದೇ ಸೌರಮಂಡಲ ಎನ್ನುತ್ತಿದ್ದವರು ಈಗ ಅನೇಕ ಸೌರಮಂಡಲಗಳಿವೆ ಮತ್ತು ಇನ್ನೂ ನೂರಾರು ಇರುವ ಸಾಧ್ಯತೆಗಳಿವೆ ಎನ್ನುತ್ತಿರುವುದು ಒಂದು. ಇದರ ಜೊತೆಗೆ ಇಡೀ ವಿಶ್ವ ನಿರಂತರವಾಗಿ ವಿಕಾಸ ಹೊಂದುತ್ತಿದೆ ಎನ್ನುತ್ತಿದ್ದಾರೆ ! ಇವೆಲ್ಲಾ ಅಪ್ಪಟ ವಿಜ್ಞಾನದ ವಿಷಯಗಳು. ಇವುಗಳ ಬಗೆಗೆ ನನಗಾಗಲೀ ನಿಮಗಾಗಲೀ ಇನ್ನೂ ಆಳಕ್ಕೆ ಹೋಗುವ ಆಸಕ್ತಿಯಿಲ್ಲ ಎಂದು ತಿಳಿಯುವೆ. ಆಳಕ್ಕೆ ಇಳಿಯುವಾಗ ಅರ್ಥವಾಗದಂತಹ ವಿಷಯಗಳಿರುತ್ತವೆ ! ಅವು ನನ್ನ ತಲೆಯೊಳಗಂತೂ ಇಳಿಯುವುದು ಕಷ್ಟ !! ನಿಮ್ಮ ವಿಷಯ ಹೇಗೋ ಗೊತ್ತಿಲ್ಲ.

ಕ್ಷಮಿಸಿ, ವಿಷಯಾಂತರವಾಯಿತೆ...? ನನಗೂ ಹಾಗೇ ಎನ್ನಿಸುತ್ತಿದೆ. ಪ್ರಾರಂಭದಲ್ಲಿ ನಾನು ವಿಜ್ಞಾನದ ಬಗೆಗೆ ಹೇಳಲು ಪ್ರಾರಂಭಿಸಿದೆ, ಅಲ್ಲವೇ ? ಈಗ ಅಲ್ಲಿಂದಲೇ ಮುಂದುವರಿಸುತ್ತೇನೆ. ವಿಜ್ಞಾನದಲ್ಲಿ ಹೇಳಿಕೊಳ್ಳುವಂತಹ ಆಸಕ್ತಿಯಿಲ್ಲದಿದ್ದರೂ ನಾನು ಡಾರ್ವಿನ್ ಮಹಾಶಯನ ವಿಕಾಸವಾದವನ್ನು ಬಹಳ ಮಟ್ಟಿಗೆ ಮೆಚ್ಚಿದ್ದೇನೆ ಮತ್ತು ಅದನ್ನು ಸಂಪೂರ್ಣವಾಗಿ ನಂಬುತ್ತೇನೆ ! ಡಾರ್ವಿನ್ ಎಂಬ ಪ್ರಸಿದ್ಧ ವಿಜ್ಞಾನಿ ಸಣ್ಣ ಏಕಾಣು ಜೀವಿಯಿಂದ ಹಂತಹಂತವಾಗಿ ಜೀವ ವಿಕಾಸ ಹೊಂದಿದೆ ಎಂಬ ತತ್ವವನ್ನು ಮುಂದಿಟ್ಟಿದ್ದಾನೆ. ಅದು ಇಡೀ ಜಗತ್ತಿನಲ್ಲಿ ಮಾನ್ಯವಾಗಿದೆ. ಅಮೀಬಾ ಎನ್ನುವ ಜೀವಿಯಿಂದ, ಮಂಗ ಮತ್ತು ಅಲ್ಲಿಂದ ಮನುಷ್ಯ ರೂಪುಗೊಂಡಿದ್ದಾನೆ ಎನ್ನುವುದು ಅವನ ಸಿದ್ಧಾಂತ. ನಮ್ಮ ಮನೆಗೆ ಬರುವ ಬಂಧುಗಳ ಮಕ್ಕಳು ತಮ್ಮ ಅತೀವ ಚಟುವಟಿಕೆಯಿಂದ ಮನೆಯ ವಸ್ತುಗಳನ್ನು ಹಾಳುಮಾಡುವ ಗುಮಾನಿ ಬಂದರೆ ಅಂತಹ ಮಕ್ಕಳನ್ನು ಕೂರಿಸಿಕೊಂಡು ಅವರಿಗೆ ಡಾರ್ವಿನ್ನನ ಸಿದ್ಧಾಂತ ಹೇಳಿ, "ನಮ್ಮ ಪೂರ್ವಿಕರು ಯಾರು ಗೊತ್ತೆ...?" ಎಂಬ ಪ್ರಶ್ನೆ ಕೇಳಿ ಅದಕ್ಕೆ ಉತ್ತರವಾಗಿ 'ಕೋತಿಗಳು' ಎಂದು ಹೇಳಿ ಅವರನ್ನು ರಂಜಿಸುತ್ತೇನೆ. ಅವರಲ್ಲಿ ಕೆಲವು ಮಕ್ಕಳು ನನ್ನ ಸಿದ್ಧಾಂತವನ್ನು ಒಪ್ಪದೆ ಅವರ ತಂದೆ – ತಾಯಿಯರಲ್ಲಿ ದೂರು ಕೊಟ್ಟಿದ್ದೂ ಇದೆ ! "ತಾತ, ನಮ್ಮ ಪೂರ್ವಿಕರನ್ನು ಕೋತಿಗಳು ಅಂತ ಬೈತಾರೆ" ಎಂಬ ದೂರನ್ನು ಸಲ್ಲಿಸಿದ ಅನೇಕ ಪ್ರಸಂಗಗಳಿವೆ. ಆಗ ನನ್ನ ಶ್ರೀಮತಿ, "ಏನಾದರೂ ಒಳ್ಳೆ ಕತೆ ಹೇಳಿ ಅಂದ್ರೆ ಮಕ್ಕಳ ತಲೆ ಕೆಡಿಸ್ತೀರಾ" ಎಂದು ಗದರಿದ್ದೂ ಇದೆ.

ಅದೊತ್ತಟ್ಟಿಗಿರಲಿ, ನಾನು ವಿಕಾಸವಾದವನ್ನು ಮೆಚ್ಚುವುದಕ್ಕೆ ಹಲವು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದದ್ದು ನಮ್ಮ ಶರೀರದ ಸುತ್ತಳತೆ ! ಅಚ್ಚರಿಯಾಯಿತೆ...? ಹೌದು ನೂರಕ್ಕೆ ತೊಂಬತ್ತೈದು ಜನರು ವಯಸ್ಸಿನೊಂದಿಗೆ ತಮ್ಮ ಶರೀರದ ಸುತ್ತಳತೆ ಗಣನೀಯವಾಗಿ ವಿಕಾಸವಾಗಿರುವುದನ್ನು ಕಂಡು ಹೌಹಾರುತ್ತಾರೆ ! ಈ ವಿಕಾಸ ಕೆಲವರಿಗೆ ಶರೀರದ ಮಧ್ಯಭಾಗದಲ್ಲಿ, ಅಂದರೆ ಸರಳವಾಗಿ ಹೇಳಬೇಕೆಂದರೆ, ಹೊಟ್ಟೆಯ ಭಾಗದಲ್ಲಾದರೆ ಇನ್ನು ಕೆಲವರಲ್ಲಿ ಈ ವಿಕಾಸ ಸರ್ವ ಅಂಗಗಳಿಗೂ ವ್ಯಾಪಿಸಿರುತ್ತದೆ. ಈ ಶರೀರ ವಿಕಾಸ ಕೆಲವರಲ್ಲಿ ಮಿತಿಯಲ್ಲಿದ್ದರೆ, ಕೆಲವರಲ್ಲಿ ಅದು ಮಿತಿಮೀರಿರುತ್ತದೆ. ಶರೀರದ ಬದಲಿಗೆ ಬುದ್ಧಿ ವಿಕಾಸವಾದರೆ ಎಲ್ಲರೂ ಹೊಗಳುವುದರಲ್ಲಿ ಅಚ್ಚರಿಯಿಲ್ಲ. ಅಂಥವರು ಜ್ಞಾನಿಗಳಾಗುತ್ತಾರೆ – ತಮ್ಮ ವಿಕಾಸದ ಬಗೆಗೆ ಹೆಮ್ಮೆಯಿಂದಿರುತ್ತಾರೆ. ಆದರೆ ಶರೀರ ವಿಕಾಸ ಅಂತಹುದಲ್ಲ. ಅದು ಮನುಷ್ಯರಲ್ಲಿ ಖಿನ್ನತೆಯನ್ನು ಉಂಟುಮಾಡುತ್ತದೆ. ವಿಕಾಸಗೊಂಡ ಶರೀರವನ್ನು ಗೇಲಿಮಾಡಲು ಶುರು ಮಾಡುತ್ತಾರೆ. ಪುರುಷರನ್ನು






## ಅವಳು

ಬರಿಗಾಲ ಅವಳು
ಪೇಟೆ ಬೀದಿಯ ಅಂಗಡಿಗಳ
ಸಾಲು ಸಾಲು ಮೆಟ್ಟಿಲ
ಹತ್ತಿ ಇಳಿದು
ಹುಡುಕುತ್ತಿದ್ದಾಳೆ
ದುಂಡು ದುಂಡಾದ ಅಕ್ಷರದ
ಪೆಪ್ಪರುಮೆಂಟ್‌ಗಳ

ಡಬ್ಬಿಯೊಳಗಿನ ಸಕ್ಕರೆ ತುಂಡುಗಳ
ಮಗುವಿನ ಅಂಗೈಗೆ
ಹಚ್ಚಿ ಬಾಯಿಗಿಟ್ಟು
ಚಪ್ಪರಿಸಲು ಅವನೆಂಬ ಕಾಸು ಬೇಕು

ಮತ್ಯಾವುದೋ ಲಜ್ಜೆಯ ಸೀಳುಗಳಲ್ಲಿ
ಬೇರೂರಲು ಹೋದ ಅವನ ಹೆಕ್ಕಿ
ತರಲಾಗದೆ ನೆತ್ತಿಯ ಸುಟ್ಟುಕೊಳ್ಳುತ್ತ
ಸೆರಗಕೊನೆಯ ಕೂಸಿನ
ತಲೆಗೆ ಹೊದಿಸಿ
ಇಳಿದ ದಾರಿಗಳಿಗೆ ಬೆನ್ನು ತೋರಿಸಿ
ನಡೆಯುತ್ತಿದ್ದಾಳೆ

**ದೀಪ್ತಿ ಭದ್ರಾವತಿ**
'ಸ್ನಿಗ್ಧ', ೨ನೇ ತಿರುವು ಬಲಭಾಗ
ಶಂಕರಮಠ ರಸ್ತೆ, ಸಿದ್ಧರೂಢನಗರ
ಭದ್ರಾವತಿ

'ಧಡಿಯ, ಟೊಣಪ, ಡುಮ್ಮ' ಮುಂತಾದ ಹೆಸರುಗಳಿಂದ ಕರೆಯಲು ಶುರು ಮಾಡುತ್ತಾರೆ. ಇದೇ ರೀತಿ ಸ್ತ್ರೀಯರನ್ನೂ ಕರೆಯತೊಡಗುತ್ತಾರೆ– ಇದೇನು ವಿಶೇಷವಲ್ಲ. ಇದು ಕಿರಿಕಿರಿಯನ್ನುಂಟು ಮಾಡುತ್ತದೆ; ಜಗಳಕ್ಕೆ ಪ್ರೇರಣೆ ನೀಡುತ್ತದೆ.

ನನ್ನ ವಿಷಯವನ್ನೇ ಹೇಳುವುದಾದರೆ ನಾನು ಕಾಲೇಜಿನಲ್ಲಿದ್ದಾಗ ನನ್ನ ಸೊಂಟದ ಸುತ್ತಳತೆ ಇಂಚಿನ ಲೆಕ್ಕದಲ್ಲಿ ಮೂವತ್ತರಲ್ಲಿತ್ತು. ಅದು ಟೈಲರ್ ಬಳಿ ಪ್ಯಾಂಟು ಹೊಲೆಸುವಾಗ ಗೊತ್ತಾಗಿದ್ದು. ಆ ಕಾಲದಲ್ಲಿ ಅಂದರೆ ಸುಮಾರು ಸಾವಿರದ ಒಂಬತ್ತು ನೂರ ಅರವತ್ನಾಲ್ಕರಲ್ಲಿ. ಆ ಕಾಲದ ಯಾರಿಗೂ ಸೊಂಟದ ಅಳತೆಯ ಬಗೆಗೆ ಅಂತಹ ಗಮನವೇನೂ ಇರಲಿಲ್ಲ. ಅದಕ್ಕೇನಾದರೂ ಮಹತ್ವ ಇದೆಯೆಂದು ಅನ್ನಿಸುತ್ತಲೂ ಇರಲಿಲ್ಲ. ಕಾಲೇಜು ಮುಗಿದು, ಮದುವೆಯ ಸಮಯಕ್ಕೆ ಅದೇ ಅಳತೆ ಮೂವತ್ನಾಲ್ಕನ್ನು ಮುಟ್ಟಿತ್ತು. ಇದಕ್ಕೆ ವಿಕಾಸವಾದ ಕಾರಣವಲ್ಲದೆ ಮತ್ತೇನು...? ನಾನು ಮೊದಲಿನಂತೆಯೆ ಇದ್ದೆ. ಊಟ–ತಿಂಡಿ ಮುಂತಾದ ಎಲ್ಲ ಅಭ್ಯಾಸಗಳೂ ಮೊದಲಿನಂತೆಯೇ ಇದ್ದರೂ ಹೊಟ್ಟೆಯ ಭಾಗ ಮುಂದೆ ಚಾಚಿಕೊಳ್ಳಲಾರಂಭಿಸಿತ್ತು. ಮದುವೆಯಾದ ಎರಡೇ ವರ್ಷಗಳಲ್ಲಿ ಈ ಅಳತೆ ಮೂವತ್ತಾರನ್ನು ಮುಟ್ಟಿಬಿಟ್ಟಿತು! ಅದರಿಂದೇನು ತೊಂದರೆ? ಎಂದು ನಿಮ್ಮ ಪ್ರಶ್ನೆಯೆ...? ಮೊದಲ ತೊಂದರೆಯೆಂದರೆ ಇರುವ ಪ್ಯಾಂಟುಗಳನ್ನು ಉಪಯೋಗಿಸಲಾಗಲಿಲ್ಲ! ಎರಡನೆಯದು, ಪ್ಯಾಂಟುಗಳ ಸಂಖ್ಯೆ ಗಣನೀಯವಾಗಿ ಕಮ್ಮಿಯಾಗಿದ್ದು. ಹಳೆಯ ಪ್ಯಾಂಟುಗಳನ್ನು ಏರಿಸಿಕೊಳ್ಳಲು ಹೋದರೆ ಅವು ಹೊಟ್ಟೆಗೆ ತೊಂದರೆ ಕೊಡುತ್ತಿದ್ದವು! ನನ್ನಲ್ಲಿದ್ದ ಎರಡು ಪ್ಯಾಂಟುಗಳನ್ನು ದೊಗಲೆ ಎಂದು ಉಪಯೋಗಿಸದೆ ಬಿಟ್ಟಿದ್ದೆ. ಈಗ ಅವೂ ಸ್ವಲ್ಪ ಬಿಗಿ ಅನಿಸಿದರೂ ತೊಂದರೆಯೊಂದಿಗೆ ಉಪಯೋಗಿಸಬಹುದಾಗಿತ್ತು! ಆ ಎರಡನ್ನೇ ಅದೆಷ್ಟು ಕಾಲ ಉಪಯೋಗಿಸಲು ಸಾಧ್ಯ...? ಈ ಸಮಸ್ಯೆಯನ್ನು ನನ್ನವಳ ಬಳಿ ಹೇಳಿದ್ದಕ್ಕೆ ಅವಳು ಕಿಸಕ್ಕೆಂದು ನಕ್ಕಿದ್ದಷ್ಟೇ ಉತ್ತರವಾಗಿತ್ತು. ಅವಳಿಂದ ಯಾವುದೇ ಸಹಾಯ ದೊರೆಯಲಿಲ್ಲ. ಹೆಂಗಸರಿಗೆ ಈ ವಿಷಯ ಮುಖ್ಯವಲ್ಲ ಎನಿಸದಿರಲು ಕಾರಣವೂ ಇದೆ. ಬಹುತೇಕ ಹೆಂಗಸರು ಧರಿಸುವ ಸೀರೆಗೆ ಸೊಂಟದ ಸುತ್ತಳತೆ ಇಂತಿಷ್ಟೇ ಎಂಬ ನಿಗದಿಯೇನೂ ಇಲ್ಲ. ಈ ಕಾರಣದಿಂದ ಅವರ ದೇಹದ ವಿಕಾಸದ ಜೊತೆಗೆ ಉಡುಪನ್ನು ಹೊಂದಿಸಿ ಕೊಳ್ಳಲು ಸಾಧ್ಯ. ಇದು ಜೀನ್ಸ್ ಮತ್ತು ಇತರೆ ಪ್ಯಾಂಟು ಧರಿಸುವ ಮಹಿಳೆಯರಿಗೆ ಅನ್ವಯಿಸುವುದಿಲ್ಲ. ಪ್ಯಾಂಟು ಪ್ರೇಮೀ ಮಹಿಳೆಯರಿಗೆ ಗಂಡಸರಿಗೆ ಇರುವಂತೆಯೇ ಸಮಸ್ಯೆಗಳಿರುತ್ತವೆ. ಅದರಲ್ಲಿ ಸಂದೇಹವೇ ಇಲ್ಲ.

ನನ್ನ ಹಳೆಯ ಪ್ಯಾಂಟುಗಳನ್ನು ಮಾರ್ಪಡಿಸುವುದೇ ಇದಕ್ಕೆ ಶಾಶ್ವತ ಪರಿಹಾರ ಎಂಬ ಗಂಭೀರ ತೀರ್ಮಾನಕ್ಕೆ ಬಂದು ನನ್ನ ಮಾಮೂಲಿ ಟೈಲರಿಗೆ ದುಂಬಾಲು ಬಿದ್ದೆ. ಎರಡು ಸಲ 'ಬಿಡುವಿಲ್ಲ' ಎಂದಿದ್ದವನು ಕೊನೆಗೊಮ್ಮೆ, "ಹಳೆಯ ಪ್ಯಾಂಟುಗಳನ್ನು ರಿಪೇರಿ ಮಾಡುವುದಿಲ್ಲ" ಎಂದು ಘೋಷಿಸಿಬಿಟ್ಟ! ಅವನ ಮಾತಿನಿಂದ ಎದೆಗುಂದಿದರೂ ತೋರಿಸಿಕೊಳ್ಳದೆ ನಾನು ಇನ್ನೂ ನಾಲ್ಕಾರು ಟೈಲರುಗಳ ಎಡೆತಾಕಿದೆ! ಕೊನೆಗೊಬ್ಬ ಒಪ್ಪಿದ. ಪ್ಯಾಂಟುಗಳ ಸೊಂಟ ಹಿಗ್ಗಿಸಲು ಮೊದಲಿಗೆ ಸಾಕಷ್ಟು ಬಟ್ಟೆ ಉಳಿದಿದೆಯೇ ಎಂದು ಪರೀಕ್ಷಿಸಿ ಎಷ್ಟು ಸಾಧ್ಯವೋ ಅಷ್ಟು ಹಿಗ್ಗಿಸಿಕೊಡುವುದಾಗಿ ಹೇಳಿದ್ದಕ್ಕೆ ನಾನೂ ಹಿಗ್ಗಿದೆ – ಸದ್ಯ ಒಂದಿಷ್ಟು ಹಣ ಉಳಿಯಿತೆಂದು. ಹಾಗೋ ಹೀಗೋ ಒಂದಿಷ್ಟು ಹಣವೇನೋ ಉಳಿಸಿದ್ದಾಯಿತು. ಹೀಗೇ ಎಷ್ಟು ಸಲ ಮಾಡಲು ಸಾಧ್ಯ...? ಮತ್ತೊಂದು ವರ್ಷಕ್ಕೆ ಸಡಿಲ ಮಾಡಿದ್ದ ಪ್ಯಾಂಟುಗಳೆಲ್ಲಾ ಮತ್ತೆ ಬಿಗಿಯಾಗಿದ್ದವು! ಇದು ಸ್ಪಷ್ಟ ವಿಕಾಸವಾದದ ಸ್ಪಷ್ಟ ನಿದರ್ಶನವಲ್ಲವೆ ?!




ವಿಕಾಸವಾದ ಸರ್ವವ್ಯಾಪಿಯಾದರೂ ನಾನಿದನ್ನು ಮಾನವರಿಗೆ ಮಾತ್ರ ಅನ್ವಯಿಸಿ ಮುಂದು ವರಿಯುತ್ತೇನೆ. ಈ ವಿಕಾಸದ ಪ್ರಮಾಣ ಎಲ್ಲ ವ್ಯಕ್ತಿಗಳಲ್ಲೂ ಒಂದೇ ಇರುವುದಿಲ್ಲ. ಇದು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಅಷ್ಟೇ ಅಲ್ಲದೆ, ಗಂಡಸರಿಗೂ ಹೆಂಗಸರಿಗೂ ಬೇರೆಬೇರೆ ಅನುಪಾತದಲ್ಲಿರುತ್ತವೆ. ಗಂಡಸರಲ್ಲಿ ಇದು ಅಂತಹ ಗಣನೀಯವಾದ ಪ್ರಮಾಣದಲ್ಲಿರುವುದಿಲ್ಲ. ಇದಕ್ಕೆ ಉದಾಹರಣೆಯೆಂದರೆ ನನ್ನ ಸ್ನೇಹಿತರು. ನಾವು ಕಾಲೇಜಿನಲ್ಲಿ ಊದುತ್ತಿದ್ದಾಗಿನ ಕ್ಷಮಿಸಿ, ಓದುತ್ತಿದ್ದಾಗಿನ ಸ್ನೇಹಿತರು ಈಗಲೂ ಸಿಕ್ಕರೆ ಒಬ್ಬರನ್ನೊಬ್ಬರು ಗುರುತಿಸುತ್ತೇವೆ! ವಯಸ್ಸಿನ ಕಾರಣದಿಂದ ಮುಖದಲ್ಲಿ ಸುಕ್ಕುಗಳು, ಸ್ವಲ್ಪಮಟ್ಟಿಗೆ ಉಬ್ಬಿದ ಹೊಟ್ಟೆ, ತಲೆಯಲ್ಲಿ ಬಿಳಿಗೂದಲು, ಇಲ್ಲವೆ ಬೊಕ್ಕ ತಲೆ, ಕುರುಚಲು ತಲೆ – ಇವನ್ನು ಬಿಟ್ಟರೆ ಬೇರೆ ಇನ್ನಾವ ಬದಲಾವಣೆಗಳೂ ಕಾಣುವುದಿಲ್ಲ. ಇದೇ ವಿಷಯವನ್ನು ನಾವು ಹೆಂಗಸರಿಗೆ ಹೇಳಲಾಗದು. ಮದುವೆಗೆ ಮುಂಚೆ ಇದ್ದ ಸ್ಥಿತಿಗೂ ನಂತರ ವಿಕಾಸವಾದ ಸ್ಥಿತಿಗೂ ಅಜಗಜಾಂತರ. ಅವರೇ ಇವರು ಎಂದು ಗುರುತಿಸಲೂ ಸಾಧ್ಯವಾಗದಂತಹ ವಿಕಾಸ! ಇವಕ್ಕೆ ನಾನಾ ಕಾರಣಗಳಿವೆ ಎಂಬುದನ್ನು ನಾನೂ ಒಪ್ಪುತ್ತೇನೆ. ಜೀವ ಉತ್ಪತ್ತಿಯನ್ನು ಪ್ರಕೃತಿ ಅವರ ಪಾಲಿಗೆ ಕೊಟ್ಟಿರುವುದೇ ಮೊದಲಾಗಿ ಇನ್ನೂ ಹಲವಾರು ಕಾರಣಗಳನ್ನು ಈ ರೀತಿಯ ವಿಕಾಸಕ್ಕೆ ಕೊಡಬಹುದು. ಆದರೆ ಈ ಕಾರಣಗಳನ್ನು ಸಾರ್ವತ್ರೀಕರಿಸಲು ಸಾಧ್ಯವಿಲ್ಲ. ಸಿನಿಮಾ ನಟಿಯರು ಇದಕ್ಕೆ ಉದಾಹರಣೆ. ಮಕ್ಕಳನ್ನು ಹೆತ್ತ ನಂತರವೂ ಕೆಲವು ನಟಿಯರು ತಮ್ಮ ಅಂಗಸೌಷ್ಠವವನ್ನು ಕಾಪಾಡಿಕೊಂಡು ವಿಕಾಸವಾದಕ್ಕೆ ಸೆಡ್ಡು ಹೊಡೆದಿದ್ದಾರೆ! ಅದಕ್ಕಾಗಿ ಅವರು ಬಹಳ ಶ್ರಮಪಟ್ಟಿರಬಹುದು. ಜಿಮ್ಮು, ಯೋಗಾ, ಏರೋಬಿಕ್ಸ್ ಮತ್ತು ಕಟಿಯ ಸುತ್ತಳತೆ ಹೆಚ್ಚದಂತಿರಲು ಕಠಿಣ ಆಹಾರ ಕ್ರಮ, ಭರ್ಜರಿಯಾದ ಸರ್ಜರಿ – ಇವೆಲ್ಲವನ್ನೂ ಅವರು ಪಾಲಿಸಿರಲು ಸಾಧ್ಯ! ಅವರು ತಮ್ಮ ಗಳಿಕೆಯ ಒಂದು ಭಾಗವನ್ನು ಆಧುನಿಕ ತಂತ್ರಜ್ಞಾನಕ್ಕೂ ವ್ಯಯಿಸುತ್ತಾರಂತೆ! ಹೊಟ್ಟೆಯಲ್ಲಿ ಶೇಖರವಾಗುವ ಬೊಜ್ಜನ್ನು ಶಸ್ತ್ರಚಿಕಿತ್ಸೆಯ ಮೂಲಕ ತೆಗೆಸಿ ಕೊಳ್ಳುತ್ತಾರಂತೆ!

ವಿಕಾಸವಾದದ ಈ ಸಹಜ ಪ್ರಕ್ರಿಯೆಯನ್ನು ಒಪ್ಪದವರೇ ಹೆಚ್ಚಿನವರು. ಅದರಲ್ಲಿಯೂ ಈಗಿನ ಯುವಜನಾಂಗವಂತೂ ತಮ್ಮ ಶರೀರದ ಬಗೆಗೆ ಅತಿ ಹೆಚ್ಚಿನ ಕಾಳಜಿ ಹೊಂದಿದ್ದಾರೆ. ಬಹುತೇಕ ಎಲ್ಲರೂ ತಮ್ಮ ಹೆಚ್ಚುತ್ತಿರುವ ತೂಕವನ್ನು ಕಡಿಮೆ ಮಾಡಿಕೊಳ್ಳುವ ಕ್ರಮಗಳ ಬಗೆಗೆ ಚಿಂತಿಸುತ್ತಾರೆ. ನನ್ನ ತಲೆಮಾರಿನವರು ಈ ಯಾವ ಚಿಂತೆಯನ್ನೂ ಮಾಡದೆ ಡಾರ್ವಿನ್ ಮಹಾಶಯನ ತತ್ವವನ್ನು ಒಪ್ಪಿ ತೆಪ್ಪಗಿರುವವರೇ ಹೆಚ್ಚು!

ಏನೇ ಮಾಡಿದರೂ ಬಿಡದಂತೆ ಕಾಡುವ ಈ ವಿಕಾಸವನ್ನು ಶಪಿಸುವವರೇ ಹೆಚ್ಚು! ಅದು ತಮ್ಮನ್ನು ಮೆಟ್ಟದಂತಿರಲು ಹುಚ್ಚರಂತೆ ಶ್ರಮಪಡುವರು! ಬೆಳಗಿನ ಉಪಾಹಾರವನ್ನೇ ವರ್ಜಿಸುತ್ತಾರೆ! ಮಧ್ಯಾಹ್ನದ ಊಟಕ್ಕೆ ಎರಡು ಕ್ಯಾರೆಟ್ಟು, ಸೌತೆಕಾಯಿಯ ಹೋಳುಗಳು, ಒಂದು ಲೋಟ ಮಜ್ಜಿಗೆ ಕುಡಿದು ತೇಗು ಬರದಿದ್ದರೂ ತೇಗಿ ತೃಪ್ತಿಹೊಂದಿದ ರೀತಿ ಇರುತ್ತಾರೆ. ನಾಲ್ಕೈದು ದಿನ ಹೀಗೆ ಮಾಡಿ, ಒಂದು ದಿನ ಸಂಜೆ ಬೀದಿಬದಿಯ ಹೋಟೆಲುಗಳಲ್ಲಿ ಮನಃಪೂರ್ತಿ ಗೋಬಿ, ನೂಡಲ್ಸ್, ಪಾನಿ ಪೂರಿ – ಎಲ್ಲಾ ತಿಂದು ವಾರದ ಶ್ರಮಕ್ಕೆ ಹುಳಿ ಹಿಂಡಿಕೊಳ್ಳುತ್ತಾರೆ!

**ಎಸ್. ಜಿ. ಶಿವಶಂಕರ್**
ನಂ. ೫೧೭೭, 'ಶಿವಲತ', ಎಚ್. ಟಿ. ಜೋಡಿ ರಸ್ತೆ
ವಿಜಯನಗರ ೨ನೇ ಹಂತ, ಮೈಸೂರು – ೫೭೦ ೦೧೭

# ಪ್ರೊ॥ ಎ. ಆರ್. ವಾಸುದೇವಮೂರ್ತಿ – ಒಂದು ನೆನಪು

**ಪ್ರೊ॥** ಎ. ಆರ್. ವಾಸುದೇವಮೂರ್ತಿಯವರನ್ನು ನಾನು, ಕಳೆದ ೫೦ – ೬೦ ವರ್ಷಗಳಿಂದ ಬಲ್ಲೆನಾದರೂ ಅವರನ್ನು ಭೇಟಿಯಾಗುತ್ತಿದ್ದುದು ಅಪರೂಪ, ಅವರನ್ನು ಕೇವಲ ೮ – ೧೦ ಬಾರಿ ನೋಡಿದ್ದೆ. ಆದರೂ ಅವರ ಜತೆಯ ನನ್ನ ಸಂಬಂಧ ಅತ್ಯಂತ ಭಾವುಕವಾದುದು, ತೀವ್ರವಾದುದು. ನಾನೇನೂ ವಿಜ್ಞಾನಿಯಲ್ಲ, ಬೌದ್ಧಿಕವಾಗಿ ನನಗೆ ಅವರ ವ್ಯಕ್ತಿತ್ವದ ಪರಿಪೂರ್ಣ ಪರಿಚಯವಾಗಿತ್ತೆಂದು ಎಂದೂ ಭಾವಿಸಿರಲಿಲ್ಲ.



ಅವರು ನನಗೆ ಹತ್ತಿರದ ಸಂಬಂಧಿಕರು. ನಾನು ೧೯೬೩ರಲ್ಲಿ ಬೆಂಗಳೂರಿಗೆ ಬಂದಾಗ ಅವರು ವಿಜ್ಞಾನಲೋಕದಲ್ಲಿ ದೊಡ್ಡ ಹೆಸರಾಗಿದ್ದರು. ಈಚಿನ ವರ್ಷಗಳಲ್ಲಿ ನಮ್ಮ ಸ್ನೇಹವಲಯಕ್ಕೆ ಸೇರಿದ್ದ ದಿ॥ ಎ. ವಿ. ಶಂಕರರಾಯರು ಆಗಾಗ ನನ್ನ ಜೊತೆ ಅವರ ಬಗ್ಗೆ ಪ್ರಸ್ತಾಪಿಸುತ್ತಿದ್ದರು.

ಡಾ॥ ಎ. ಆರ್. ವಿ. ಇಂಡಿಯನ್ ಇನ್‌ಸ್ಟಿಟ್ಯೂಟ್‌ನಲ್ಲಿ ಬಹು ದೀರ್ಘಕಾಲ ಭೌತರಸಾಯನ ವಿಜ್ಞಾನದ ಪ್ರಾಧ್ಯಾಪಕರಾಗಿದ್ದು, ನಿವೃತ್ತಿಯ ನಂತರವೂ ಏನೇನೋ ಸಂಶೋಧನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರು 'ಸಿಲಿಕಾನ್'ಗೆ ಸಂಬಂಧಿಸಿದಂತೆ ಯಾವುದೋ ಮಹತ್ವದ ಸಂಶೋಧನೆ ನಡೆಸಿ ಅಂತರರಾಷ್ಟ್ರೀಯ ಖ್ಯಾತಿಗೆ ಭಾಜನರಾಗಿದ್ದರೆಂದು ಕೇಳಿದ್ದೆ.

ನನಗೆ ಅವರ ಪರಿಚಯವಾದುದು ನನ್ನ ಬದುಕಿನಲ್ಲೊಂದು ಮಹತ್ವದ (ನನಗೆ !) ಘಟನೆ, ಒಂದು ನಿರ್ಣಾಯಕ ತಿರುವು.

ನಾನು ಮೊಟ್ಟಮೊದಲು ಅವರನ್ನು ಭೇಟಿಯಾದುದು ೧೯೫೫ರಲ್ಲಿ. ತರೀಕೆರೆಗೆ ಆಗ ಅವರು ತಮ್ಮ ಸಹೋದ್ಯೋಗಿ ಡಾ॥ ಅನಂತ ಅಯ್ಯರ್ ಜೊತೆ ಬಂದಿದ್ದರು. ಅವರು ಎಂದೂ ವೃಥಾ ಕಾಲ ಕಳೆದವರಲ್ಲ. ವಿಜ್ಞಾನಿಯಾದ ಅವರು ನಾಲ್ಕು ಗೋಡೆಗಳ ನಡುವೆ ತಮ್ಮದೇ ಲೋಕ ಸೃಷ್ಟಿಸಿಕೊಂಡು ಬದುಕಿದವರಲ್ಲ. ಅವಕಾಶ ಸಿಕ್ಕಾಗಲೆಲ್ಲ ಹೊರಗಿನ ಪ್ರಪಂಚದಲ್ಲಿ, ಅದರಲ್ಲೂ ನೈಸರ್ಗಿಕ ಪರಿಸರಗಳಲ್ಲಿ ಅಲೆದಾಡುತ್ತ ಕಣ್ಮನಗಳಿಗೆ ಹರ್ಷದ ಸಂಪತ್ತನ್ನು ಸಂಚಯಿಸಿಕೊಳ್ಳುತ್ತಿದ್ದ ವ್ಯಕ್ತಿ ಅವರು. ಆ ಸಲ ಕೆಮ್ಮಣ್ಣುಗುಂಡಿಯಿಂದ ದೂರದ, ದುರ್ಗಮ, ಅಜ್ಞಾತ ಪ್ರದೇಶದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ 'ತಲಕಳ್ಳಿ' (ಲಿಂಗನಮಕ್ಕಿ ನದಿ ಯೋಜನೆ ಸಂಪೂರ್ಣವಾದಾಗ ಆ ಪ್ರದೇಶ ಮುಳುಗಡೆಯಾಯಿತು) ಪ್ರಪಾತ ನೋಡುವ ಕಾರ್ಯಕ್ರಮ ಹಾಕಿಕೊಂಡು ಗೆಳೆಯರೊಂದಿಗೆ ಬಂದಿದ್ದರು. ನನಗಿನ್ನೂ ಆಗತಾನೆ ನೇರ ಪರಿಚಯವಾಗಿದ್ದರೂ ಅವರು ನನ್ನನ್ನು ಆ ಪ್ರವಾಸಕ್ಕೆ ಆಹ್ವಾನಿಸಿದರು. "ಅದೊಂದು ಸುಂದರವಾದ ನೋಡಲೇಬೇಕಾದಂಥ ನೀರಿನಾಶ್ರಯದ ತಾಣ. ನೀನೂ ಬಾ..." ಎಂದು ಹೇಳಿ "ಸ್ವಲ್ಪ ದೂರ ಕಾಲು ನಡಿಗೆ ಇದೆ ಪರವಾಗಿಲ್ಲ ಬಾ" ಎಂದರು.

ನಾನೂ ಅವರ ಜತೆ ಸೇರಿ ಹೊರಟೆ. ಕೆಮ್ಮಣ್ಣುಗುಂಡಿಯ ತನಕ ಬಸ್ ಪ್ರಯಾಣ, ಅಲ್ಲಿಂದ ಮುಂದಕ್ಕೆ 'ಕಾಲು ಪ್ರಯಾಣ'! ಪ್ರಯಾಣದ ಉದ್ದಕ್ಕೂ 'ವಾಸು' ಅವರ ಅತ್ಯಂತ ವಿಚಾರಭರಿತ ಹಾಗೂ ಪಾಂಡಿತ್ಯಪೂರ್ಣ ವಾಗ್ಜಾಲದಿಂದ ನಾನು ಮಂತ್ರಮುಗ್ಧನಾಗಿದ್ದೆ. ವಿಜ್ಞಾನದ ಇತ್ತೀಚಿನ ಬೆಳವಣಿಗೆಗಳು, ಮಾರ್ಕ್ಸ್‌ವಾದ, ಕವಿ ಭರ್ತೃಹರಿ ಎಂದು ಮುಂತಾದ ಅನೇಕ ವಿಷಯಗಳನ್ನು ನನಗೆ ತಿಳಿಯ ಬಹುದಾದ ಶೈಲಿ – ಭಾಷೆಗಳಲ್ಲಿ ವಿವರಿಸುತ್ತಾ ಹೋದರು. ಎಲ್ಲರಿಗೂ ತಿಳಿದಂತೆ, ಅವರಿಗೆ ಮಾರ್ಕ್ಸ್‌ವಾದ ಕುರಿತ ಆಳವಾದ ವ್ಯಾಪಕವಾದ ಪರಿಚಯ ಹಾಗೂ ನಂಬಿಕೆಗಳಿದ್ದವು. ಸಂಸ್ಕೃತದಲ್ಲಿ ಅವರು ಬಹುಶ್ರುತರು, ದೊಡ್ಡ ವಿದ್ವಾಂಸರು. ಸಾಹಿತ್ಯ, ಶಾಸ್ತ್ರ, ಉಪನಿಷತ್ತುಗಳು ಅವರಿಗೆ ಕರತಲಾಮಲಕ. ಮಾರ್ಕ್ಸ್‌ವಾದ ಹಾಗೂ ನಮ್ಮ ಶಾಸ್ತ್ರಗ್ರಂಥಗಳ ಓದಿನಿಂದ ಪಂಡಿತರು, ವಿಜ್ಞಾನಿಗಳು ಏನೇನು ಗ್ರಹಿಸಬಹುದೆಂದು ವಿವರಿಸಿದರು. ವಾಸು ಅವರದು ತುಂಬಾ ಮೃದು ಮಂಜುಳ ಧ್ವನಿ, ಮಾತು ಮೃದು, ಹಿತಕರ.

ಅಂದು ಅವರು ನನಗೆ ಕ್ರಿಸ್ಟಾಫರ್ ಕಾಡ್‌ವೆಲ್, ಜಾರ್ಜ್ ಥಾಮ್ಸನ್, ಡಿ. ಡಿ. ಕೊಸಾಂಬಿ, ಜೆ. ಡಿ. ಬರ್ನಾಲ್, ಸರ್ ಲಿಯನಾರ್ಡ್ ವುಲ್ಲಿ, ಗೋರ್ಡನ್ ಚೈಲ್ಡ್ ಮುಂತಾದ ಮೇರು ಸದೃಶ ಮಾರ್ಕ್ಸ್‌ವಾದಿ ಲೇಖಕರ ಬಗ್ಗೆ ವಿಪುಲ, ಅರ್ಥಪೂರ್ಣ ಮಾಹಿತಿ ಒದಗಿಸಿ "ನನ್ನ ಕಣ್ಣು ತೆರೆಯಿಸಿದರು"! ಗೋರ್ಡನ್ ಚೈಲ್ಡ್ ವಿರಚಿತ 'ವಾಟ್ ಹ್ಯಾಪನ್ಡ್ ಇನ್ ಹಿಸ್ಟರಿ'ಯನ್ನು ಉಲ್ಲೇಖಿಸಿ "ನೀನು ಅದನ್ನು ಓದಲೇಬೇಕು – ಇಲ್ಲದಿದ್ದರೆ ನಿನ್ನ ಕಾವ್ಯ, ಇತಿಹಾಸ, ನಾಟಕಗಳ ಓದು ಅಪೂರ್ಣ" ಎಂದು ನಗೆಯಾಡಿದರು.

ಏತನ್ಮಧ್ಯೆ ನಾವು ಕೆಮ್ಮಣ್ಣುಗುಂಡಿಯಿಂದ ೮ – ೧೦ ಮೈಲಿ ನಡೆದು ಕಾಡು – ಕಣಿವೆಗಳನ್ನೂ ಬೆಟ್ಟ – ಗುಡ್ಡಗಳನ್ನೂ ಸುತ್ತಿ ಸುಳಿದು ಸುಸ್ತಾಗಿದ್ದೆವು – ಅದರಲ್ಲೂ ನಾನು ! ಸೋತುಹೋಗಿ ಶರಣಾದೆ. "ದಯವಿಟ್ಟು ನನ್ನನ್ನು ಹಿಂದಕ್ಕೆ ಕಳುಹಿಸಿಬಿಡಿ" ಎಂದು ಅಂಗಲಾಚಿದೆ – ನನ್ನ ಕರುಣಾಜನಕ ಸ್ಥಿತಿ ಕಂಡು ಅವರಿಗೆ ನಗು ಬಂತು – ವಾಸು ಎಂದಿನಂತೆ ಹುಸಿನಗೆ ನಕ್ಕು ನನ್ನನ್ನು ಹಿಂದಕ್ಕೆ ತಂದು ಬಿಟ್ಟು ತಾವಿಬ್ಬರೂ ಪ್ರವಾಸ ಮುಂದುವರಿಸಿದರು. ಅವರು ತರೀಕೆರೆಗೆ ವಾಪಸಾದಾಗ ರಾತ್ರಿಯಾಗಿತ್ತು.

ಅವರ ಜೊತೆ ಮಾತನಾಡುತ್ತ ಒಮ್ಮೆ ನಾನು ಅವರನ್ನು "ನಿಮಗೆ ಮಾರ್ಕ್ಸ್‌ವಾದದ ಪ್ರವೇಶ ಹೇಗೆ, ಏಕೆ ಆಯಿತು ?" ಎಂದು ಪ್ರಶ್ನಿಸಿದಾಗ, "ನಿಜವಾದ ವಿಜ್ಞಾನಿಯ ದೃಷ್ಟಿಯಲ್ಲಿ ಅವೆರಡಕ್ಕೂ ಪರಸ್ಪರ ಸಂಬಂಧವಿದ್ದೇ ಇದೆ. ವೈಚಾರಿಕ ವಿಶ್ಲೇಷಣೆಯಲ್ಲಿ ವಿಜ್ಞಾನಿಗೆ ಮಾರ್ಕ್ಸ್‌ವಾದ ನೆರವಾಗುವಂತೆ, ಮಾರ್ಕ್ಸ್‌ವಾದಿಗೆ ವೈಜ್ಞಾನಿಕ ದೃಷ್ಟಿ ಮತ್ತು ವ್ಯಾಸಂಗ ಅತ್ಯಗತ್ಯ. ನೀನು ಓದಲು ಪ್ರಾರಂಭಿಸು – ನಿನಗೇ ಅದೆಲ್ಲಾ ಹೊಳೆಯುತ್ತದೆ" ಎಂದವರು ಹೇಳಿದ್ದು ನೆನಪಾಗುತ್ತದೆ. ಇನ್ನೊಮ್ಮೆ ನಾನು ಪ್ರೊ॥ ಎ.ಆರ್.ವಿ. ಅವರನ್ನು ನೋಡಿದುದು ಮೈಸೂರಿನಲ್ಲಿ, ಬಹುಶಃ ೧೯೭೩–೧೯೭೪ರ ಅವಧಿಯಲ್ಲಿ. ಅವರು ತಮ್ಮ ಸಹೋದ್ಯೋಗಿಗಳಾದ ಡಾ॥ ಸತೀಶ್ ಧಾವನ್, ಎ. ಕೆ. ಎನ್. ರೆಡ್ಡಿ ಮುಂತಾದವರೊಂದಿಗೆ ಗೆಳೆಯ ಜೆ.ಆರ್.ಎಲ್. ಅವರ ಮಗಳ ಮದುವೆ ಸಂದರ್ಭದಲ್ಲಿ ಅಲ್ಲಿಗೆ ಬಂದಿದ್ದರು. ನನ್ನನ್ನು ಕಂಡಾಗ ಅವರಿಗೆ "ಸಾಹಿತ್ಯ ಪಾಠ ಹೇಳುವ ಬದಲು ನಿಘಂಟು ಕಚೇರಿಯಲ್ಲಿ ಇವನಿಗೆ ಏನು ಕೆಲಸ ?" ಎತ್ತಣ ಕೋಗಿಲೆ, ಎತ್ತಣ ಮಾಮರ ? ಎಂದೆನಿಸಿರಬೇಕು. ಇರಲಿ.

ವಾಸು ಸದಾ ಹಸನ್ಮುಖಿ. ಒಳ್ಳೆಯ ಮಾತುಗಾರರು. ಪರಹಿತ ಚಿಂತನೆ ಹಾಗೂ ಎಲ್ಲವನ್ನೂ ಎಲ್ಲರನ್ನೂ ಅತಿ ಭಾವುಕತೆ ಇಲ್ಲದ ವಸ್ತುನಿಷ್ಠೆಯಿಂದ ವೀಕ್ಷಿಸಬಲ್ಲ ಮನೋಭಾವ ಅವರದಾಗಿತ್ತು.

ನಾನು ಅವರನ್ನು ಕಟ್ಟಕಡೆಯಲ್ಲಿ ಕಂಡದ್ದು ಮಹಾಲಕ್ಷ್ಮಿ ಬಡಾವಣೆಯಲ್ಲಿನ ಅವರ ಮನೆಯಲ್ಲಿ. ಆ ಹೊತ್ತಿಗೆ ಸಾಕಷ್ಟು ದೈಹಿಕ ಅನಾರೋಗ್ಯದಿಂದ ಬಳಲಿದ್ದ ಅವರು ನಮ್ಮೊಡನೆ ೨ – ೩ ಗಂಟೆ ಕಾಲ ಮಾತನಾಡಿದರು. ಒಂದು ಬಾರಿಯೂ ಅವರು ತಮ್ಮ ಅನಾರೋಗ್ಯದ ಬಗ್ಗೆ ಮಾತನಾಡಲಿಲ್ಲ – ಮಾತನಾಡಲೂ ಇಷ್ಟಪಡಲಿಲ್ಲ. ಆದರೆ ಬಾಕಿ ಅನೇಕ ವಿಷಯಗಳ ಕುರಿತು ಮಾತು ನಡೆದಿತ್ತು. ಅವರು ನಿಜವಾದ ಅರ್ಥದಲ್ಲಿ ಒಬ್ಬ ಸಜ್ಜನ ವ್ಯಕ್ತಿ. ಡಿ.ವಿ.ಜಿ. ಹೇಳುವ 'ಸುಸಂಸ್ಕೃತ ಮನುಷ್ಯ.'

**ಎಚ್. ಕೆ. ಆರ್. ಮೂರ್ತಿ**

ನಂ. ೧೦೨, 'ಶ್ರಾವಂತಿ' ಪ್ಯಾಲೇಸ್ ಅಪಾರ್ಟ್‌ಮೆಂಟ್ಸ್, ಸಿ. ಆರ್. ಲೇಔಟ್, ೩ನೇ ಅಡ್ಡರಸ್ತೆ , ಜೆ. ಪಿ. ನಗರ ೧ನೇ ಹಂತ, ಬೆಂಗಳೂರು – ೫೬೦ ೦೭೮





# ಭಾಷಾ ಕಲಿಕೆ ಮತ್ತು ತಂತ್ರಜ್ಞಾನ ಅಳವಡಿಕೆ

ಪ್ರೊ|| ಸಿ. ಎಮ್. ತಳವಾರ

ಮಾನವನಿಗೆ ಆಲೋಚನಾ ಶಕ್ತಿಯಿರುವ ಕಾರಣ ಆತ ಬೇರೆಲ್ಲ ಪ್ರಾಣಿಗಳಿಗಿಂತ ಭಿನ್ನವೆನಿಸಿಕೊಂಡಿದ್ದಾನೆ. ಇಂತಹ ಆಲೋಚನಾ ಶಕ್ತಿಯೇ ಸಂವಹನಕ್ಕೆ ದಾರಿಮಾಡಿಕೊಟ್ಟಿರಬೇಕು. ಹಾಗಾಗಿ ತನ್ನ ಅನುಭವಗಳನ್ನು ಭಾವನೆಗಳನ್ನು ವ್ಯಕ್ತಪಡಿಸಿ ಬೇರೊಬ್ಬರ ಮನಸ್ಸನ್ನು ಅರಿಯಲು ಸನ್ನೆ, ಸಂಕೇತ ಇತ್ಯಾದಿಗಳನ್ನು ಬಳಸಿ ಅನಂತರ ಒಂದು ಮಾಧ್ಯಮವನ್ನು ಕಂಡುಕೊಂಡ. ಅದೇ ಭಾಷೆ, ಮಾತನ್ನು ದಾಖಲಿಸುವ ಸಲುವಾಗಿ ಬಂದದ್ದೇ ಬರಹ. ಅದುವರೆಗೂ ಬರಹ ಇರಲಿಲ್ಲವೆಂದಲ್ಲ. ತನ್ನ ಮನಸ್ಸಿನಲ್ಲಿರುವುದನ್ನು ಕರಡು ಚಿತ್ರಗಳ ಮೂಲಕ ಅಭಿವ್ಯಕ್ತಿಪಡಿಸುತ್ತಿದ್ದ. ಆದರೆ ಸಂವಹನ ಮಾಧ್ಯಮವಾದ ಮಾತನ್ನು ಬರಹ ರೂಪಕ್ಕೆ ತಂದದ್ದು ಒಂದು ಅಸಾಮಾನ್ಯ ತಂತ್ರಜ್ಞಾನ ಎನ್ನಬಹುದು.

ಹೀಗೆ ಲಿಪಿಯ ಉಗಮವಾದ ನಂತರ ಅದನ್ನು ದಾಖಲಿಸಲು ವಿಧವಿಧವಾದ ವಸ್ತುಗಳನ್ನು ಬಳಸಲಾಯಿತು. ಅಂದರೆ ಬರೆಯಲು ಬಳಸಲಾದ ವಸ್ತುಗಳು ಹಲವಾರಿವೆ. ಇದಕ್ಕೆ ಕಾರಣ, ಆಯಾ ಪ್ರದೇಶದಲ್ಲಿ ಸಿಗುವ ಬರವಣಿಗೆಯ ಸಾಮಗ್ರಿ, ಅದರ ಪ್ರಮಾಣ, ಬಳಸಲು ಅಗತ್ಯವಾದ ತಾಂತ್ರಿಕ ಜ್ಞಾನ, ಒಂದು ಪ್ರದೇಶದಲ್ಲಿ ಬಿದಿರು ಅನುಕೂಲವಾಗಿ ಕಂಡುಬಂದರೆ ಮತ್ತೊಂದು ಕಡೆ ತಾಳೆಗರಿ, ಇನ್ನೊಂದು ಕಡೆ ಆವೆ ಮಣ್ಣಿನ ಹಲಗೆಗಳು, ಶಿಲೆಗಳು – ಹೀಗೆ ಅನೇಕ ವಸ್ತುಗಳು ಬರವಣಿಗೆಯ ಸಾಮಗ್ರಿಗಳಾದವು. ಈಜಿಪ್ತಿನ ನೈಲ್ ನದಿ ತೀರದಲ್ಲಿ ಬೆಳೆಯುತ್ತಿದ್ದ 'ಪ್ಯಾಪಿರಸ್' ಎಂಬ ಒಂದು ವಿಧದ ಹುಲ್ಲನ್ನು ಸಂಸ್ಕರಿಸಿ ಬರಹಕ್ಕಾಗಿ ಉಪಯೋಗಿಸಲಾಯಿತು. ಈ ಹುಲ್ಲಿನ ಸುರುಳಿಗಳು ಬಹುಬೇಗ ಜೀರ್ಣವಾಗುತ್ತಿದ್ದ ಕಾರಣ ಇನ್ನಿತರ ಸಾಧನ ಸಲಕರಣೆಗಳ ಕಡೆಗೆ ಮನಸ್ಸು ತಿರುಗಿತು. ಕೆಲವು ಪ್ರದೇಶಗಳಲ್ಲಿ ಹದಮಾಡಿದ ಪ್ರಾಣಿಗಳ ಚರ್ಮದ ಮೇಲೆ ಬರೆಯಲಾಯಿತು. ಮರದ ತೊಗಟೆಯ ಮೇಲೆ ಬರೆದರು. ಹೀಗೆ ಪರ್ಯಾಯವಾಗಿ ಬಂದ ಸಲಕರಣೆಗಳೂ ಕೂಡ ಬೇಗ ಹಾಳಾಗುತ್ತಿದ್ದವು. ನಂತರದ ಹಂತದಲ್ಲಿ ಲೋಹದ ತಟ್ಟೆಗಳ ಮೇಲೆ, ಬಟ್ಟೆಯ ಮೇಲೆ ಬರೆಯಲಾಯಿತು. ಹಾಗೆಯೇ ತಾಳೆಗರಿಗಳ ಬಳಕೆ ಬಂದಿತು.

ಆಧುನಿಕ ಸಂದರ್ಭದಲ್ಲಿ ಭಾಷಾ ಕಲಿಕೆ ಮತ್ತು ತಂತ್ರಜ್ಞಾನಗಳ ಅಳವಡಿಕೆಯ ಸಂಬಂಧ ಹಿಂದೆಂದಿಗಿಂತಲೂ ಈಗ ಹೆಚ್ಚಿನ ಪ್ರಮಾಣದಲ್ಲಿ ಕಾಣತೊಡಗಿದೆ. ಅಲ್ಲದೆ ಭಾಷೆಯ ಬಳಕೆಯ ಹೆಚ್ಚಿನ ವಲಯಗಳನ್ನು ತಂತ್ರಜ್ಞಾನ ಈಗ ಪ್ರಭಾವಿಸುತ್ತಿದೆ. ೧೯ನೇ ಶತಮಾನದ ಆದಿಯಲ್ಲಿ ಭಾಷೆಗೆ ಪರಿಚಿತವಾದ ಮುದ್ರಣಯಂತ್ರ ಮತ್ತೊಂದು ತಾಂತ್ರಿಕ ನೆಲೆಯ ಜಿಗಿತಕ್ಕೆ ಕಾರಣವಾಯಿತು. ಏಕೀಕರಣದ ವೇಳೆಗೆ ಮುದ್ರಣದ ನಂತರ ಬಂದ ಕಲ್ಲಚ್ಚಿನ ಬಳಕೆ ಮತ್ತೆ ಭಾಷಾ ಬೆಳವಣಿಗೆಗೆ ಸೇರಿಕೊಂಡ ಹೊಸ ಆವಿಷ್ಕಾರ. ಕಳೆದ ಐವತ್ತು ವರ್ಷಗಳಲ್ಲಿ ಈ ಎಲ್ಲಾ ರೀತಿಯ ಆವಿಷ್ಕಾರಗಳಿಗಿಂತಲೂ ಗುಣಾತ್ಮಕವಾಗಿ ಬೇರೆಯೇ ಆದ ತಾಂತ್ರಿಕತೆ ಜಗತ್ತಿನ ಹಲವು ಭಾಷೆಗಳನ್ನು ಪ್ರಭಾವಿಸಿದಂತೆ ಕನ್ನಡವನ್ನು ಪ್ರಭಾವಿಸಿತು. ವ್ಯಕ್ತಿಯ ಮಾತುಗಳನ್ನು ಬಹುಕಾಲ ಹಿಡಿದಿಡುವ ತಂತ್ರಜ್ಞಾನ ಈಗ ಲಭ್ಯವಿದೆ. ಸಾಮಾನ್ಯವಾಗಿ ಧ್ವನಿ, ಮುದ್ರಣ ಎಂಬ ಮಾತಿನಲ್ಲಿ ಈ ತಾಂತ್ರಿಕತೆಯನ್ನು ಸೂಚಿಸುತ್ತೇವೆ. ಈಗ ಧ್ವನಿ ಸಂಗ್ರಹಕ್ಕಾಗಿ ಹೆಚ್ಚು ಡಿಜಿಟಲ್ ವಿಧಾನದಲ್ಲಿ ಸಂಗ್ರಹಿಸುವ ಅವಕಾಶ ಸಿದ್ಧವಾಗಿದೆ, ಈಗ ಮುದ್ರಿತ ಮಾತನ್ನು ವ್ಯಕ್ತಿಯ ಗೈರು ಹಾಜರಿನಲ್ಲೂ ಬಳಸಬಹುದು. ಅಂದರೆ, ಕೇಳುಗರು ಹೇಳುವವರ ಸಮೀಪದಲ್ಲೇ ಇರಬೇಕೆಂಬ ಷರತ್ತು ಈಗ ಇಲ್ಲವಾಗಿದೆ, ಯಾರು ಎಲ್ಲಿ ಬೇಕಾದರೂ ಆಡಿದ ಮಾತುಗಳನ್ನು ಯಾರು ಎಲ್ಲಿ ಬೇಕಾದರೂ ಕೇಳಿಸಿಕೊಳ್ಳಲು ಇದರಿಂದ ಸಾಧ್ಯ. ಈ ಬಗೆಯ ತಂತ್ರಜ್ಞಾನ ಭಾಷಾ ಕಲಿಕೆಯ ಮೇಲೆ ಮತ್ತು ಸ್ವಲ್ಪ ಮಟ್ಟಿಗೆ ರಚನೆಯ ಮೇಲೆ ಕೂಡಾ ಪರಿಣಾಮವನ್ನು ಬೀರಿದೆ.

ಆಡುಮಾತಿನ ಬಳಕೆಯಲ್ಲಿ ನಾವು ಎರಡು ನೆಲೆಗಳನ್ನು ಗುರುತಿಸಬಹುದು. ಒಂದು : ಕೇಳುಗರು ಮಾತಾಡುವವರ ಮಾತನ್ನು ಮಾತಾಡಿದ ಕೂಡಲೇ ಕೇಳಿಸಿಕೊಳ್ಳುವ ನೆಲೆ, ಎರಡು : ಕೇಳುಗರು ಮತ್ತು ಮಾತಾಡುವವರು ಬೇರೆ ಬೇರೆ ಕಾಲದೇಶಗಳಲ್ಲಿ ಇರುವ ನೆಲೆ, ತಂತ್ರಜ್ಞಾನವು ಈ ಎರಡನೆಯ ನೆಲೆಯ ಬಳಕೆಗೆ ಪೂರ್ಣ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಉದಾಹರಣೆಗೆ, ದೂರವಾಣಿ ಆಡುಮಾತಿನ ಬಳಕೆಯ ವಲಯವನ್ನು ತಾಂತ್ರಿಕತೆ ಅಗಾಧ ಪ್ರಮಾಣದಲ್ಲಿ ಹೆಚ್ಚಿಸಿದೆ ಎನ್ನಬಹುದು. ಸಮೂಹ ಮಾಧ್ಯಮದಲ್ಲಿ ಆಡುಮಾತನ್ನು ಬಳಸುವ ಅಗತ್ಯ ಮತ್ತು ಅವಕಾಶಗಳು ಹೆಚ್ಚಾಗಿವೆ. ಇಷ್ಟಾದರೂ ಆಡುಮಾತಿನ ಈ ಎರಡು ಸಾಧ್ಯತೆಗಳನ್ನು ತಂತ್ರಜ್ಞಾನ ರೂಪಿಸಿಕೊಟ್ಟರೂ ಬಳಸುವವರು ಅದರ ಎಲ್ಲ ಸಾಧ್ಯತೆಗಳನ್ನು ಉಪಯೋಗಿಸಿಕೊಳ್ಳಲು ಸಿದ್ಧರಿದ್ದಾರೆಂದು ತಿಳಿಯುವಂತಿಲ್ಲ. ಕಾರಣ ಅದಕ್ಕೆ ತಕ್ಕ ತರಬೇತಿಗಳು ಭಾಷೆಗಳ ಸಂದರ್ಭದಲ್ಲಿ ರೂಪುಗೊಂಡಿಲ್ಲ ಎನ್ನಬಹುದು. ಭಾಷಾ ಕಲಿಕೆಯಲ್ಲಿ ತಂತ್ರಜ್ಞಾನವು ಬಳಕೆ ರೂಪಗಳನ್ನು ಮತ್ತು ರಾಚನಿಕ ನೆಲೆಗಳನ್ನು ಹಿಂದೆಂದಿಗಿಂತಲೂ ಅಗಾಧ ಪ್ರಮಾಣದಲ್ಲಿ ಬದಲಾಯಿಸಿದೆ ಹಾಗೂ ಸಂರಕ್ಷಣೆಗಳ ಬಗೆಗೆ ತನ್ನ ಕೊಡುಗೆಯನ್ನು ಕಾಲದಿಂದ ಕಾಲಕ್ಕೆ ನೀಡುತ್ತ ಬಂದಿದೆ.

ಕಳೆದ ೫೦ ವರ್ಷಗಳಲ್ಲಿ ಈ ವಲಯದಲ್ಲಿ ನಡೆದ ಮೂರು ಮುಖ್ಯ








ಬದಲಾವಣೆಗಳನ್ನು ನೋಡುವುದಾದರೆ, ಒಂದು : ಬೆರಳಚ್ಚುಯಂತ್ರದ ಬಳಕೆ, ಎರಡು : ವಿದ್ಯುನ್ಮಾನ ಬೆರಳಚ್ಚುಯಂತ್ರದ ಬಳಕೆ, ಮೂರು : ಕಂಪ್ಯೂಟರ್‌ಗಳ ಬಳಕೆ. ಬೆರಳಚ್ಚುಯಂತ್ರವು ಅಕ್ಷರಗಳನ್ನು ಬರೆಯುವುದರ ಬದಲಾಗಿ ಮೂಡಿಸಬಲ್ಲಂತಹ ಒಂದು ಆವಿಷ್ಕಾರ ವಿದ್ಯುತ್‌ಚಾಲಿತ ಬೆರಳಚ್ಚುಯಂತ್ರ. ಇದು ಮುದ್ರಣದಂತೆ ಉತ್ತಮ ವ್ಯವಸ್ಥೆಯನ್ನು ಹೊಂದಿರುವುದು. ಬರಹಕ್ಕೆ ಸಂಬಂಧಿಸಿದಂತೆ ಕಲ್ಲಚ್ಚು ಮುದ್ರಣ ಯಂತ್ರ ಹಾಗೂ ಬೆರಳಚ್ಚುಯಂತ್ರಗಳ ಬಳಕೆ ಭಾಷಾ ಚಟುವಟಿಕೆಗಳಿಗೆ ಪೂರಕವಾಗಿ ಬಂದವು. ಧ್ವನಿಯ ವಿಶ್ಲೇಷಣೆಗೆ ಸಂಬಂಧಿಸಿದಂತೆ, ಧ್ವನಿಯ ಉತ್ಪಾದನೆಯ ಸ್ವರೂಪ ಹಾಗೂ ಅದರ ರಚನೆಯನ್ನು ತಿಳಿಯಲು ಭಾಷಾ ಪ್ರಯೋಗಶಾಲೆಗಳು ಬಂದವು. ಇವು ಮುಖ್ಯವಾಗಿ ಧ್ವನಿ ವಿಶ್ಲೇಷಣೆ ಹಾಗೂ ಭಾಷಾ ಬೋಧನೆಗೆ ನೆರವಾದವು. ಉದಾಹರಣೆಗೆ, ಧ್ವನಿ ವಿಶ್ಲೇಷಣೆಗೆ ಸಂಬಂಧಿಸಿದಂತೆ 'ಆಸಿಲೋಸ್ಕೋಪ್' ಮತ್ತು 'ಸ್ಪೆಕ್ಟ್ರೋಗ್ರಾಮ್' ಎಂಬ ಎರಡು ಯಂತ್ರಗಳು ಬಂದವು. ಇದರಿಂದ ಭಾಷಾ ಕಲಿಕೆಗೆ ಮತ್ತಷ್ಟು ಅನುಕೂಲವಾಯಿತು. ಭಾಷಾ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹ ಹಾಗೂ ದಾಖಲೀಕರಣ ಪ್ರಕ್ರಿಯೆಯಲ್ಲಿ ಅನುಕೂಲವಾಗುವ ಯಂತ್ರಗಳೆಂದರೆ 'ಟೇಪ್‌ರೆಕಾರ್ಡರ್', 'ಮೈಕ್ರೋಫಿಲಂ', 'ಮೈಕ್ರೋಫಿಶ್‌ಗಳು' ಅಧ್ಯಯನದ ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ಆಕರ ಗ್ರಂಥಗಳನ್ನು, ಇನ್ನಿತರ ಮಾಹಿತಿಗಳನ್ನು ಫೋಟೋ ತೆಗೆದು ಮೈಕ್ರೋಫಿಲಂಗಳ ರೂಪದಲ್ಲಿಡಬಹುದಾಗಿದೆ. ಅಂತೆಯೇ ಮೈಕ್ರೋಫಿಶ್ ಕಾರ್ಡುಗಳ ಮೇಲೆ ಅನೇಕ ಪುಟಗಳನ್ನು ದಾಖಲಿಸಿಡಬಹುದು. ಇವುಗಳನ್ನು ಮೈಕ್ರೋಫಿಶ್ ರೀಡರ್‌ಗಳೆಂಬ ಯಂತ್ರಗಳ ಪರದೆಗಳ ಮೇಲೆ ಓದಬಹುದು, ಸಣ್ಣದಾದ ಅಕ್ಷರಗಳು ಈ ರೀಡರ್‌ಗಳನ್ನು ಓದಬಹುದಾದ ಗಾತ್ರದಲ್ಲಿ ಕಾಣುತ್ತವೆ. ಹಾಗಾಗಿ ಇವು ಭಾಷಾಧ್ಯಯನದ ತಂತ್ರಜ್ಞಾನದ ಸಲಕರಣೆಯಾಗಿ ಸಹಾಯಕವಾಗಿವೆ. ಟೇಪ್‌ರೆಕಾರ್ಡರ್‌ಗಳು ಯಾವುದೇ ಧ್ವನಿಯನ್ನು ದಾಖಲಿಸಿಕೊಳ್ಳಬಹುದಾದ ಸಾಧನವಾಗಿವೆ. ಭಾಷಾಧ್ಯಯನಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಕ್ಕೆ ಅಗತ್ಯವಾದ ಉಪಕರಣವಾಗಿದೆ. ಮ್ಯಾಗ್ನೆಟಿಕ್ ಟೇಪ್‌ಗಳ ಮೇಲೆ ಮಾಹಿತಿಯನ್ನು ಹಿಡಿದಿಡಬಹುದಾದ ಇದರ ಹೆಗ್ಗಳಿಕೆ ಎಂದರೆ ದಾಖಲಿಸಿದ ಮಾತನ್ನು ಹಲವು ವರ್ಷಗಳ ಬಳಿಕವೂ ಕೇಳಬಹುದಾಗಿರುವುದು. ಭಾಷಾ ಕಲಿಕೆಯಲ್ಲಿ ಬಳಕೆಯಾಗುವ ಪ್ರಮುಖ ತಂತ್ರಜ್ಞಾನಿಕ ಸಲಕರಣೆಯೆಂದರೆ, ದೃಶ್ಯ, ಶ್ರವ್ಯ ಸಾಧನಗಳು. ಇವುಗಳಲ್ಲಿ ಟಿ.ವಿ., ಟೇಪ್‌ರೆಕಾರ್ಡರ್‌ಗಳು ಮುಖ್ಯವಾದವು. ಭಾಷಾ ಅಧ್ಯಯನದಲ್ಲಿ ಕಂಪ್ಯೂಟರ್ ಬಳಕೆಯ ನಂತರ ಸಹಾಯಕವಾದ ಮುಖ್ಯ ಅಂಶಗಳೆಂದರೆ ವೇಗ ಮತ್ತು ಒಮ್ಮೆಗೇ ಹಲವು ಅಂಶಗಳನ್ನು ಸಂಸ್ಕರಿಸಬಹುದಾದ ಅನುಕೂಲ.

ಭಾಷೆಗಳಿಗೆ ಗಣಕಯಂತ್ರದ ನೆರವು ದೊರೆತ ಮೇಲೆ ಬೇರೆಬೇರೆ ಭಾಷೆಗಳನ್ನು ಗಣಕಕ್ಕೆ ಅಳವಡಿಸಲು ಬೇಕಾದ ಕಾರ್ಯವಾಹಿನಿಗಳು ರೂಪುಗೊಂಡವು. ಉದಾಹರಣೆಗೆ, ಕರ್ನಾಟಕ ಸರ್ಕಾರ ಕನ್ನಡ ಗಣಕ ಪರಿಷತ್ತು ಎಂಬ ಸಂಸ್ಥೆಯು ತಯಾರಿಸಿದ ನುಡಿ ಎಂಬ ಕನ್ನಡ ಕಾರ್ಯವಾಹಿಯನ್ನು ಅಧಿಕೃತಗೊಳಿಸಿದೆ. ಸಂವಹನ ಸಾಧ್ಯತೆ ಮತ್ತು ವೇಗಗಳು ನಿರೀಕ್ಷೆಯನ್ನು ಮೀರಿ ಹೆಚ್ಚುತ್ತಿರುವ ಇಂದಿನ ದಿನಮಾನಗಳಲ್ಲಿ ಲಿಪಿಕರಣ ಒಂದು ಸವಾಲಾಗಿ ಪರಿಣಮಿಸಲಿದೆ. ಅಂತರಜಾಲದಲ್ಲಿ ಬಳಕೆಯಲ್ಲಿರುವ ಇ–ಮೇಲ್ ಸೌಲಭ್ಯವನ್ನು ಕಾಣಬಹುದು; ಇಲ್ಲಿ ದೂರದೂರಿನ ಜನರು ಖಾಸಗಿಯಾಗಿ ಮತ್ತು ಸಾರ್ವಜನಿಕವಾಗಿ ತಮ್ಮ ಪತ್ರಗಳನ್ನು ಸಿದ್ಧಪಡಿಸಿ ರವಾನಿಸುವ ಹೊಸ ತಂತ್ರಜ್ಞಾನವನ್ನು ಎಲ್ಲ ಭಾಷೆಗಳಲ್ಲಿ ಕಾಣಬಹುದಾಗಿದೆ. ನುಡಿ ಕಾರ್ಯವಾಹಿಯಲ್ಲಿ ಕನ್ನಡ ಭಾಷಾ ಸಂದೇಶವನ್ನು ರೋಮನ್ ಲಿಪಿಯಲ್ಲಿ ನಿರೂಪಿಸುತ್ತಾರೆ. ಸಾಮಾನ್ಯವಾಗಿ ಈಗ ಗಣಕಗಳನ್ನು ಬಳಸುತ್ತಿರುವವರು ಕನ್ನಡದ ಜೊತೆಗೆ ಇಂಗ್ಲಿಷ್ ಲಿಪಿ ವ್ಯವಸ್ಥೆಯನ್ನು ಬಲ್ಲವರಾಗಿದ್ದರಿಂದ ಈ ಲಿಪಿಯನ್ನು ಬಳಸುವುದು ಅವರಿಗೆ ಸುಲಭವಾಗಿದೆ. ಈಗಲೂ ರೋಮನ್ ಲಿಪಿಯನ್ನು ಬಳಸಿ ಕನ್ನಡವನ್ನು ಬರೆಯುವ ಅವರ ಯತ್ನ ಮುಂದುವರಿಯುತ್ತಲೇ ಇದೆ. ಉದಾಹರಣೆಗೆ, ಮೊಬೈಲ್ ಫೋನ್‌ಗಳ ಮೂಲಕ ಕಿರು ಸಂದೇಶಗಳನ್ನು ಕಳುಹಿಸುವವರಲ್ಲೂ ಹೆಚ್ಚಾಗಿ ಬಳಕೆಯಲ್ಲಿದೆ. ಈಗ ಹೆಚ್ಚು ಬಳಕೆಯಲ್ಲಿರುವ ಕನ್ನಡ ಕಾರ್ಯವಾಹಿಗಳಲ್ಲಿ ಒಂದಾದ 'ಬರಹ'ದಲ್ಲಿ ವಾಸ್ತವವಾಗಿ ಮೂಲ ದಾಖಲೆಗಳು ರೋಮನ್ ಲಿಪಿಯಲ್ಲೇ ಆಗುತ್ತವೆ. ಆ ನಂತರ ಅದನ್ನು ಕನ್ನಡ ಲಿಪಿಗೆ ಬದಲಾಯಿಸಿಕೊಳ್ಳುವ ಅವಕಾಶವನ್ನು ಆ ಕಾರ್ಯವಾಹಿಯಲ್ಲಿ ರೂಪಿಸಲಾಗಿದೆ.

ತಂತ್ರಜ್ಞಾನದ ಆವಿಷ್ಕಾರದಲ್ಲಿ ಬರೆದ ಪಠ್ಯವನ್ನು ಗಣಕಕ್ಕೆ ಅಳವಡಿಸಿದಾಗ ಅದನ್ನು ಓದುವ ಕಾರ್ಯವಾಹಿಗಳು ಸಿದ್ಧವಾಗುತ್ತವೆ. ಇಲ್ಲಿ ಓದುವ ಅಂದರೆ ಓದಿ ಹೇಳುವ ಎಂಬರ್ಥ. ಇಂಗ್ಲಿಷ್‌ನಂತಹ ಭಾಷೆಯಲ್ಲಿ ಇದು ಈಗ ಬಳಕೆಯಲ್ಲಿದೆ. ಹಾಗೆಯೇ ನಾವು ಗಣಕಕ್ಕೆ ಮಾತನ್ನು ಕೂಡಿಸಿದರೆ ಅದು ಒಂದು ಓದಿದ ಪಠ್ಯವಾಗಿ ಪರಿವರ್ತನೆ ಆಗುವ ತಾಂತ್ರಿಕತೆಯೂ ರೂಪುಗೊಂಡಿದೆ. ಇದು ಇನ್ನೂ ಪ್ರಾದೇಶಿಕ ಭಾಷೆಗಳಲ್ಲಿ ಅಭಿವೃದ್ಧಿಗೊಳ್ಳಬೇಕಾಗಿದೆ. ಭಾಷೆ ಮತ್ತು ತಂತ್ರಜ್ಞಾನದ ಸಂಬಂಧಗಳ ಒಂದು ನೆಲೆಯನ್ನು ನಾವು ಗಮನಿಸುವುದಾದರೆ, ಇನ್ನೂ ಹಲವು ನೆಲೆಗಳಲ್ಲಿ ತಂತ್ರಜ್ಞಾನ ಪ್ರಾದೇಶಿಕ ಭಾಷೆಗಳಿಗೆ ನೆರವಾಗಬಹುದಾಗಿದೆ. ಉದಾಹರಣೆಗೆ, ಭಾಷೆಯ ಕಲಿಕೆಯ ವಲಯದಲ್ಲಿ ತಂತ್ರಜ್ಞಾನ ಈಗ ಹೊಸ ಸಾಧ್ಯತೆಗಳನ್ನು ತೆರೆದಿದೆ. ವಯಸ್ಕ ಭಾಷಾ ಕಲಿಕೆಗೆ ಅನುಕೂಲವಾಗುವ ತಾಂತ್ರಿಕ ಆವಿಷ್ಕಾರಗಳು ಜಗತ್ತಿನ ಹಲವು ಭಾಷೆಗಳಿಗೆ ಲಭ್ಯವಿವೆ. ಮುಖ್ಯವಾಗಿ ವಯಸ್ಕ ಭಾಷಾ ಕಲಿಕೆಗೆ ಅಗತ್ಯವಾದ ಕೆಲವು ಷರತ್ತುಗಳನ್ನು ತಾಂತ್ರಿಕತೆಯ ನೆರವಿನಿಂದ ಈಗ ಪೂರೈಸಬಹುದಾಗಿದೆ. ಭಾಷಾ ಮಾದರಿಗಳ ವಿಚಾರಣೆಗಳ ಧ್ವನಿ – ಲೇಖನ, ಅದನ್ನು ವ್ಯಕ್ತಿಗತವಾಗಿ ಕೇಳಿ ಪುನರುಚ್ಚರಿಸಿ, ವಿಕಲ್ಪಗಳನ್ನು ಸರಿಪಡಿಸಿಕೊಳ್ಳಲು ಅನುಕೂಲ ಮಾಡಿಕೊಡುವ ಉಪಕರಣಗಳು, ಪಾಠ ಹೇಳುವವರ ಕನಿಷ್ಠ ಭಾಗವಹಿಸುವಿಕೆಗೆ ಕಾರಣವಾಗುವ ಹೆಚ್ಚು ಕಡಿಮೆ ಸ್ವಯಂಪೂರ್ಣವಾದ ಬೋಧನಾ ಸಾಮಗ್ರಿಯನ್ನು ದೃಕ್‌ಶ್ರವಣ ರೂಪದಲ್ಲಿ ಸಿದ್ಧಪಡಿಸುವುದು ಇವೆಲ್ಲ ಕನ್ನಡದಲ್ಲೂ ಈಗ ಸಾಧ್ಯವಾಗಿದೆ. ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ತನ್ನ ಒಂದು ಮಹತ್ವಾಕಾಂಕ್ಷೆ ಯೋಜನೆಯಲ್ಲಿ ಹೀಗೆ ಕನ್ನಡವನ್ನು ಅಂತರಜಾಲದ ಮೂಲಕ ಕಲಿಸುವ ವ್ಯವಸ್ಥೆಯನ್ನು ಮಾಡುತ್ತಿದೆ. ಇವೆಲ್ಲವೂ ತಾಂತ್ರಿಕತೆಯ ಆವಿಷ್ಕಾರ ಭಾಷೆಯ ಅಭಿವೃದ್ಧಿಗೆ ನೆರವಾಗುವ ನೆಲೆಗಳಾಗಿವೆ.

ಇಷ್ಟಲ್ಲದೇ ಈಗ ತರಗತಿಗಳ ಬೋಧನೆಯಲ್ಲಿ ಕೆಲವು ತಂತ್ರಜ್ಞಾನಗಳನ್ನು ಅಳವಡಿಸಿ ಬೋಧಿಸುವ ವ್ಯವಸ್ಥೆ ಮಾಡಲಾಗಿದೆ. ಉದಾಹರಣೆಗೆ, ಎಲೆಕ್ಟ್ರಾನಿಕ್ ಬೋರ್ಡ್, ಪವರ್‌ಪಾಯಿಂಟ್ ಪ್ರೆಸೆಂಟೇಶನ್, ಓ.ಎಚ್.ಪಿ. ಇವುಗಳ ಮೂಲಕ ಭಾಷಾ ಕಲಿಕೆ ಇನ್ನೂ ಸರಳವಾಗಿದೆ. ಈಗಾಗಲೇ ಕಂಪ್ಯೂಟರ್ ತಂತ್ರಜ್ಞಾನದಿಂದ ದೇಶದ ಬೇರೆಬೇರೆ ಭಾಷೆಗಳ ಅಕ್ಷರ ಪದಗಳನ್ನು, ಶಬ್ದಕೋಶಗಳನ್ನು ಅಳವಡಿಸಿದ್ದಾರೆ. ಉದಾಹರಣೆಗೆ, ಕರ್ನಾಟಕ ಸರ್ಕಾರವು ತನ್ನ ಭೂಮಿ ಯೋಜನೆಯಲ್ಲಿ ಕನ್ನಡ ಅಕ್ಷರ ಪದಗಳನ್ನು, ಶಬ್ದಕೋಶಗಳನ್ನು ಅಳವಡಿಸಿದ್ದಾರೆ. ಇಷ್ಟಲ್ಲದೇ ಭಾಷೆಯ ಹಲವು ಉಪಯೋಗಿ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಲು ಅವಕಾಶವಿದೆ. ಅಲ್ಲದೇ ಜಿ – ಮೇಲ್, ಫೋಟೋ ಮೆಸೇಜಿಂಗ್, ಇ – ಮೇಲ್ ಇವುಗಳಲ್ಲಿ ಮುಖ್ಯವಾದವು. ಇವುಗಳ ಸಂಕೀರ್ಣತೆ ಮತ್ತು ಖರ್ಚಿನ ಕಾರಣ ಇವು ಸಾಮಾನ್ಯ ಜನರಿಗೆ ಲಭ್ಯವಾಗದೇ ಹೋದರೂ ಇದು ತಂತ್ರಜ್ಞಾನ ಕ್ಷೇತ್ರದಲ್ಲಿ ಭಾಷೆಯನ್ನು ಅವಲಂಬಿಸಿರುವ ಪ್ರಮುಖ ಸಂದೇಶವಾಹಕಗಳಾಗಿ ಕಾರ್ಯ ನಿರ್ವಹಿಸುತ್ತವೆ. ಇಂದು ಇ – ಮೇಲ್‌ನಿಂದ ಭಾಷಾ ಚಟುವಟಿಕೆ ತೀವ್ರಗೊಂಡಿದೆ. ಇದು ಶೈಕ್ಷಣಿಕರಂಗದಲ್ಲಿ ಹಾಗೂ ಸಾಮಾನ್ಯ ಸಂವಹನದ ದೃಷ್ಟಿಯಿಂದ ಬಹುವಾಗಿ ಬಳಕೆಯಲ್ಲಿದೆ. ಇದು ಮುಖ್ಯವಾಗಿ ಭಾಷಿಕ ಚಟುವಟಿಕೆಗಳಿಗಾಗಿಯೇ ರೂಪಿಸಿದಂತಾಗಿದೆ. ಹಾಗಾಗಿ ಇಂದು ವಿಶ್ವದಲ್ಲಿ ನಡೆಯುವ ಯಾವುದೇ ಆವಿಷ್ಕಾರ ಅಥವಾ ಚರ್ಚೆ, ಸಂವಾದ, ಪ್ರಬಂಧಗಳು ಯಾವುದೇ ಮೂಲೆಗಾದರೂ ಕೂಡಲೇ ತಲುಪುವುದು ಸಾಧ್ಯವಾಗಿ ಜ್ಞಾನಕ್ಷೇತ್ರ ವಿಸ್ತಾರಗೊಳ್ಳಲು ಸಹಾಯಕವಾಗಿದೆ. ಇತ್ತೀಚಿನ ಆಧುನಿಕ ತಂತ್ರಜ್ಞಾನ ಬೆಳವಣಿಗೆಯಿಂದಾಗಿ ಮಾತು ಮತ್ತು ಬರವಣಿಗೆ ಇವೆರಡರ ಮಧ್ಯದ ಭಾಷೆಯೊಂದು ರೂಪುಗೊಂಡಿದೆ ಇದೇ ಎಸ್.ಎಂ.ಎಸ್. ಭಾಷೆ. ಈ ಭಾಷೆ ಸಮಯ ಮತ್ತು ಜಾಗದ ಕಾರಣದಿಂದ ಸಂಕುಚಿತಗೊಂಡು ಹೊಸ ರೂಪ ಪಡೆಯುತ್ತಿದೆ. ಈ ಭಾಷೆ ಕೇವಲ ಮೊಬೈಲುಗಳಿಗೆ ಮಾತ್ರ ಸೀಮಿತವಾಗದೆ ಇಂಟರ್‌ನೆಟ್‌ಗೂ ಕೂಡ ವಿಸ್ತರಿಸಿಕೊಂಡಿದೆ ಎಂದು ಹೇಳಬಹುದು. ಒಟ್ಟಿನಲ್ಲಿ ಆಧುನಿಕ ಸಂದರ್ಭದಲ್ಲಿ ಭಾಷಾ ಕಲಿಕೆ ಮತ್ತು ತಂತ್ರಜ್ಞಾನಗಳ ಅಳವಡಿಕೆ ಸಂಬಂಧ ಹಿಂದೆಂದಿಗಿಂತಲೂ ಈಗ ಹೆಚ್ಚಿನ ಪ್ರಮಾಣದಲ್ಲಿ ಪ್ರಭಾವ ಬೀರಿದೆ ಎನ್ನಬಹುದು.

**ಪ್ರೊ|| ಸಿ. ಎಮ್. ತಳವಾರ**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು
ರಾಮದುರ್ಗ, ಬೆಳಗಾವಿ ಜಿಲ್ಲೆ









## ಪ್ರತಿಭಾನ್ವಿತ ಕಲಾವಿದೆ

# ಶ್ಯಾಮಲಾ ಗುರುಪ್ರಸಾದ್



ಬಹುಮುಖ ಪ್ರತಿಭೆಯ ಶ್ಯಾಮಲಾ ಗುರುಪ್ರಸಾದ್ ಹುಟ್ಟಿದ್ದು ಚೆನ್ನೈನಲ್ಲಿ. ಪ್ರಾಥಮಿಕ ವಿದ್ಯಾಭ್ಯಾಸವೆಲ್ಲ ಬೆಂಗಳೂರಿನಲ್ಲಿಯೇ. ಈಕೆ ಬೆಂಗಳೂರಿನ ಎ. ಎನ್. ಸುಬ್ಬರಾವ್ ಕಲಾ ಶಾಲೆಯ ವಿದ್ಯಾರ್ಥಿನಿ. ಇವರ ಕಲಾಚಿತ್ರಗಳು ನೈಜ ಬದುಕಿಗೆ ಹತ್ತಿರವಾಗಿರುವುವು. ಇವರ ಕಲಾಚಿತ್ರ ಪ್ರದರ್ಶನವು ಮೇ ೨೦೦೭ರಲ್ಲಿ ಚಿತ್ರಕಲಾ ಪರಿಷತ್ತಿನಿಂದ ಪ್ರಾರಂಭಗೊಂಡಿದೆ. ನಂತರ ಪ್ರತಿ ವರ್ಷವೂ ನಿರಂತರವಾಗಿ ಹುಬ್ಬಳ್ಳಿ, ಧಾರವಾಡ, ಮಂಗಳೂರು ಮತ್ತು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶನಗೊಂಡಿದೆ. ಅಷ್ಟೇ ಅಲ್ಲದೆ ಕೊಯಂಬತ್ತೂರು, ನವದೆಹಲಿ ಮತ್ತು ಇತ್ತೀಚೆಗಷ್ಟೇ ಮಾರ್ಚ್ ೨೦೧೪ರಲ್ಲಿ ಗೋವಾದ ಕಲಾ ಅಕಾಡೆಮಿ, ಪಣಜಿಯಲ್ಲಿ ಸಹ ಪ್ರದರ್ಶನಗೊಂಡಿದೆ.









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / MAY 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)